ಪ್ರತಿಭಾ ಗ್ರಂಥಮಾಲೆ : ವರುಷ · ೨೬, ಕಿರಣ .

# ಮಂಜಿನ - ಜೀವನ

( ಸ್ವತಂತ್ರ ಸಾಮಾಜಿಕ ಕಾದಂಬರಿ )

ರಮಾಕಾಂತ

ಮಾರಾಟಗಾರರು :

ಸಮಾಜ ಪುಸ್ತಕಾಲಯ : ಶಿವಾಜಿ ಬೀದಿ : ಧಾರವಾಡ-೧

ಸಂಪಾದಕರು :

ಭಾಲಚಂದ್ರ ಘಾಣೇಕರ

ಪ್ರಕಾಶಕರು :

ಮನೋಹರ ಘಾಣೇಕರ,

ಬಿ. ಎ., ಬಿ. ಕಾಂ.

ಪ್ರತಿಭಾ ಗ್ರಂಥಮಾಲೆ, ಧಾರವಾಡ

ಪ್ರಥಮ ಮುದ್ರಣ :

೧೫ ಅಗಸ್ಟ್ ೧೯೬೪

ಬೆಲೆ : ರೂ. ೩.೦೦

*

ಮುದ್ರಕರು :

ರವೀಂದ್ರ ಘಾಣೇಕರ, L. P. T.

ಪ್ರತಿಭಾ ಮುದ್ರಣ, ಧಾರವಾಡ

## ಓದಿಗೆ ಮೊದಲು ....

ಪ್ರತಿಭಾ ಗ್ರಂಥಮಾಲೆಯ ಇಪ್ಪತ್ತಾದನೆಯ ವರುಷದ ಪ್ರಥಮ ಕಿರಣವಾಗಿ ಪ್ರಕಟವಾಗುತ್ತಿರುವ ಈ ಸುಂದರ ಸಾಮಾಜಿಕ ಕಾದಂಬರಿಯನ್ನು ನಿಮಗೆ ಸಮರ್ಪಿಸಲು ಸಂತೋಷಿಸುತ್ತೇವೆ.

ಈ ಕಾದಂಬರಿಯ ಕರ್ತೃ ಶ್ರೀ ರಮಾಕಾಂತರು ಖ್ಯಾತ ಲೇಖಕರು. ಮೊದಲು ಅವರು ಬರೆದ 'ದೇವರೆಲ್ಲಿ' ಕಾದಂಬರಿ ನಮ್ಮ ಮಾಲೆಯಲ್ಲಿ ಪ್ರಕಟವಾದಾಗ ಕನ್ನಡಿಗರ ಮೆಚ್ಚುಗೆಗೆ ಪಾತ್ರವಾಯಿತು. ಪ್ರಸ್ತುತ ಕಾದಂಬರಿಯೂ ಜನಾನುರಾಗಕ್ಕೆ ಪಾತ್ರವಾದೀತೆಂಬ ಭರವಸೆಯಿದೆ.

ಈ ಕೃತಿಯನ್ನು ನಮಗೊಪ್ಪಿಸಿದ ಶ್ರೀ ರಮಾಕಾಂತರಿಗೂ, ಮುಖಚಿತ್ರವನ್ನು ಅರ್ಥವತ್ತಾಗಿ ಬರೆದುಕೊಟ್ಟ ಚಿತ್ರಕಾರರಾದ ಶ್ರೀ ಎಸ್. ವಿ. ಪಟ್ಟಣಕೋಡಿ ಅವರಿಗೂ ನೆನಕೆಗಳು.

—ಪ್ರಕಾಶಕ



ಮನಸ್ಸಿನಲ್ಲುದ್ಭವಿಸುವ ಆಶಾತರಂಗಗಳೇ ಮಾನವನ ಜೀವನಕ್ಕೆ
ವರ್ಣರಂಜಿತ ಚಿತ್ರವನ್ನು ಬರೆದು, ಜೀವನವು ಸುಖಮಯವಾಗಬಹು
ದೆಂಬ ಕಲ್ಪನೆಯ ಹರಿಗೋಲನ್ನು ಮಾಡಿ, ಪ್ರತಿಯೊಂದು ವ್ಯಕ್ತಿಯನ್ನು
ದಂಡೆಯಿಲ್ಲದ ಪ್ರವಾಹದಲ್ಲಿ ತೇಲಿಬಿಡುವವು. ಆಶೆಗಳಿಂದ ಹುಟ್ಟುವ
ಕೃತಿಗಳೇ ಮಾನವನ ಜೀವನದ ವ್ಯಾಪ್ತಿ. ಈ ವ್ಯಾಪ್ತಿಗಳ ಸಂಘರ್ಷಣ
ದಿಂದಲೇ ಜೀವನದಲ್ಲಿ ಕೋಲಾಹಲ.

ವೇದವತಿಯು ದೇವಮಾನವಳಲ್ಲ, ಮಾನವಳವಳು; ಜುಗುಲ
ಕಿಶೋರಿಯೆಂಬ ಆಸ್ಪತ್ರೆಯಲ್ಲಿ ಮುಖ್ಯದಾಯಿಯು. ಅವಳ ಮಂದಸ್ಮಿತ
ಮೊಗದ ಮೇಲೆ ಜೀವನದಾಘಾತಗಳು ತಮ್ಮ ಕುರುಹುಗಳನ್ನು ಬಿಟ್ಟಿದ್ದು
ಸೂಕ್ಷ್ಮ ದೃಷ್ಟಿಯಿಂದ ನಿರೀಕ್ಷಿಸಿದರೆ ಒಡೆದು ತೋರುತ್ತಿದ್ದವು. ವೇದ
ವತಿಯು ನಡು ಪ್ರಾಯದ ಹೆಂಗಸು. ದೇಹ ಕೃಶವಾಗಿದ್ದರೂ, ಮೈಬಣ್ಣ
ಕಂದಿದ್ದರೂ ಅವಳ ದೇಹದ ಸೊಬಗು ಕಾಂತಿಗುಂದಿದ್ದಿಲ್ಲ. ಆ ಆಸ್ಪತ್ರೆ
ಯಲ್ಲಿ ಅವಳನ್ನೆಲ್ಲರೂ ತಾಯಿಯೆಂದು ತಿಳಿದುಕೊಂಡು ಕರೆಯುತ್ತಿ
ದ್ದರು. ಅನುಕಂಪದ ನಿಧಿ; ದಯೆಯ ರಾಶಿ, ಸಂತೈಸುವ ಅಮೃತವಾಣಿ,
ದುಃಖಿಗಳ ಕಾಮಧೇನು, ಎಂದು ವೇದವತಿಯ ಪರಿಚಯಸ್ಥರೆಲ್ಲರೂ
ಅನ್ನುವರು; ಅವಳನ್ನು ತಿಳಿದುಕೊಂಡಿರುವರು.

ವೇದವತಿಯು ವಿವಾಹಿತಳೋ, ಅವಿವಾಹಿತಳೋ ಎಂಬ ವಿಷಯ
ಅವಳ ಪರಿಚಯಸ್ಥರಿಗೇ ಸಂದಿಗ್ಧವಾಗಿತ್ತು. ಹಣೆಯ ಮೇಲೆ ಕುಂಕುಮ
ಬೊಟ್ಟು. ಕೊರಳಲ್ಲಿ ಸದಾ ಮಾಂಗಲ್ಯಧಾರಣವಿಲ್ಲ. ವರುಷಕ್ಕೊಂದು
ಸಲ ಇಲ್ಲವೆ ಎರಡು ಸಲ ಮಾಂಗಲ್ಯಧಾರಣ ಮಾಡುತ್ತಿದ್ದಳು. ಮಾಂಗಲ್ಯ
ಧಾರಣ ಮಾಡಿದ ದಿವಸ ಜನರಿಗೆ ಧಾರಣಮಾಡಿದ್ದು ಗೊತ್ತಾಗಬಾರದೆಂದು

ತನ್ನ ಸೀರೆಯ ಸೆರಗಿನಿಂದ ಮುಚ್ಚಿಕೊಳ್ಳುತ್ತಿದ್ದಳು. ಹೀಗೆ ವೇದವತಿಯು ಮಾಡುವದು ಗೊತ್ತಿದ್ದವರು ಆಸ್ಪತ್ರೆಯಲ್ಲಿ ಒಬ್ಬಿಬ್ಬರು ಮಾತ್ರ, ಅವಳ ವಿಶ್ವಾಸಕ್ಕೆ ಪಾತ್ರರಾಗಿದ್ದರು. ಅವರು ಅವಳನ್ನು ದೇವಿಯೆಂದು ತಿಳಿದು ಪೂಜ್ಯಭಾವನೆಯಿಂದ ನೋಡತಕ್ಕವರು. ಆಸ್ಪತ್ರೆಯಲ್ಲಿ ಅವಳ ಜೀವನವು ನಿಷ್ಕಲಂಕ.

ದಿನದ ಕಾರ್ಯಕ್ರಮದಂತೆ ಅವಳು ಇಂದು ಸಾಯಂಕಾಲಕ್ಕೆ ತನ್ನ ಪ್ರಾಕಾರದಲ್ಲಿದ್ದೆಲ್ಲ ರೋಗಿಗಳನ್ನು ನೋಡಿಕೊಂಡು ಅವರ ಯೋಗಕ್ಷೇಮ ಕೇಳಿಕೊಂಡು ಹೋಗಬೇಕೆಂದು ಆಸ್ಪತ್ರೆಗೆ ಬಂದಿದ್ದಳು. ಎಲ್ಲ ದಾಯಿಗಳು ತಮ್ಮ ತಮ್ಮ ಕೋಣೆಗಳಲ್ಲಿಯ ರೋಗಿಗಳ ಸ್ಥಿತಿಗತಿಗಳನ್ನು ಅರುಹಲು ವೇದವತಿಯ ಮಾರ್ಗ ನಿರೀಕ್ಷಿಸುತ್ತಿದ್ದರು. ರೋಗಿಗಳ ಸ್ಥಿತಿಗಳನ್ನೂ ಅವರ ಸುಖ ದುಃಖಗಳನ್ನೂ ಅರಿತುಕೊಳ್ಳಲು, ಕೇಳಿಕೊಳ್ಳಲು ವೇದವತಿಯು ತನ್ನ ಇಪ್ಪತ್ತು ವರ್ಷಗಳ ಸೇವೆಯಲ್ಲಿ ಒಂದು ದಿನವಾದರೂ ತಪ್ಪಲಿಲ್ಲ. ಏನೋ ಒಂದು ವಿಚಾರದಿಂದ ಅವಳ ಮೊಗವಿಂದು ಗಂಭೀರ ಮುದ್ರೆಯನ್ನು ತಾಳಿತ್ತು.

ರೋಗಿಗಳನ್ನು ಪರೀಕ್ಷಿಸುತ್ತ ಅವರ ಸುಖದುಃಖಗಳನ್ನು ಆಸ್ಥೆಯಿಂದ ಕೇಳುತ್ತ ವೇದವತಿಯು ಕೊನೆಯ ಕೋಣೆಗೆ ಬಂದಳು. ಅಲ್ಲಿದ್ದ ದಾಯಿ ರಂಜನಿ ರೋಗಿಗಳ ಸಮಾಚಾರವನ್ನು ಅರುಹಿದಳು. ಅಲ್ಲಿದ್ದ ರೋಗಿಯು ವೇದವತಿಯ ಬರವನ್ನು ಕಂಡು ಕರುಣಾಕ್ರಂದದಿಂದ ' ತಾಯೀ, ಎಂದು ಕೂಗಿದನು. ಆತನ ದೀನ ವಾಣಿಯ ಕೂಗನ್ನು ಕೇಳುತ್ತಲೇ ವೇದವತಿಯು ಆತನ ಮಂಚದ ಕಡೆಗೆ ಧಾವಿಸಿ ಕರುಣಾಸ್ಪದ ದೃಷ್ಟಿಯಿಂದ ನೋಡಿದಳು. ಅವನ ಮ್ಲಾನ ಮುಖಕಂಡು ಅವಳ ಹೃದಯವು ಕರಗಿ ನೀರಾಯಿತು. ಆತನ ವೇದನೆಯ ಕೂಗನ್ನು ಕೇಳಿ ಅವನನ್ನು ಅನುಕಂಪದಿಂದ ಸಂತೈಸಹತ್ತಿದಳು. " ದೇವರನ್ನು ನೆನೆ; ಎಲ್ಲವೂ ಸರಿಯಾಗುವದು " ಎಂದು ಹೇಳಿದಳು, ಬಡತನದ ಬೇಗೆಯಿಂದ ಬೆಂದ ಜೀವ; ಮೇಲಾಗಿ ಗಂಡನು ರೋಗಗ್ರಸ್ತನಾಗಿ ಕಾಲನ ದವಡೆಯಲ್ಲಿ ಸಿಲುಕಿರುವನೆಂಬ ಚಿಂತೆಯ ಜ್ವಾಲೆ, ಬಡತನದ ಭೂತಕ್ಕೆ ಮೂರು ನಾಲ್ಕು ಚಿಕ್ಕ ಮಕ್ಕಳು; ಒಂದು ವಾರದಿಂದ ಹೊಟ್ಟೆಯಲ್ಲಿ ಒಂದಗಳು

ಅನ್ನವಿಲ್ಲ— ಇಂತಹ ಸ್ಥಿತಿಯಲ್ಲಿದ್ದ ರೋಗಿಯ ಹೆಂಡತಿಯು ಆತನ ಮಂಚದ ಸಮೀಪದಲ್ಲಿಯೇ ಕುಳಿತಿದ್ದಳು. ಈ ಹೃದಯದ್ರಾವಕ ಚಿತ್ರವನ್ನು ಕಂಡು ರೋಗಿಯು ವ್ಯಾಕುಲಗೊಂಡು ತಳಮಳಿಸುತ್ತಿದ್ದನು. ಹೆಂಡರು ಮಕ್ಕಳ ಕಡೆಗೆ ಬೊಟ್ಟು ಮಾಡಿ ರೋಗಿಯು ಅವರನ್ನು ವೇದವತಿಗೆ ತೋರಿಸಿದನು.

ರೋಗಿಯ ಹತ್ತಿರ ಕುಳಿತ ವೇದವತಿಯು ಅವನ ಮೈಮೇಲೆ ಕೈಯಾಡಿಸುತ್ತ "ಧೈರ್ಯಗುಂದ ಬೇಡ; ಇನ್ನೆರಡು ದಿನಗಳಲ್ಲಿ ನಿನಗೆ ನೆಟ್ಟಗಾಗುವದು; ದೇವರು ದಯಾಸಾಗರನು; ನಿಮ್ಮ ದುಃಖವನ್ನು ಪರಿಹಾರ ಮಾಡುವನು" ಎಂದು ಮೃದುದನಿಯಿಂದ ಮಾತನಾಡಿದಳು.

"ಮನೆಯವರ ಜಡ್ಡು ಕಂಡು ನನ್ನ ಕೈಕಾಲುಗಳೇಳದಾಗಿವೆ. ಮನೆಯಲ್ಲಿ ದುಡಿಯುವವರೊಬ್ಬರೇ. ದೇವರು ನನ್ನ ಕಣ್ಣು ಮುಚ್ಚಿದರೆ ನೆಟ್ಟಗಾಗುವದು" ಎಂದು ರೋಗಿಯ ಹೆಂಡತಿಯು ಉಸಿರುಗರೆದಳು.

ಅವಳ ಹಾಗೂ ಅವಳ ಚಿಕ್ಕ ಮಕ್ಕಳ ಮ್ಲಾನ-ದೀನವದನಗಳನ್ನು ಕಂಡು ವೇದವತಿಯು ಕಣ್ಣಿನಿಂದೆರಡು ಹನಿಗಳುದುರಿದವು. ತನ್ನಲ್ಲಿದ್ದ ಹತ್ತು ರೂಪಾಯಿ ನೋಟನ್ನು ತೆಗೆದು ಅವಳ ಕೈಯಲ್ಲಿಟ್ಟು ನಿಮ್ಮ ಮನೆಯವರಿಗೆ ಗುಣವಾಗುವವರೆಗೆ ಹೊಟ್ಟೆಯನ್ನು ಸಾಗಿಸೆಂದಳು ವೇದ-ವತಿಯು.

"ಬೇಡವಮ್ಮಾ ರೂಪಾಯಿ ಬೇಡ. ನಿಮ್ಮುಪಕಾರ ಬಹಳವಾಗಿದೆ. ಎಷ್ಟು ಹೇಳಿದರೂ ಕಡಿಮೆ. ಅವರ ಜಡ್ಡು ನೆಟ್ಟಗಾಗಿ ಜೀವದ ಈ ಕುತ್ತಿನಿಂದ ಪಾರಾದರೆ ಸಾಕು. ನನಗೆ ಸಾವಿರ ರೂಪಾಯಿ ಕೊಟ್ಟಂತೆ" ಎಂದು ನುಡಿದಳು ರೋಗಿಯ ಹೆಂಡತಿ.

"ಏನೂ ಅನ್ಯಥಾ ತಿಳಿದುಕೊಳ್ಳಬೇಡ; ತೆಗೆದುಕೊಳ್ಳು. ಬೆಳೆಯುವ ಮಕ್ಕಳನ್ನು ಉಪವಾಸದಿಂದ ಹಂಬಲಿಸಿ ಘಾಸಿಮಾಡಬೇಡ. ನಿನ್ನ ಗಂಡನು ಕೆಲವು ದಿನಗಳಲ್ಲಿಯೇ ಗುಣಪಟ್ಟು ಮನೆಗೆ ಬರುವನು. ಚಿಂತೆ ಬೇಡ" ಎಂದು ವೇದವತಿಯು ಹೇಳಿ ತಿರುಗಿ ಕೊಟ್ಟ ನೋಟನ್ನು ಮತ್ತೆ ಅವಳಿಗೆ ಕೊಟ್ಟಳು.

ಏನೋ ನೆನಪಾಗಿ ರೋಗಿಯು ಬದಿಯಲ್ಲಿಂದೆದ್ದು ಹೊರಡಲು

ಕೋಣೆಯ ಬಾಗಿಲದ ಕಡೆಗೆ ನಡೆದಳು. ಅವಳು ಹೋಗುವದನ್ನು ಕಂಡು ಸಮೀಪದ ಮಂಚದ ಮೇಲೆ ಮಲಗಿಕೊಂಡಿದ್ದ ಬಾಲಕನು ಗಳಗಳನೆ ಅಳುತ್ತ "ಅಮ್ಮಾ, ನನ್ನನ್ನು ಕಾಣದೆ ಹೋಗುವಿಯಾ? ನನ್ನ ಬದಿಯಲ್ಲಿ ಒಂದೆರಡು ನಿಮಿಷ ಕುಳಿತುಕೊಳ್ಳುವದಿಲ್ಲವೇ? ನನ್ನ ಸ್ಥಿತಿಯನ್ನು ಕೇಳುವದಿಲ್ಲವೇ?" ಎಂದು ನುಡಿದನು. ಬಾಲಕನ ಕರೆಯನ್ನು ಕೇಳಿ ವೇದವತಿಯು ಥಟ್ಟನೆ ತಿರುಗಿ ಬಾಲಕನ ಮಂಚದ ಮೇಲೆ ಕುಳಿತು ಆತನ ತಲೆಯ ಮೇಲೆ ತನ್ನ ಕೈಯಾಡಿಸುತ್ತ, ಏನೋ ವಿಚಾರದಲ್ಲಿ ನಿನ್ನನ್ನು ಮರೆತು ಬಿಟ್ಟು ಹೊರಟಿದ್ದೆನೆಂದು ನುಡಿದಳು.

"ಅಮ್ಮಾ, ನಿನ್ನ ಕೈ ಎಷ್ಟು ಮೃದುವಾಗಿರುವದು! ನೀನು ತಲೆಯ ಮೇಲೆ ಕೈಯಾಡಿಸಹತ್ತಿದರೆ ನನಗೆ ಕಣ್ಣು ಮುಚ್ಚಿ ಜಂಪು ಬರುವದು"

"ನಿನ್ನ ಕೈ ನೋವು ಹೇಗಿರುವದು?" ವೇದವತಿಯು ಕೇಳಿದಳು.

"ನೋವು ಸ್ವಲ್ಪ ಕಡಿಮೆಯಿರುವದು. ಮತ್ತೆ ನನಗೆ ಕಿರಕೇಟ ಆಡಲು ಕೈ ಬರುವದೋ" ಎಂದು ದೈನ್ಯದಿಂದ ಕೇಳಿದನು ಬಾಲಕನು.

"ಆಡಲಿಕ್ಕೆ ಬರುವದಿಲ್ಲೆಂದು ಯಾರು ಹೇಳಿದರು?"

"ಮುಂಜಾನೆ ಬಂದ ಡಾಕ್ಟರರು ಹೇಳಿದರು."

"ಅವರು ನಿನ್ನನ್ನು ನೆಟ್ಟಗೆ ನೋಡದೆ ಹೇಳಿದಂತೆ ತೋರುವದು. ನಿನ್ನ ಕೈ ತೋರಿಸು, ನೋಡುವೆ" ಎಂದು ವೇದವತಿಯು ಹೇಳಿದಳು.

ಬಾಲಕನು ಆನಂದಭರಿತನಾಗಿ ತನ್ನ ಕೈಯನ್ನು ವೇದವತಿಯ ಕಡೆಗೆ ಚಾಚಿದನು. ಅವಳು ತನ್ನ ತೊಡೆಯ ಮೇಲೆ ಬಾಲಕನ ಕೈಯನ್ನಿಟ್ಟುಕೊಂಡು ಮೃದುವಾಗಿ ಕೈಯಾಡಿಸಹತ್ತಿದಳು. ಬಾಲಕನು 'ಹಾಯ್' ಅನ್ನುತ್ತ ಕಣ್ಣು ಮುಚ್ಚುತ್ತಿದ್ದನು. ನಾಲ್ಕಾರು ನಿಮಿಷಗಳ ಮೇಲೆ ವೇದವತಿಯು ಕೈಯಾಡಿಸುವದನ್ನು ಬಿಟ್ಟು ಬಾಲಕನ ಮೋರೆಯನ್ನು ನೋಡುತ್ತ ಕುಳಿತಳು.

"ಅಮ್ಮಾ, ಹೋದೆಯಾ" ಎಂದು ಬಾಲಕನು ನುಡಿದನು.

"ಇಲ್ಲ ಮಗು, ಇಲ್ಲಿಯೇ ಇರುವೆ. ನೋವು ಕಡಿಮೆಯಾಗಿರುವದೋ, ಎಂದು ಕೇಳಿದಳು.

"ಸ್ವಲ್ಪ ಕಡಿಮೆ. ಇನ್ನಿಷ್ಟು ಕೈಯಾಡಿಸಮ್ಮಾ."

ಬಾಲಕನು ನಿದ್ರೆ ಹೋಗುವವರೆಗೆ ವೇದವತಿಯು ಬಾಲಕನ ಮೈ ಮೇಲೆ, ತಲೆಯ ಮೇಲೆ ಕೈಯಾಡಿಸುತ್ತ ಕುಳಿತಳು. ಬಾಲಕನು ನಿದ್ರೆ ಹೋದದ್ದು ಕಂಡು ಮೆಲ್ಲಗಲ್ಲಿಂದೆದ್ದು ಕೋಣೆಯ ಹೊರಗೆ ಬಂದಳು. ವೇದವತಿಯ ಹಿಂದೆಯೇ ರಂಜನಿಯು ತಾನೂ ಹೊರಗೆ ಬಂದಳು. ವೇದವತಿಯು ಲಗುಬಗೆಯಿಂದ ತನ್ನ ಕೋಣೆಗೆ ಹೋದಳು. ಒಳಗೆ ಪ್ರವೇಶಿಸುತ್ತಲೇ ಅವಳು ಕೋಣೆಯ ನಾಲ್ಕೂ ದಿಕ್ಕುಗಳಲ್ಲಿ ತಿರುಗಾಡಿ ಸೂಕ್ಷ್ಮ ದೃಷ್ಟಿಯಿಂದ ಕೋಣೆಯನ್ನು ಮತ್ತೊಮ್ಮೆ ನಿರೀಕ್ಷಿಸಿ ತನ್ನ ಖುರ್ಚಿಯ ಮೇಲೆ ವಿಷಣ್ಣವದನಳಾಗಿ ಕುಳಿತುಕೊಂಡಳು. ರಂಜನಿಗೆ ಸೊನ್ನೆ ಮಾಡಿ ಎದುರಿಗೆ ಕುಳಿತುಕೊಳ್ಳಲು ತಿಳಿಸಿದಳು. ವೇದವತಿಯ ಬತ್ತಿದ ಮೊಗವನ್ನು ಕಂಡು ರಂಜನಿಯು ಏಕೋ ಗಾಬರಿಗೊಂಡು ಕೇಳಿದಳು.

" ಇಂದು ತಮ್ಮ ಮೊಗ ಹೀಗೇಕೆ ? "

" ಇಂದು ನನ್ನ ಜೀವನದ ಮುಕ್ತಾಯದಿನವೆಂದು ಮನಸ್ಸಿನಲ್ಲಿ ಏನೋ ವಿಚಾರಬರುತ್ತಿರುವದು. "

" ರೋಗಿಗಳ ಜೀವನವನ್ನು ಕಂಡು ಬಂದಿರಬಹುದು. ಆಸ್ಪತ್ರೆಯನ್ನು ಬಿಟ್ಟು ಹೊರಗೆ ಹೋದ ಮೇಲೆ ವಿಚಾರ ಬರಲಿಕ್ಕಿಲ್ಲ " ರಂಜನಿ ಅಂದಳು.

" ಹಾಗಲ್ಲ, ಮುಂಜಾವಿನಿಂದ ನನ್ನ ಜೀವಮಾನದ ಕೊನೆಯ ದಿನವೆಂದು ಅನಿಸುತ್ತಿರುವದು. ವಿದ್ಯಾಚರಣ ಹುಟ್ಟಿ ಇಂದಿಗೆ ಇಪ್ಪತ್ತೈದು ವರುಷಗಳಾದವು. ಇಂದು ಅವನ ಹುಟ್ಟು ಹಬ್ಬ. ನಾನು ಸಂತೋಷದಿಂದ ಕಾಲಕಳೆಯಬೇಕು, ಆದರೆ ಮನಸ್ಸಿನಲ್ಲಿ ನಿರುತ್ಸಾಹ " ಎಂದು ತನ್ನ ಕೊರಳಲ್ಲಿಯ ಮಂಗಳಸೂತ್ರವನ್ನು ಬಿಚ್ಚುತ್ತ ನುಡಿದಳು.

" ರಂಜನೀ, ಇದನ್ನು ನಿನ್ನ ಹತ್ತರಿಟ್ಟುಕೋ " ಎಂದು ಕೊಡಲು ವೇದವತಿಯು ಕೈ ಮಾಡಿದಳು.

" ಬೇಡ; ಇಂದು ಬೇಡ. ನಿಮ್ಮ ನಿಯಮ ನನಗೆ ಗೊತ್ತು. ವಿದ್ಯಾಚರಣನ ಹುಟ್ಟುಹಬ್ಬವೆಂದು ಇರುವದರಿಂದ ನೀವು ಕಟ್ಟಿಕೊಂಡಿರುವಿರಿ. ನಿಮ್ಮ ಹತ್ತಿರವೇ ಇಂದಿರಲಿ " ರಂಜನಿಯು ಹೇಳಿದಳು.

" ವಿದ್ಯಾಚರಣನಿಗೆ ಇದರ ವಿಷಯವಾಗಿ ಏನೂ ಗೊತ್ತಿಲ್ಲ. ಇಪ್ಪ

ತ್ತೈದು ವರ್ಷಗಳಾದರೂ ಅವನಿಗೆ ನಾನು ಹೀಗೆ ಹುಟ್ಟುಹಬ್ಬದ ದಿನ ಕಟ್ಟಿಕೊಳ್ಳುವೆನೆಂದು ತಿಳಿಯಗೊಟ್ಟಿಲ್ಲ. ಇದನ್ನು ಅರಿತವಳು ನೀನೊಬ್ಬಳೇ. ಅದಕ್ಕೆ ಇದನ್ನು ನಿನ್ನ ಕಡೆಗೆ. ಕೊಡಬೇಕೆಂದು ನನ್ನಿಚ್ಛೆ" ವೇದವತಿಯು ನುಡಿದಳು.

"ಇಂದು ಬೇಡ ನನ್ನ ಕಡೆಗೆ ವಿದ್ಯಾಚರಣನ ಹುಟ್ಟುಹಬ್ಬದ ದಿವಸ ಇದನ್ನು ಕೊರಳಲ್ಲಿ ಕಟ್ಟಿಕೊಳ್ಳುವ ನಿಯಮವನ್ನೇಕೆ ಹಾಕಿಕೊಂಡಿರುವಿರೆಂಬುವದು ನನಗೆ ಗೊತ್ತಿಲ್ಲ. ಆಸ್ಪತ್ರೆಯಲ್ಲೆಲ್ಲರೂ ತಾವು ಚಿಕ್ಕ ವಯಸ್ಸಿನಲ್ಲಿಯೇ ವಿಧವೆಯಾಗಿರಬೇಕೆಂದು ತಿಳಿದುಕೋಂಡಿರುವರು ನಾನಾದರೂ ಹಾಗೇ ತಿಳಿದುಕೊಂಡಿರುವೆನು" ಎಂದು ರಂಜನಿಯು ಹೆದರುತ್ತ ನುಡಿದಳು.

ರಂಜನಿಗೆ ವೇದವತಿಯಲ್ಲಿ ಆದರ, ಪ್ರೇಮ, ವಿಶ್ವಾಸ. ತನ್ನ ಆಯುಷ್ಯದೆಲ್ಲ ಸಮಸ್ಯೆಗಳನ್ನು ಮಗಳು ತಾಯಿಯ ಮುಂದಿಟ್ಟು ಅವಳ ಸಲಹೆಯ ಅನುಸಾರವಾಗಿ ನಡೆದುಕೊಳ್ಳುವಂತೆ ರಂಜನಿಯು ತನ್ನ ಜೀವನದ ಸಮಸ್ಯೆಗಳನ್ನು ವೇದವತಿಯ ಮುಂದಿಟ್ಟು ಅವಳ ಹೇಳಿಕೆಯಂತೆ ನಡೆದುಕೊಳ್ಳುತ್ತಿದ್ದಳು.

"ನಾನು ವಿಧವೆಯೂ ಹೌದು; ಸಧವೆಯೂ ಹೌದು" ಎಂದು ನಿಟ್ಟುಸಿರು ಬಿಡುತ್ತ ವೇದವತಿಯು ನುಡಿದಳು.

ರಂಜನಿಯು ಇದನ್ನು ಕೇಳಿ ದಿಂಗ್ಮೂಢಳಾದಳು. ಮಾತನಾಡಲು ಏನೂ ತೋಚದಾಯಿತು. ನಾಲ್ಕೈದು ನಿಮಿಷಗಳ ಮೇಲೆ ಧೈರ್ಯವನ್ನು ತೆಗೆದುಕೊಂಡು "ತಾಯಿ, ನಿಮ್ಮ ಮಾತಿನರ್ಥವೇ ನನಗಾಗಲಿಲ್ಲೆಂದು ಹೇಳಿದಳು."

"ಮಗು, ನನ್ನ ಮಾತಿನರ್ಥವಾಗುವದು ಬಹಳ ಕಠಿಣ. ನನ್ನ ಜೀವನದ ಕತೆ ಸತ್ಯವಿದ್ದರೂ ಅಸತ್ಯವೆನಿಸುವದು. ಆಯುಷ್ಯದಲ್ಲಿ ನನಗೆ ಬಂದ ಅನುಭವವು ಮತ್ತೊಬ್ಬರಿಗೆ ಬರುವದಿಲ್ಲ. ಮತ್ತೊಬ್ಬರ ಅನುಭವ ನನಗೆ ಬರಲಾರದು. ನಮ್ಮ ಕರ್ಮದಂತೆ ನಮ್ಮ ಅನುಭವ. ವಿದ್ಯಾಚರಣನನ್ನು ಡಾಕ್ಟರ್ ಮಾಡಬೇಕೆಂದು ನನ್ನ ಬಲವಾದ ಇಚ್ಛೆ ಇತ್ತು. ಆತನಿಗೆ ಕಲಿಸಬೇಕೆಂದೇ ನಾನು ಧನ್ವಂತರಿ ಧಾಮವನ್ನು

ಬಿಟ್ಟು ಇಲ್ಲಿಗೆ ಬಂದದ್ದು. ದೇವರು ನನ್ನಿಚ್ಛೆಯನ್ನು ಪೂರ್ಣ ಮಾಡಿ ದನು. ನಾನು ಬದುಕಿದ್ದಾದರೂ ಅಷ್ಟಕ್ಕೇ" ಎಂದು ಮೃದು ಧನಿಯಿಂದ ಮಾತನಾಡಿ ಐದು ನಿಮಿಷ ಕಣ್ಣುಮುಚ್ಚಿಕೊಂಡು ಕುಳಿತಳು. ರಂಜ ನಿಗೆ ಕೊಡಬೇಕೆಂದು ಮಾಡಿದ್ದ ತನ್ನ ಮಂಗಳ ಸೂತ್ರವನ್ನು ಮುಷ್ಟಿ ಯಲ್ಲಿ ಮುಚ್ಚಿಕೊಂಡಿದ್ದಳು.

ವೇದವತಿಯ ಮೌನವನ್ನು ಕಂಡು ರಂಜನಿಯು ಗಾಬರಿಯಾಗಿ ಅವಳ ಮೊಗವನ್ನೇ ಎವೆಬಡಿಯದೆ ನೋಡುತ್ತ ಕುಳಿತಳು.

" ತಾಯಿ, ಹೀಗೇಕೆ, ಇಂದು? ಮನಸ್ಸಿಗೆ ಏನಾಗಿರುವದು ? "

" ಏನೂ ಆಗಿಲ್ಲ " ಎಂದು ಕಣ್ಣು ತೆರೆದು ನುಡಿದಳು.

" ನನ್ನ ಜೀವನದಲ್ಲಿ ಘಟಿಸಿದ ಸಂಗತಿಗಳು ನನ್ನ ಕಣ್ಣೆದುರಿಗೆ ಬಂದು ನಿಂತವು. ಆ ನೆನಹಿನಿಂದ ನನ್ನ ಮನದಲ್ಲಿ ಒಂದು ಅಸಹ್ಯವೇದನೆಯುಂ ಟಾಯಿತು. ರಂಜನೀ, ನೊಂದವರಿಗೆ ದಯೆ ತೋರು; ಬೆಂದವರಿಗೆ ಕಾಪಾಡು, ಬಿದ್ದವರನ್ನು ಎಬ್ಬಿಸು, ನಿಂತು ನಗಬೇಡ. ಜೀವನದಲ್ಲಾಶೆ ಬಿಟ್ಟವರಿಗೆ ಧೈರ್ಯ ಕೊಡು " ಎಂದು ವೇದವತಿಯು ನುಡಿದಳು.

" ಇಂದೇಕೆ ಈ ಉಪದೇಶ ನನಗೆ. ನಿಮ್ಮ ಮಾತುಗಳೇ ನನಗೆ ತಿಳಿಯವು. ರಾತ್ರಿಯಾದಂತೆ ತೋರುವದು. ತಾವು ಮನೆಯ ಕಡೆಗೆ ಹೋಗಬಹುದು " ಎಂದು ರಂಜನಿಯು ನುಡಿದಳು.

" ವಿದ್ಯಾಚರಣನು ಮನೆಗೆ ಬರಲು ಸ್ವಲ್ಪ ತಡ, ಮಧುವತಿಗೆ ಬೇಗನೆ ಮನೆಗೆ ಬಾ ಎಂದು ಎಷ್ಟು ಹೇಳಿದರೂ ಅವಳು ನನ್ನ ಮಾತಿಗೆ ಕಿವಿಗೊಡಲೊಲ್ಲಳು. ವಯಸ್ಸಾದ ಹುಡುಗಿ, ರಾತ್ರಿ ಮಾಡಬೇಡ ಮನೆಗೆ ಬರಲು ಎಂದು ಹೇಳಿ ಬೇಸತ್ತೆ. ಅವಳೊಂದು ನನಗೆ ಸಮಸ್ಯೆಯಾ ಗಿಯೇ ಕುಳಿತಿರುವಳು. ಪ್ರತಿ ದಿನದಲ್ಲಿ ಅವಳೊಂದಿಲ್ಲೊಂದು ನೆವ ವನ್ನು ಹೇಳುವಳು. ಕಾಲೇಜ ನೆವವಂತೂ ಯಾವಾಗಲೂ ಇದ್ದದ್ದೇ; ಎಂದು ನುಡಿದು ಒಂದು ನಿಮಿಷ ಸುಮ್ಮನಾಗಿ ಮತ್ತೆ ಮಾತನಾಡಹತ್ತಿದಳು.

" ನನ್ನ ಮಾತಿನಲ್ಲಿ ನಿನಗೆ ಇಂದು ಅಸಂಬದ್ಧತೆ ಕಂಡು ಬರುವ ದಿಲ್ಲವೋ ? "

" ಹಾಗೇನೂ ಇಲ್ಲ; ತಿಳಿದುಕೊಂಡಹಾಗಿರುವದು. "

ರಂಜನಿಯೆದ್ದು ಬಾಗಿಲದ ಕಡೆ ಹೊರಟದ್ದರಿಂದ ವೇದವತಿಯು ನಿರುಪಾಯಳಾಗಿ ತಾನೂ ಎದ್ದು ಅವಳನ್ನು ಹಿಂಬಾಲಿಸಿದಳು. ಅವರೀ ರ್ವರೂ ಕೋಣೆಯಿಂದ ಹೊರಗೆ ಬರುವದನ್ನು ನೋಡಿ ಅವರ ಕಡೆಗೆ ರಭಸದಿಂದ ಬರುತ್ತಿರುವ ಒಂದು ವ್ಯಕ್ತಿಯನ್ನು ರಂಜನಿಯು ದೂರ ದಿಂದ ನೋಡಿದಳು.

" ಅವ್ವಾ ಅಕೋ ನೋಡು, ಒಂದು ವ್ಯಕ್ತಿಯು ಅವಸರದಿಂದ ನಮ್ಮ ಕಡೆಗೇ ಬರುವಂತಿದೆ. "

" ಡಾಕ್ಟರರ ಕೋಣೆಗಳು ಅತ್ತ ಕಡೆಗೆ. ಇಲ್ಲಿ ರೋಗಿಗಳ ಕೋಣೆ ಗಳು. ರಾತ್ರಿ ೯ ಗಂಟೆಗೆ ಇತ್ತ ಕಡೆಗೆ ಡಾಕ್ಟರರು ಇರುವದಿಲ್ಲವೆಂದು ಎಲ್ಲರಿಗೂ ಗೊತ್ತಿದ್ದ ಮಾತು. "

" ಅವನಿಗೆ ಗೊತ್ತಿರಲಿಕ್ಕಿಲ್ಲ, ತಪ್ಪಿ ಬಂದಿರಬಹುದು. ಭೈರು ಆತ ನನ್ನು ಇತ್ತ ಕಡೆಗೆ ಬಿಡಬಾರದಾಗಿತ್ತು. "

" ಆತನು ತಪ್ಪಿಸಿ ಬಂದಿದ್ದರೆ, ಎಂದು ರಂಜನಿಯು ನುಡಿಯುವ ಷ್ಟರಲ್ಲಿಯೇ ಆ ವ್ಯಕ್ತಿ ಅವರೆದುರಿಗೆ ಪುಂಡನಂತೆ ನಿಂತು ಅವರ ಮೊಗದ ಮೇಲೆ ಬ್ಯಾಟರಿಯ ಬೆಳಕನ್ನು ಬಿಟ್ಟನು.

ಬೆಳಕಿನಲ್ಲಿ ವೇದವತಿಯನ್ನು ಗುರುತಿಸಿ ಜೋರಿನಿಂದ ಅವಳ ಮೇಲೆ ಘುಮುಕಿ ಕೈ ಹಿಡಿದು ಜಗ್ಗಹತ್ತಿದನು. " ನೀನು ನನ್ನ ಹೆಂಡತಿ, ನನ್ನ ಸಂಗಡ ಬರಲೇ ಬೇಕು, ಎಂದು ಕೂಗುತ್ತ ವೇದವತಿಯ ಕೆನ್ನೆ ಗೊಂದು ಬಲವಾದ ಪೆಟ್ಟು ಕೊಟ್ಟನು. ರಂಜನಿಯ ಕೂಗಾಟಕ್ಕೆ ಉಳಿದ ದಾಯಿಗಳು ಧಾವಿಸಿದರು. ದೂರದಿಂದಲೇ ಆತನನ್ನು ಹೊಡಿ ಯಿರೆಂದು ಕೂಗುತ್ತ ಭೈರು ದೊಣ್ಣೆಯನ್ನು ಆತನ ಮೇಲೆ ಬೀಸಿದನು. " ಭೈರೂ, ಹೊಡೆಯಬೇಡ " ಎಂದು ವೇದವತಿಯು ನುಡಿದಳು. ದೊಣ್ಣೆ ದೂರದಲ್ಲಿ ' ಖಡಲ್ ' ಎಂದು ಸಪ್ಪಳ ಮಾಡುತ್ತ ಬಿದ್ದಿತು. ಆ ವ್ಯಕ್ತಿಯು ಮತ್ತಿಷ್ಟು ಅಬ್ಬರದಿಂದ ಕುಣಿಯುತ್ತ ಬಹಳೇ ಜೋರಿನಿಂದ ವೇದವತಿ ಯನ್ನು ಹಿಡಿದು ಜಗ್ಗಿದನು. ಆಕೆ ನೆಲಕ್ಕೆ ದೊಪ್ಪನೆ ಬಿದ್ದಳು. ಅವಳ ತಲೆ ಯಿಂದ ರಕ್ತ ಸುರಿಯಹತ್ತಿತು. ಸಮೀಪದಲ್ಲಿದ್ದ ಕಲ್ಲಿನ ಮೇಲೆ ಬಿದ್ದು ದರಿಂದ ತಲೆಗೆ ಏಟು ಬಲವಾಗಿ ಹತ್ತಿ ಪ್ರಜ್ಞೆ ತಪ್ಪಿತು. ಭೈರು ಓಡುತ್ತ

ಬಂದು ಆತನನ್ನು ಹಿಡಿದನು; ಆದರೂ ಆತನು ಕೈಯನ್ನು ಕೊಸರಿ ಕೊಂಡು ಜಿಗಿದು ಓಡಿದನು. ತಾನು ತಂದಿದ್ದ ಮೋಟರ ಸಾಯಕಲ್ಲನ್ನು ಹತ್ತಿ ಕೊಂಡು ಬಹಳೇ ವೇಗದಿಂದ ಹೊರಟು ಹೋದನು.

ವೇದವತಿಯು ಕೈಯಲ್ಲಿದ್ದ ಮಂಗಳಸೂತ್ರವು ಅವಳ ಬದಿಯಲ್ಲಿಯ ರಕ್ತದಲ್ಲಿ ಬಿದ್ದದ್ದನ್ನು ಕಂಡು ರಂಜನಿಯು ಅದನ್ನೆತ್ತಿ ತನ್ನ ಉಡುಗೆಯ ಸೆರಗಿನಲ್ಲಿ ಕಟ್ಟಿಕೊಂಡಳು.

## ೨

ರಾತ್ರಿ ಹನ್ನೆರಡು ಗಂಟೆಯು ಮೇಲಾಗಿತ್ತು. ವೇದವತಿಯ ಮಂಚದ ಬದಿಯಲ್ಲಿ ಒಂದು ಕುರ್ಚಿಯ ಮೇಲೆ ವಿದ್ಯಾಚರಣನು ತಾಯಿಯ ಮೊಗವನ್ನು ನೋಡುತ್ತ ಚಿಂತಾಕುಲನಾಗಿ ಕುಳಿತಿದ್ದನು. ರಂಜನಿಯು ಆಸ್ಪತ್ರೆಯಲ್ಲಿ ಹೇಳಿ ವಿದ್ಯಾಚರಣನ ಮನೆಗೆ ವೇದವತಿಯ ಶುಶ್ರೂಷೆ ಮಾಡಲು ಬಂದಿದ್ದಳು. ಆಕೆಯ ಶುಶ್ರೂಷೆ ತನ್ನ ತಾಯಿಯ ಶುಶ್ರೂಷೆ ಯೆಂದು ರಂಜನಿಯು ತಿಳಿದುಕೊಂಡಿದ್ದಳು. ವೇದವತಿಗೆ ಇನ್ನೂ ಪೂರ್ಣ ಪ್ರಜ್ಞೆ ಬಂದಿದ್ದಿಲ್ಲ. ಕಣ್ಣು ತೆರೆಯುವಳು; ಮಗ ವಿದ್ಯಾಚರಣ ನನ್ನು ವಾತ್ಸಲ್ಯ ದೃಷ್ಟಿಯಿಂದ ನೋಡುವಳು, ಮತ್ತೆ ದೃಷ್ಟಿ ಶೂನ್ಯವಾಗಿ ಕಣ್ಣು ಮುಚ್ಚುವಳು; ಅವಳಿಗೆ ಪೂರ್ಣ ಪ್ರಜ್ಞೆ ಬಾರದಿರುವದನ್ನು ಕಂಡು ವಿದ್ಯಾಚರಣನು ಗಾಬರಿಗೊಂಡನು.

“ ಅಮ್ಮನಿಗೆ ಮಿದುಳಿಗೆ ಬಲವಾದ ಪೆಟ್ಟು ತಗಲಿರುವದೆಂದು ಹೇಳಿ ರುವರೋ ? ಅವರು ಪರೀಕ್ಷೆ ಮಾಡಿರುವರೋ ” ಎಂದು ವಿದ್ಯಾಚರಣನು ಶೋಕಾಕುಲನಾಗಿ ವೇದವತಿಯ ಬದಿಯಲ್ಲಿ ಕುಳಿತ ರಂಜನಿಗೆ ಕೇಳಿದನು.

“ ತಕ್ಷಣವೇ ಆಸ್ಪತ್ರೆಯಲ್ಲಿ ಅವಳಿಗೆ ಉಪಚಾರ ಮಾಡಲಾಯಿತು.

ಪೆಟ್ಟು ತಗಲಿದ ಬಗ್ಗೆ ಡಾಕ್ಟರೇನೂ ನನಗೆ ಹೇಳಲಿಲ್ಲ. ನಾನು ನಿಮಗೆ ಫೋನು ಮಾಡಿದೆ. ನೀವು ಆಪರೇಶನ್ನದಲ್ಲಿರುವಿರೆಂದು ನಿಮ್ಮಲ್ಲಿಯವರು ಯಾರೋ ಹೇಳಿದರು. ನಾನಿದನ್ನು ಅವನಿಗೆ ತಿಳಿಸಲಿಲ್ಲ. ಆಪರೇಶನ್ನ ಮುಗಿದ ಕೂಡಲೇ ನೀವು ನನಗೆ ಫೋನು ಮಾಡಲು ಹೇಳಿರೆಂದು ನಾನು ಹೇಳಿದ್ದೆ. ಒಂದು ತಾಸಾದರೂ ನಿಮ್ಮ ಕಡೆಯ ಫೋನು ಬರಲಿಲ್ಲ. "

"ಇಂದಿನ ಆಪರೇಶನ್ನು ಬಹಳೇ ದೊಡ್ಡದಿತ್ತು. ಅಮ್ಮನ ಆಶೀರ್ವಾದದಿಂದ ಅದು ಪೂರ್ಣ ಯಶಸ್ವಿಯಾಯಿತು. ಮಗು ಹಾಗೂ ತಾಯಿ ಇಬ್ಬರೂ ದೇವರ ದಯೆಯಿಂದ ಬದುಕಿಕೊಂಡರು. "

" ಇದನ್ನು ಕೇಳಿದ್ದರೆ ಅಮ್ಮನಿಗೆ ಹಿಡಿಸಲಾರದಷ್ಟು ಸಂತೋಷವಾಗುತ್ತಿತ್ತು. ಅವಳ ಮನದ ಬಯಕೆ ಈಡೇರಿತು " ಎಂದು ರಂಜನಿಯು ಮೆಲ್ಲಗೆ ನುಡಿದಳು.

ಅರಪ್ರಜ್ಞೆಯಲ್ಲಿದ್ದ ವೇದವತಿಗೆ ಈ ಮಾತು ಕೇಳಿಸಿತೋ ಏನೋ ಅನ್ನುವಂತೆ ಮೊಗದ ಮೇಲೆ ಮುಗುಳು ನಗೆ ಮೂಡಿ ಮಾಯವಾಯಿತು.

ವಿದ್ಯಾಚರಣನು ಅಲ್ಲಿಂದೆದ್ದು ಬದಿಯ ಕೋಣೆಯಲ್ಲಿ ಹೋಗಿ ಪರೀಕ್ಷಿಸುವ ಉಪಕರಣಗಳನ್ನು ತಂದು ವೇದವತಿಯನ್ನು ಹತ್ತೆಂಟು ನಿಮಿಷ ಪರೀಕ್ಷಿಸಿ ದಂಗು ಬಡಿದು ಸುಮ್ಮನೆ ಕುಳಿತನು.

ವಿದ್ಯಾಚರಣನ ಗಂಭೀರ ಮುದ್ರೆಯನ್ನು ಕಂಡು "ಹೇಗಿರುವದು ಪ್ರಕೃತಿ" ಎಂದು ಕಾತರಳಾಗಿ ರಂಜನಿಯು ಕೇಳಿದಳು.

" ಪ್ರಕೃತಿಯು ಚೆನ್ನಾಗಿರುವದು. ಅವಳಿಗೆ ಆ ವ್ಯಕ್ತಿಯ ಕೃತಿಯಿಂದ ಹೃದಯದಲ್ಲಿ ಹುದುಗಿಕೊಂಡಿದ್ದ ಹಿಂದಿನ ಹಳೇ ಭಾವನೆಗಳು ಹರಿದು ಒಮ್ಮೆಲೇ ಮೇಲಕ್ಕೆದ್ದುದರಿಂದ • ಮನಸ್ಸು ಜಡವಾಗಿರುವಂತೆ ಕಾಣುವದು. ಬುದ್ಧಿಯು ಕುಂಠಿತವಾಗಿರುವದು. ಮನಸ್ಸು ಉದ್ವಿಗ್ನಗೊಂಡರೆ ಹೃದಯದ ಒತ್ತಡವೆಲ್ಲಿ ಸಂಭವಿಸುವದೆಂಬ ಹೆದರಿಕೆ "ಎಂದು ವಿದ್ಯಾಚರಣನು ನುಡಿದನು.

" ಇದಕ್ಕೇನಾದರೂ ಔಷಧ. "

" ವಿಶ್ರಾಂತಿಯೊಂದೇ ಔಷಧ. "

" ಪುಂಡನಂತೆ ಕೈ ಮಾಡಿದ ಆ ವ್ಯಕ್ತಿಯಾರಿಬಹುದು. ಕೊಸರಿ

ಕೊಂಡು ಓಡಿ ಹೋದನು ” ಅಂದಳು ರಂಜನಿ.

“ ಅವನು ಯಾರೆಂಬುದು ನನಗೂ ತಿಳಿಯದ ವಿಷಯವಾಗಿದೆ. ಅಮ್ಮ ತನ್ನ ಜೀವನದಲ್ಲಿ ಯಾರ ಮನಸ್ಸನ್ನೂ ನೋಯಿಸಿದವಳಲ್ಲ; ಯಾರಿಗೂ ಎಂದೂ ಅಹಿತ ಬಗೆದವಳಲ್ಲ. ”

“ ಪರಹಿತವೇ ತನ್ನ ಹಿತವೆಂದು ತಿಳಿದುಕೊಳ್ಳುವವಳ ಮೇಲೆ ಕೈ ಮಾಡಿದ ಅಧಮನು ಯಾವನಿರಬಹುದು. ”

“ ಅಮ್ಮನಿಗೆ ಗುಣವಾಗಲಿ. ಆಮೇಲೆ ಅವಳಿಗೆ ತಿಳಿಯದಂತೆ ವಿಚಾರ ಮಾಡೋಣ ” ಎಂದು ವಿದ್ಯಾಚರಣನು ನುಡಿದನು.

“ ಚಂದ್ರಾ, ಎಂದು ವಿದ್ಯಾಚರಣನು ಕರೆದನು. ”

ಬಾಗಿಲದಲ್ಲಿಯೇ ನಿಂತಿದ್ದ ಚಂದ್ರೆಯು ವಿದ್ಯಾಚರಣನ ಕರೆಯನ್ನು ಕೇಳಿ ಅನತಿದೂರದಲ್ಲಿ ಬಂದು ನಿಂತಳು. ವೇದವತಿಯಾಗಲೀ, ವಿದ್ಯಾ-ಚರಣನಾಗಲೀ ಚಂದ್ರೆಯನ್ನು ಮನೆಯ ಆಳೆಂದು ಭಾವಿಸಿರಲಿಲ್ಲ. ಅವಳೊಬ್ಬಳು ತಮ್ಮ ಮನೆಯವಳೇ ಎಂಬ ಭಾವನೆ ಅವರದು.

“ ಏಕೆ ಅಣ್ಣಾ ”

“ ಮಧುಮತಿ ಎಲ್ಲಿ? ”

“ ಇನ್ನೂ ಬಂದಿರುವದಿಲ್ಲ. ”

“ ರಾತ್ರಿ ಬಹಳವಾಯಿತು. ”

“ ತಡಮಾಡಿ ಬರುವೆನೆಂದು ನನಗೆ ಹೇಳಿರುವಳು ” ಚಂದ್ರಾ ನುಡಿದಳು.

“ ಎಲ್ಲಿಗೆ ಹೋದದ್ದು ನಿನಗೆ ಗೊತ್ತಿಲ್ಲವೆ?”

“ ಗಾಯನ ನೃತ್ಯಗಳನ್ನು ನೋಡಲು ಹೋಗುವೆನೆಂದು ಹೇಳಿದಳು. ಅಮ್ಮ ಕೇಳಿದರೆ ನೋಡಿ ಈಗ ಬರುವೆನೆಂದು ಹೇಳಿ ಲಗುಬಗೆಯಿಂದ ಹೊರಟು ಹೋದಳು. ಅವಳ ಅವಸರವನ್ನು ಕಂಡು ಹೊರಗೆ ಯಾರನ್ನೋ ನಿಲ್ಲಿಸಿ ಬಂದಂತೆ ತೋರಿತು. ನಾನಷ್ಟು ವಿಚಾರ ಮಾಡಲಿಲ್ಲ” ಅಂದಳು ಚಂದ್ರೆಯು.

ಖಿನ್ನಮನಸ್ಕನಾಗಿ ವೇದವತಿಯ ಮೊಗವನ್ನು ನಿಟ್ಟುಸಿರುಬಿಡುತ್ತ ವಿದ್ಯಾಚರಣನು ನೋಡುತ್ತ ಕುಳಿತುಕೊಂಡನು.

ವೇದವತಿಯು ಅರೆಪ್ರಜ್ಞೆಯಲ್ಲಿ ವಿದ್ಯಾಚರಣನನ್ನು ನೋಡುವಳು, ಮತ್ತೆ ಕಣ್ಣು ಮುಚ್ಚುವಳು. ನೀರೆಂದು ಮೆಲ್ಲಗೆ ನುಡಿದಳು:

ಚಂದ್ರಾ ಒಂದು ಗ್ಲಾಸ್ ನೀರನ್ನು ಚರಣನ ಕೈಯಲ್ಲಿ ಕೊಟ್ಟಳು.

" ಅಮ್ಮಾ ನೀರು ಕುಡಿ " ಎಂದು ವಿದ್ಯಾಚರಣನು ಗ್ಲಾಸನ್ನು ವೇದ ವತಿಯ ತುಟಿಗೆ ಹಚ್ಚಿದನು.

ವೇದವತಿಯು ಕಣ್ಣು ತೆರೆದು ನೀರು ಕುಡಿಸೆಂದು ಸನ್ನೆಮಾಡಿದಳು. ವಿದ್ಯಾಚರಣನು ಒಂದು ಗುಟುಕು ನೀರು ಕುಡಿಸಿ ಬದಿಯಲ್ಲಿದ್ದ ಫ್ಯಾ-ನನ್ನು ಹಚ್ಚಿದನು. ಗಾಳಿಯು ಬಡಿದಂತೆ ವೇದವತಿಯು ಚೇತರಿಸಿ ಕೊಳ್ಳುವ ಲಕ್ಷಣವನ್ನು ತೋರಿಸಹತ್ತಿದಳು. ವಿದ್ಯಾಚರಣನಿಗೆ ಹಿಡಿಸಲಾ ರದಷ್ಟು ಆನಂದ.

ಐದು ನಿಮಿಷಗಳ ಮೇಲೆ ಪ್ರಜ್ಞೆ ಬಂದು ಕುಳಿತುಕೊಳ್ಳಲು ವೇದ ವತಿಯು ಪ್ರಯತ್ನ ಮಾಡಹತ್ತಿದಳು. ತಲೆಯ ಗಾಯದ ಮೇಲಿದ್ದ ಅರಿವೆ ಯನ್ನು ಕೈಯಾಡಿಸಿ ನೋಡುವಳು.

ರಂಜನಿ— ಪೆಟ್ಟು ಬಹಳ ಹತ್ತಿರುವದೇ?

ವೇದವತಿ— ಅಷ್ಟೇನಿಲ್ಲ. ಕಣ್ಣಿಗೆ ಮಾತ್ರ ಚಕ್ರ ಬಂದಿತು. ರಂಜನೀ, ನಿನಗೆ ತ್ರಾಸ ಕೊಟ್ಟೆ. ನೀನು ಇಲ್ಲಿಯವರೆಗೆ ಬರಬಾರದಿತ್ತು. ವಿದ್ಯಾ-ಚರಣ— ಚಂದ್ರಾ ಇರುವರು. ಮಧುಮತಿ ಎಲ್ಲಿರುವಳು ?

ಮಧುಮತಿ ಇನ್ನೂ ಬಂದಿಲ್ಲವೆಂದು ಹೇಳಿದರೆ ವೇದವತಿಯು ಅನ್ಯಥಾ ತಿಳಿದುಕೊಂಡು ಮನಸ್ಸಿಗೆ ತ್ರಾಸು ಮಾಡಿಕೊಳ್ಳುವಳೆಂದು ವಿದ್ಯಾ ಚರಣನು ಹೇಳಲು ಹಿಂದೆ ಮುಂದೆ ನೋಡಹತ್ತಿದನು. ಏನುತ್ತರ ಕೊಡ ಬೇಕೆಂದು ಚಂದ್ರಾನ ಮೊಗವನ್ನು ನೋಡಿದನು. ಚಂದ್ರಾ ಮೊಗವನ್ನು ಕೆಳಗೆ ಬಗ್ಗಿಸಿದಳು.

" ಇನ್ನೂ ಬಂದಿರುವದಿಲ್ಲವೋ ? ವೇಳೆ ಬಹಳಾಯಿತು. ಎಷ್ಟು ಹೇಳಿದರೂ ಅವಳಿಗೆ ಬುದ್ಧಿ ಬರಲೊಲ್ಲದು. ನಾನು ಸತ್ತಮೇಲೆ ಅವಳಿಗೆ ಬುದ್ಧಿ ಬರುವಂತೆ ತೋರುವದು. ನಾನು ಸತ್ತಮೇಲೆ ಮಧುಮತಿಯನ್ನು ಚೆನ್ನಾಗಿ ಸಂರಕ್ಷಣೆ ಮಾಡು" ಎಂದು ವೇದವತಿಯು ಮಲಗಿಕೊಂಡಲ್ಲಿಯೇ

ಮೆಲ್ಲುದನಿಯಲ್ಲಿ ನುಡಿದಳು.

" ಅವ್ವಾ, ಸಾಯುವ ವಿಚಾರವೇಕೆ ನಿನ್ನ ತಲೆಯಲ್ಲಿ. "

" ನಾನು ಸಾಯುತಕ್ಕವಳಲ್ಲವೇ ? "

" ಎಲ್ಲರೂ ಸಾಯುತಕ್ಕವರೇ ಆದರೆ ಈಗ. ಅದರ ವಿಚಾರವೇಕೆ ! ಅವಳು ಸಣ್ಣವಳಲ್ಲ; ಕಲಿತವಳ; ನೀ ಹೇಳಿರುವಿ. ನಾ ಹೇಳಿರುವೆ" ಎಂದು ವಿದ್ಯಾಚರಣನು ನುಡಿದ. "ಚಂದ್ರಾ, ನಮ್ಮೆಲ್ಲರಿಗೂ ಚಹ ಕೊಡುವಿಯಾ ? ಅಮ್ಮನಿಗೆ ಸ್ವಲ್ಪ ಕುಡಿಸೋಣ" ವೆಂದು ಹೇಳಿದನು.

ಹೊರಬಾಗಿಲನ್ನು ಯಾರೋ ಬಡಿದಂತೆ ಸಪ್ಪಳವಾಯಿತು. ಮಧುಮತಿ ಇರಬಹುದೆಂದು ಗುಣಗುಡುತ್ತ ವಿದ್ಯಾಚರಣನು ಹೋಗಿ ಬಾಗಿಲವನ್ನು ತೆಗೆದನು. ಮನೆಯಲ್ಲಿ ಎಲ್ಲರೂ ಎಚ್ಚರಿದ್ದದ್ದು ಕಂಡು ಮಧುಮತಿ ಗಾಬರಿಯಾದಳು. ಚಂದ್ರೆ ಬಾಗಿಲ ತೆಗೆಯುವಳೆಂದು ಅವಳಿಗನಿಸಿತ್ತು. ವಿದ್ಯಾಚರಣನು ಮಾತನಾಡದೆ ತಾಯಿಯ ಬಳಿಗೆ ಬಂದು ಕುಳಿತನು.

" ಯಾರು ಬಂದವರು ? " ವೇದವತಿಯು ಕೇಳಿದಳು.

" ಅವ್ವಾ, ಮಧುಮತಿ. ಕಾಲೇಜದಲ್ಲಿ ನೃತ್ಯ ಹಾಗೂ ಗಾಯನ ಕೇಳಲು ಹೋಗಿದ್ದಳಂತೆ " ಎಂದು ವಿದ್ಯಾಚರಣನು ನುಡಿದನು.

" ಮಧುಮತಿ, ಮಧುಮತಿ " ಎಂದು ವೇದವತಿ ಮೆಲ್ಲಗೆ ನುಡಿದಳು.

ಗಾಬರಿಗೊಂಡ ಎರಳೆಯು ಕಕ್ಕಾಬಿಕ್ಕಿಯಾಗಿ ನೋಡುವಂತೆ ಮಧುಮತಿಯು ಸುತ್ತಲೂ ದೃಷ್ಟಿ ಚೆಲ್ಲುತ್ತ ವೇದವತಿಯ ಮಂಚದ ಹತ್ತರ ಬಂದಳು. ವೇದವತಿ ಅವಳನ್ನು ಕರೆದು ತನ್ನ ಮಂಚದ ಮೇಲೆ ಕುಳ್ಳಿರಿಸಿ ಕೊಂಡಳು.

" ಮಧುಮತಿ, ಹೇಳಿ ಬೇಸತ್ತೆ. ರಾತ್ರಿಯಲ್ಲಿ ಹುಡುಗಿಯರು ಏಕಾಕಿಯಾಗಿ ಹೊರಗೆ ಹೋಗಬಾರದೆಂದು ಹಲವಾರು ಸಾರೆ ಹೇಳಿರುವೆನು. ಇನ್ನೂ ನೀನು ಏನೂ ತಿಳಿಯದ ಹುಡುಗಿಯಂತೆ ಮಾಡುವಿ " ಎಂದು ವೇದವತಿಯು ನುಡಿದಳು,

" ಅವ್ವಾ ನಂದು ಹಿಂದುಗಡೆಗೆ ವಿಚಾರ ಮಾಡು. ನೀನೇಕೆ ಹೀಗೆ ಮಲಗಿಕೊಂಡಿರುವಿ? ತಲೆಗೆ ಪಟ್ಟಿಯೇಕೆ? ಏನಾಗಿರುವದು ಅವ್ವಾ

ಹೇಳು ” ಎಂದು ಗಾಬರಿಗೊಂಡು ಕೇಳಿದಳು.

“ ನನಗೇನೂ ಆಗಿರುವದಿಲ್ಲ. ಇಂದು ಆಸ್ಪತ್ರೆಯಲ್ಲಿ ಕಾಲುಜಾರಿ ಬಿದ್ದೆ. ವಯಸ್ಸಾಗಿರುವದು. ಎಲ್ಲರೂ ಉಪಚರಿಸಿ ಕಳುಹಿಕೊಟ್ಟರು; ಇಷ್ಟೇ. ಜಾಣ ಹುಡುಗಿಯಾಗು; ಸುಖದಿಂದ ಬಾಳು, ” ಎಂದು ಮೆಲ್ಲಗೆ ಮಾತನಾಡುತ್ತ ಅವಳ ಬೆನ್ನ ಮೇಲೆ ಕೈಯಾಡಿಸಿದಳು.

“ ಅಮ್ಮಾ, ನಾನು ಯಾವಾಗಲೂ ಜಾಣೆ. ಇಂದು ನಮ್ಮ ಕಾಲೇಜಿನಲ್ಲಿ ನೃತ್ಯಗಾಯನಗಳಿದ್ದವು. ನೋಡಲು ಹೋಗಿದ್ದೆ. ಮುಗಿಯಲು ತಡವಾಯಿತು. ನಿನಗೆ ಹೇಳಬೇಕೆಂದು ಆಸ್ಪತ್ರೆಗೆ ಬಂದಿದ್ದೆ, ಆದರೆ ನೀನು ನನಗೆ ಸಿಗಲಿಲ್ಲ. ವಿದ್ಯಾಚರಣನಿಗಾದರೂ ಹೇಳಿ ಹೋಗಬೇಕೆಂದು ಅವನಲ್ಲಿಗೆ ಹೋದೆ. ಆತ ಆಪರೇಶನ್ನ ಮಾಡುತ್ತಿರುವನೆಂದು ಅವನ ಆಸ್ಪತ್ರೆಯಲ್ಲಿ ಹೇಳಿದರು. ಹೀಗಾಗಿ ನಿಮ್ಮಿಬ್ಬರಿಗೂ ಹೇಳುವದಾಗಲಿಲ್ಲ. ಚಂದ್ರಾನ ಮುಂದೆ ನಾನು ಹೇಳಿದ್ದೆ. ”

ಚಂದ್ರಾ ಎಲ್ಲರಿಗೂ ಚಹವನ್ನು ತಂದು ಕೊಟ್ಟಳು. ವಿದ್ಯಾಚರಣನು ತನ್ನ ಚಹಾದ ಕಪ್ಪನ್ನು ಬದಿಗಿಟ್ಟು ವೇದವತಿಗೆ ಕುಡಿಸಬೇಕೆಂದು ಅವಳ ಬದಿಯಲ್ಲಿ ಕುಳಿತನು. ಮಲಗಿಕೊಂಡಲ್ಲಿಯೇ ಅವಳಿಗೆ ಚಮಚೆಯಿಂದ ಚಹ ಕುಡಿಸಿದನು.

ತಾಯಿಗಿಷ್ಟು ಪ್ರಜ್ಞೆ ಬಂದು ಮಾತನಾಡಿದ್ದು ಕಂಡು ವಿದ್ಯಾಚರಣನಿಗೆ ಬಹಳೇ ಆನಂದವಾಯಿತು. ವೇದವತಿಯು ಮಾತನಾಡುತ್ತ ಕಣ್ಣು ಮುಚ್ಚುವಳು; ತೆರೆಯುವಳು. ಪ್ರಜ್ಞೆ ಬಂದರೂ ಅವಳಿಗೆ ಮೇಲಿಂದ ಮೇಲೆ ಒಂದು ತರಹದ ಗುಂಗು ಆವರಿಸುತ್ತಿತ್ತು.

“ ಹೊರಗೆ ಯಾರೋ ಬಾಗಿಲ ಬಡೆದ ಸಪ್ಪಳವಾಯಿತು; ನೋಡು ಚಂದ್ರಾ, ಎಂದು ವಿದ್ಯಾಚರಣನು ಹೇಳಿದನು.

“ ಇಷ್ಟು ರಾತ್ರಿಯಲ್ಲಿ ಯಾರು ಬರುವರು, ಗಾಳಿ ಇರಬೇಕು ” ಎಂದು ಮಧುಮತಿ ಅಂದಳು.

ಮತ್ತೆ ಕದ ಬಡಿದ ಸಪ್ಪಳ ಕೇಳಿ, “ ಚಂದ್ರಾ ನೋಡು ಸ್ವಲ್ಪ, ವಿದ್ಯಾಚರಣನು ನುಡಿದನು. ಚಂದ್ರಿಯು ಹೋಗಿ ಬಾಗಿಲನ್ನು ತೆರೆದಳು. ಇಪ್ಪತ್ತು ವರುಷದ ಯುವತಿ ನಡುಗುತ್ತ ಬಾಗಿಲ ಹತ್ತರ ನಿಂತಿದ್ದಳು.

" ಡಾಕ್ಟರ್ ವಿದ್ಯಾಚರಣರಿರುವರೇನು, " ಎಂದು ಕಂಪಿತ ಸ್ವರದಲ್ಲಿ ಕೇಳಿದಳು. ಅವಳು ನಡುಗುವದನ್ನು ಕಂಡು " ಒಳಗೆ ಬನ್ನಿ, ಇರುವರು. ಕರೆಯುವೆನು " ಎಂದು ಚಂದ್ರಾ ನುಡಿದು ವಿದ್ಯಾಚರಣನನ್ನು ಕರೆಯಲು ಒಳಗೆ ಹೋದಳು. ಇಷ್ಟು ರಾತ್ರಿಯಲ್ಲಿ ವಿದ್ಯಾಚರಣನು ಮಲಗಿಕೊಂಡಿರುವನೊ ಏನೋ ಎಂಬ ಸಂಶಯ ಆ ಯುವತಿಗೆ.

ಚಂದ್ರಿಯು ತಿರುಗಿ ಬಂದು " ತಾವು ಯಾರು? ತಮ್ಮ ಹೆಸರೇನು" ಎಂದು ಕೇಳಿದಳು.

" ನಾನು ಮೇಧಾವಿನಿ... ಕುಮಾರಿಲ ಭಟ್ಟರ ಮಗಳು. ನಿಮ್ಮ ಮನೆಯ ಸಮೀಪದಲ್ಲಿಯೇ ಇರುವೆವು " ಎಂದು ಆಕೆ ನುಡಿದಳು. ಇಷ್ಟು ರಾತ್ರಿಯಲ್ಲಿ ಅವರ ಮನೆಯಲ್ಲಿ ಎಚ್ಚರಿದ್ದದ್ದು ಕಂಡು ಮೇಧಾವಿನಿಗೆ ಆಶ್ಚರ್ಯವೆನಿಸಿತು. ಚಂದ್ರಿಯು ಅವಳನ್ನು ಕರೆದುಕೊಂಡು ವಿದ್ಯಾಚರಣ ಕುಳಿತಲ್ಲಿಗೆ ಹೋದಳು. ವೇದವತಿಯು ಮಲಗಿಕೊಂಡದ್ದು; ಅವಳ ತಲೆಗೆ ಪಟ್ಟಿಯನ್ನು ಕಟ್ಟಿದ್ದು, ಸುತ್ತಲೂ ಎಲ್ಲರೂ ಕುಳಿತದ್ದು–ದೃಶ್ಯವನ್ನು ಕಂಡು ಹೆದರಿ ಕೋಣೆಯಲ್ಲಿ ಬಂದವಳು ಹಿಂತಿರುಗಿದಳು.

ಇದನ್ನು ಕಂಡು ವಿದ್ಯಾಚರಣನು ' ನೀವು ಯಾರು ? ಏಕೆ ಬಂದಿರುವಿರಿ ? ಹಿಂತಿರುಗಿದಿರೇಕೆ " ಎಂದು ಕೇಳಿದನು.

" ಇವಳು ಕುಮಾರಿಲ ಭಟ್ಟರ ಮಗಳಂತೆ. ಇವಳ ಹೆಸರು ಮೇಧಾವಿನಿ. ನಮ್ಮ ಮನೆಯ ಸಮೀಪದಲ್ಲಿಯೇ ಇರುವರಂತೆ " ಎಂದು ಚಂದ್ರಿಯು ಹೇಳಿದಳು.

ಗಾಬರಿಗೊಂಡ ಅವಳ ಮೊಗವನ್ನು ಕಂಡು ವಿದ್ಯಾಚರಣನೆದ್ದು ಮೇಧಾವಿನಿಗೆ ಕುಳಿತುಕೊಳ್ಳಲು ಕುರ್ಚಿಯನ್ನು ಕೊಟ್ಟನು. ಮೇಧಾವಿನಿ ಅನುಮಾನಿಸುತ್ತ ಹಾಗೇ ನಿಂತಳು.

" ಕುಳಿತುಕೊಳ್ಳಿ; ನಿಲ್ಲಬೇಡಿರಿ, "ಎಂದು ಮಧುಮತಿ ನುಡಿದಳು.

" ನನ್ನ ತಂದೆಗೆ ಬಹಳೇ ಜಡ್ಡಾಗಿರುವದು. ಸಮೀಪದಲ್ಲಿ ಕೆಲವು ಡಾಕ್ಟರರಿರುವರು. ಕರೆಯಲು ಹೋಗಿದ್ದೆ. ನಾವು ಬಡವರೆಂದು ಒಂದಿಲ್ಲೊಂದು ನೆವ ಹೇಳಿ ಎಲ್ಲರೂ ನನ್ನನ್ನು ಕಳುಹಿಸಿಬಿಟ್ಟರು. ನಾನು ತಿರುಗಾಡಹತ್ತಿ ಸುಮಾರು ಎರಡು ತಾಸಾಯಿತು. ನಮ್ಮ ಬಡತನಕ್ಕೆ ಒಬ್ಬ

ಡಾಕ್ಟರನೂ ಸಿಗಲೊಲ್ಲನು. ತಮ್ಮ ಹೆಸರು ಕೇಳಿದ್ದೆ. ತಾವಾದರೂ ಬರುವಿರೆಂದು ಕರೆಯಲು ಬಂದಿರುವೆನು" ಎಂದು ಮೇಧಾವಿನಿ ದುಃಖವನ್ನು ಬಿಗಿ ಹಿಡಿದುಕೊಂಡು ನುಡಿದಳು.

ವಿದ್ಯಾಚರಣನು ಅವಳ ಮಾತನ್ನು ಕೇಳಿ ಸುಮ್ಮನಾದನು. ವಿಚಾರ ಮಾಡುತ್ತ ನಿಂತನು. ತಾಯಿಯ ಕಡೆಗೆ ಹೋಗಿ ಬಗ್ಗಿ ಅವಳ ಮುಖವನ್ನು ನೋಡಿದನು. ಅವಳಿಗೆ ಜಂಪು ಹತ್ತಿತ್ತು.

"ಚರೂ ಯಾರೋ ಮಾತನಾಡಿದರು. ಯಾರು?" ಮೆಲ್ಲಗೆ ಕೇಳಿದಳು.

"ಮೇಧಾವಿನಿ, ಅಮ್ಮಾ" ಎಂದು ರಂಜನಿಯು ನುಡಿದಳು.

"ಯಾರು! ಕುಮಾರಿಲ ಭಟ್ಟರ ಮಗಳೆ."

"ಹೌದಮ್ಮಾ" ಎಂದು ರಂಜನಿಯು ಹೇಳಿದಳು.

ಅರೆ ನಿದ್ರೆಯಲ್ಲಿಯೇ ವೇದವತಿಯು ಮೇಧಾವಿನಿಯನ್ನು ತನ್ನ ಹತ್ತರ ಕರೆದು ಕುಳಿತುಕೊಳ್ಳಲು ಹೇಳಿದಳು.

"ಅಮ್ಮನ ಪ್ರಕೃತಿ ಇಂದು ನೆಟ್ಟಗಿಲ್ಲ. ಅವಳನ್ನು ಬಿಟ್ಟು ಬರಲು ನನಗೆ ಹೆದರಿಕೆ ಅನಿಸುತ್ತಿರುವದು" ಎಂದು ವಿದ್ಯಾಚರಣನು ನುಡಿದನು.

ವಿದ್ಯಾಚರಣನ ಮಾತು ಕೇಳಿ ಮೇಧಾವಿನಿಗೆ ವಜ್ರಾಘಾತವಾದಂತಾಯಿತು. ಬಳಲುತ್ತಿರುವ ತಂದೆಯ ಚಿತ್ರ ಕಣ್ಣ ಮುಂದೆ ನಿಂತು ಅವಳನ್ನು ಅಧೀರಳನ್ನಾಗಿ ಮಾಡಿತು. ಇದು ಒಡವರ ಬಾಳು; ವಿಧಿಯು ಬಡವರ ಬೆನ್ನನ್ನಷ್ಟೇ ಹತ್ತುವನೋ; ಹಣವಂತರಿಗೆ ಹೆದರುವನೋ; ಗೋಳಿನ ಜೀವನಕ್ಕಿಂತ ಹಾಳಾಗಿ ಹೋಗುವದು ಲೇಸಲ್ಲವೇ—ಎಂಬೀ ವಿಚಾರಗಳು ಅವಳ ತಲೆಯಲ್ಲಿ ಸುಳಿಯಹತ್ತಿದವು. ದುಃಖದ ಒತ್ತಡವನ್ನು ತಡೆದಳು, ಆದರೂ ಕಣ್ಣಹನಿಯೊಂದು ತಪ್ಪಿ ವೇದವತಿಯ ಮೊಗದ ಮೇಲೆ ಟಪ್ಪನೆ ಉದುರಿತು... ಪ್ರಜ್ಞೆಯಲ್ಲಿದ್ದ ವೇದವತಿಯು ಮೇಧಾವಿನಿಯ ಬಲಗೈಯನ್ನು ಹಿಡಿದುಕೊಂಡು 'ದುಃಖಿಸಬೇಡ; ಚರಣ ಬರುವ'ನೆಂದು ಹೇಳಿದಳು.

ತಾಯಿಯ ಬದಿಯಲ್ಲಿ ನಿಂತ ವಿದ್ಯಾಚರಣನು ಮೇಧಾವಿನಿಯ ಮೊಗವನ್ನು ನೋಡುತ್ತ ನಿಂತನು.

ಚರಣ, ತೀವ್ರ ಹೋಗು; ನನ್ನ ಬಗ್ಗೆ ಚಿಂತೆ ಬೇಡ" ಎಂದು ವೇದವತಿಯು ಮೆಲ್ಲಗೆ ನುಡಿದಳು.

ವಿದ್ಯಾಚರಣನು ಮರು ಮಾತನಾಡದೆ ತನ್ನ ಬ್ಯಾಗನ್ನು ತೆಗೆದು ಕೊಂಡು ಬಂದು ' ರಂಜನೀ ನಾ ಬರುವವರೆಗೆ ನೀನು ಇರುವಿಯಾ ' ಎಂದು ಕೇಳಿದನು.

ಬ್ಯಾಗನ್ನು ಕೆಳಗಿಟ್ಟು ಐದು ನಿಮಿಷ ಮಂಚದ ಹತ್ತಿರ ನಿಂತು ಬಗ್ಗಿ ತಾಯಿಯ ಮೊಗವನ್ನು ನೋಡಿ ಉಸಿರುಬಿಟ್ಟನು.

ಕಣ್ಣು ತೆರೆದು, "ಚರೂ ಯಾವಾಗಲೂ ಬಡವರನ್ನು ಕೇಳು, ಹೋಗಿ ಬಾ" ಎಂದು ಅವನ ಬಲಗೈಯನ್ನು ಹಿಡಿದು ಅವನ ಕೈಯಲ್ಲಿ ಮೇಧಾವಿನಿಯ ಕೈಕೊಟ್ಟು ಗಟ್ಟಿಯಾಗಿ ಹಿಡಿದು ಕಣ್ಣು ಮುಚ್ಚಿದಳು.

" ಅಮ್ಮಾ ಏನಿದು " ಚರಣ ಕೇಳಿದನು.

" ನನಗೆ ಗೊತ್ತು ಇದು. ನೀನು ಅವಳನ್ನು ಕರೆದುಕೊಂಡು ಹೋಗಿ ಬಾ " ಎಂದು ಮುಗುಳ್ನಗೆಯಿಂದ ನುಡಿದಳು.

ಮೇಧಾವಿನಿ ತನ್ನ ಕೈಯನ್ನು ಕಸಿದುಕೊಳ್ಳಲಿಲ್ಲ. ಏನೂ ತೋಚದೆ ವಿದ್ಯಾಚರಣನ ಮೊಗ ನೋಡುತ್ತ ನಿಂತಳು. ವೇದವತಿಯು ತನ್ನ ಕೈಯನ್ನು ಬಿಟ್ಟಳು. ವಿದ್ಯಾಚರಣನು ನಿರುಪಾಯನಾಗಿ ಹೊರಟನು. ಮೇಧಾವಿನಿಯು ಧಾವಿಸಿ ಬಂದು ಅವನ ಕೈಯಲ್ಲಿಯ ಬ್ಯಾಗನ್ನು ತೆಗೆದು ಕೊಂಡು ಮುಂದೆ ನಡೆದಳು.

ಅವರೀರ್ವರೂ ಹೋಗುವದನ್ನು ಕಂಡು ವೇದವತಿಯು ಕಣ್ಣನ್ನು ಮುಚ್ಚಿದಳು.

" ರಂಜನೀ ನಾನು ಮೇಧಾವಿನಿಯನ್ನು ಚೆನ್ನಾಗಿ ಬಲ್ಲೆ. ವಿದ್ಯಾಚರಣನಿಗೆ ಅಷ್ಟು ಪರಿಚಯವಿಲ್ಲ " ಎಂದು ವೇದವತಿಯು ನುಡಿದಳು.

ರಾತ್ರಿ ಒಂದು ಗಂಟೆಯ ಮೇಲಾಗಿರಬಹುದು. ಚಂದ್ರನು ಅದೇ ಮೂಡಿದ್ದ. ತೇಲುತ್ತಿರುವ ಮೋಡಗಳೊಳಗಿಂದ ಆತ ಇಣಿಕಿ ಇಣಿಕಿ ನೋಡುತ್ತಿದ್ದ. ವಿದ್ಯಾಚರಣನು ಮೇಧಾವಿನಿಯು ಬದಿಯಲ್ಲಿಯೆ ನಡೆದಿದ್ದ. ಆತನು ಬ್ಯಾಗನ್ನು ಕೊಡಲು ಕೇಳಿದನು. ಇರಲಿ, ತೆಗೆದು ಕೊಂಡು ಬರುವೆನೆಂದುತ್ತರ ಕೊಟ್ಟಳು.

ವೇದವತಿಯು ಇಂದು ಏನು ಮಾಡಿದಳು ? ತನ್ನ ಕೈಯನ್ನು ವಿದ್ಯಾಚರಣನ ಕೈಯಲ್ಲೇಕೆ ಕೊಟ್ಟಳು; ನಾನೇಕೆ ಸುಮ್ಮನೆ ಕುಳಿತೆ; ವಿದ್ಯಾಚರಣನು ಏನು ತಿಳಿದುಕೊಳ್ಳಬಹುದು—ಎಂಬೀ ವಿಚಾರಗಳು ಅವಳ ತಲೆಯಲ್ಲಿ ಸುಳಿಯುಹತ್ತಿದವು. ಬೆಳದಿಂಗಳ ಬೆಳಕಿನಲ್ಲಿ ಅವನ ಮೊಗವನ್ನು ಮೇಲಿಂದ ಮೇಲೆ ನೋಡುತ್ತ ಅವನ ಬದಿಯಲ್ಲಿಯೇ ಸಾಗಿದಳು. ವಿದ್ಯಾಚರಣನಾದರೂ ಇಂದು ತನ್ನ ತಾಯಿ ಮಾಡಿದ್ದನ್ನೇ ವಿಚಾರ ಮಾಡುತ್ತ ಅವಳ ಸಂಗಡ ಹೆಜ್ಜೆ ಹಾಕುತ್ತ ನಡೆದಿದ್ದನು.

" ನಿಮ್ಮ ಮನೆಯಲ್ಲಿ ನಿಮ್ಮ ಹೊರತು ಬೇರೆ ಯಾರೂ ದೊಡ್ಡವರಿಲ್ಲವೋ " ಎಂದು ವಿದ್ಯಾಚರಣ ಕೇಳಿದನು.

" ಏಕೆ ? "

" ಏನೂ ಇಲ್ಲ; ರಾತ್ರಿಯಲ್ಲಿ ನಿಮ್ಮನ್ನು ಕಳುಹಿಸಿದ್ದಕ್ಕೆ. "

" ದೊಡ್ಡವರು ಇದ್ದರೂ ಇರಲಾರದ ಹಾಗೆ. ನನ್ನ ಅಣ್ಣನೊಬ್ಬನಿರುವನು. "

" ಆತ ನಿಮ್ಮ ಮನೆಯಲ್ಲಿರುವದಿಲ್ಲವೋ ? "

" ಮನೆಯಲ್ಲಿದ್ದರೂ ಇರದ ಹಾಗೆ. "

" ಇಷ್ಟು ರಾತ್ರಿಯಲ್ಲಿ ನಿಮ್ಮನ್ನು ಕಳುಹಿಸಬಾರದಾಗಿತ್ತು. "

" ತಂದೆ ಸಂಕಟಪಡುತ್ತಿರುವದನ್ನು ಕಂಡು ಓಡಿ ಬಂದೆ. "

" ಏನಾಗಿರುವದು. "

" ಮಲಗಿಕೊಳ್ಳುವವರೆಗೆ ನೆಟ್ಟಗಿದ್ದರು. ಮುಂದೆ ತಾಸೆರಡು ತಾಸಿನ ಮೇಲೆ ಹೊಟ್ಟೆಯಲ್ಲಿ ಸಂಕಟವಾಗುವದೆಂದು ಹೊರಳಾಡಹತ್ತಿದರು. ಅಮ್ಮನು ಕಾಸಿದಳು, ಏನೂ ಕಡಿಮೆಯಾಗಲಿಲ್ಲ. ಅವರು ಹೊರಳಾಡುವದು ಹೆಚ್ಚಾಗಹತ್ತಿತು. ನಾನು ಡಾಕ್ಟರರನ್ನು ಕರೆದು ಬರುವೆನೆಂದು ಹೇಳಿ ಗಾಬರಿಯಾಗಿ ಬಂದಿರುವೆ. ಬಂದು ಬಹಳ ಹೊತ್ತಾಯಿತು. ತಂದೆಯು ಬದುಕಿರುವನೋ ಇಲ್ಲವೋ ಎಂದು ಸಂಶಯು ನಾನು ತಡಮಾಡಿದ್ದಕ್ಕೆ ಅಮ್ಮನಿಗೊಂದು ಚಿಂತೆ. ಚಿಂತೆಯೇ ನಮ್ಮ ಬಾಳಾಗಿರುವದು " ಎಂದು ಅಸ್ಪಷ್ಟವಾಗಿ ಕಾಣಿಸುತ್ತಿರುವ ವಿದ್ಯಾಚರಣನ ಮೊಗವನ್ನು ನೋಡುತ್ತ ನುಡಿದಳು.

" ಮನೆಯು ಇನ್ನೂ ದೂರವಿದೆಯೋ ? ನಾನು ವಿಚಾರದ ಭರದಲ್ಲಿ ಕಾರು ತರುವದು ಮರೆತೆ. "

" ನಾವು ಮನೆಯ ಸಮೀಪಕ್ಕೆ ಬಂದಿರುವೆವು. ಇನ್ನು ಎರಡು ಮೂರು ನಿಮಿಷಗಳ ದಾರಿ. "

" ಅಮ್ಮನಿಗೆ ನಿಮ್ಮ ಪರಿಚಯವೋ. "

" ನಮ್ಮ ಅಪ್ಪನಿಗೆ ಪರಿಚಯವುಂಟು. ತಿಂಗಳಿಗೊಮ್ಮೆಯಾದರೂ ಅಪ್ಪನು ಆಸ್ಪತ್ರೆಯಲ್ಲಿ ವೇದವತಿಯವರನ್ನು ಕಂಡು ಬರುವೆನೆಂದು ಹೇಳುತ್ತಿರುವನು. ಪ್ಪನು ಮಾತ್ರ ನಿಮ್ಮಮ್ಮನನ್ನು ದೇವಿಯೆಂದು ತಿಳಿದುಕೊಂಡಿರುವನು. ನಮ್ಮ ಅಪ್ಪನಿಗೆ ವೇದವತಿಯ ಗುಣವರ್ಣನೆಯನ್ನು ಎಷ್ಟು ಮಾಡಿದರೂ ಕಡಿಮೆ. ವೇದವತಿಯು ನಿಮ್ಮ ಅಮ್ಮನೆಂದು ಕೇಳಿದ್ದೆ. ಅವರನ್ನು ನೋಡಿದ್ದು ಇಂದೇ. ಅವರು ಪರೋಪಕಾರಿಯೆಂದು ಬಹುಜನರ ಬಾಯಲ್ಲಿರುವರು " ಮೇಧಾವಿನಿ ಮೆಲ್ಲಗೆ ನುಡಿದಳು.

ಮೇಧಾವಿನಿ ತಮ್ಮ ಮನೆ ಬಂದದ್ದನ್ನು ನೋಡಿ ಮುಂದೆ ಹೋಗಿ ತಮ್ಮಮ್ಮನನ್ನು ಕೂಗಿ ಬಾಗಿಲವನ್ನು ಬಡಿದಳು. ಮನೆಯಲ್ಲಿ ಸ್ತಬ್ಧತೆ. ಒಂದೂ ದೀಪ ಕಾಣದ್ದನ್ನು ನೋಡಿ ಗಾಬರಿಗೊಂಡಳು. ಕತ್ತಲೆಯಲ್ಲಿ ಬೇರೆಯವರ ಮನೆಗೆ ಬಂದಿರುವೆನೋ ಎಂದು ಅನಿಸಿತು. ಮತ್ತೆ ಬಾಗಿಲನ್ನು ಬಡಿದಳು. ಒಳಗಿನಿಂದ ' ಮೇಧಾ ಬಂದೆ, ಎಂಬುದು ಅವಳಿಗೆ ಕೇಳಿಸಿತು. ಅವಳ ತಾಯಿ ದೀಪವನ್ನು ತೆಗೆದುಕೊಂಡು ಬಾಗಿಲನ್ನು ತೆಗೆದಳು.

" ಮೇಧಾ ಎಷ್ಟು ಹೊತ್ತು. "

" ಅಪ್ಪ ಹೇಗಿರುವನು ? "

" ಅಷ್ಟೇನು ಸಂಕಟವಿಲ್ಲ; ಸ್ವಲ್ಪ ಕಡಿಮೆಯಿರುವದು. "

" ಡಾಕ್ಟರರನ್ನು ಕರೆದುಕೊಂಡು ಬಂದಿರುವೆ. "

ಅವಳ ತಾಯಿಯು ಅವರನ್ನು ಒಳಗೆ ಬರಹೇಳಿದಳು.

ಕುಮಾರಿಲಭಟ್ಟರು ಮಲಗಿಕೊಂಡ ಕೋಣೆಗೆ ವಿದ್ಯಾಚರಣನನ್ನು ಮೇಧಾವಿನಿಯು ಕರೆದೊಯ್ದಳು. ಕುಮಾರಿಲಭಟ್ಟರು ನರಳುತ್ತ ಮಲಗಿಕೊಂಡಿದ್ದರು.

" ಅಪ್ಪಾ, ಡಾಕ್ಟರರು ಬಂದಿರುವರು " ಎಂದು ಹಾಸಿಗೆಯ ಬಳಿ ಕುಳಿತು ಮೇಧಾವಿನಿ ಹೇಳಿದಳು. ಅರೆ ತೆರೆದ ಕಣ್ಣುಗಳಿಂದ ವಿದ್ಯಾಚರಣನನ್ನು ನೋಡಿ ಕುಮಾರಿಲಭಟ್ಟರು ಸನ್ನೆಯಿಂದ ತಮ್ಮ ಹತ್ತರ ಕುಳಿತುಕೊಳ್ಳಲು ತಿಳಿಸಿದರು. ವಿದ್ಯಾಚರಣನು ಅವರ ಪ್ರಕೃತಿಯನ್ನು ಪರೀಕ್ಷಿಸಿ ಏನೂ ಚಿಂತೆ ಮಾಡುವ ಕಾರಣವಿಲ್ಲೆಂದೂ ನಿದ್ರೆ ಚನ್ನಾಗಿ ಹತ್ತಿದರೆ ಎಲ್ಲವೂ ಸರಿಯಾಗುವದೆಂದೂ ಹೇಳಿದನು.

" ಏನಾಗಿರುವದು " ಮೇಧಾವಿನಿ ಕೇಳಿದಳು.

" ಪಿತ್ತವಾಯು ಹೆಚ್ಚಾಗಿದ್ದರಿಂದ ಹೊಟ್ಟೆಯಲ್ಲಿ ಸಂಕಟ. ನಿದ್ರೆಯಿಂದ ವಾಯು ಕಡಿಮೆಯಾಗುವದು. "

" ನಿದ್ರೆ ಹತ್ತಲು ಏನಾದರೂ ಕೊಡುವಿರೋ ? "

" ಏನೂ ಬೇಡ. ನಿಂಬೇಹಣ್ಣಿನ ರಸದಲ್ಲಿ ನೀರು ಉಪ್ಪು ಕೂಡಿಸಿ ಕೊಡಿರಿ, ಸಾಕಿಷ್ಟು. ಏನೂ ಹೆದರುವ ಕಾರಣವಿಲ್ಲ. "

" ತಾವು ಹೇಳಿದ್ದು ನಾನು ಈ ಮೊದಲೇ ಕೊಟ್ಟಿರುವೆನು" ಎಂದು ಮೇಧಾವಿನಿಯ ತಾಯಿ ನುಡಿದಳು.

" ಕೊಟ್ಟಿದ್ದರೆ ಸಾಕು. ಇನ್ನೇನು ಬೇಡ. ನಿದ್ದೆ ಹತ್ತುವದು" ಎಂದು ವಿದ್ಯಾಚರಣನು ಮೇಧಾವಿನಿಯ ತಾಯಿಗೆ ಹೇಳಿದನು.

ಕುಮಾರಿಲಭಟ್ಟರ ಹೊಟ್ಟೆಯ ಮೇಲೆ ಕೈಯಾಡಿಸುತ್ತ ಮೂಲಾಧಾರ ಚಕ್ರದಿಂದ ಬರುವ ನರಗಳಲ್ಲೆರಡು ನರಗಳನ್ನು ನಾಭಿಯ ಮೇಲ್ಭಾಗದಲ್ಲಿ ತನ್ನೆರಡೂ ಹೆಬ್ಬೆಟ್ಟುಗಳಿಂದ ಗಟ್ಟಿಯಾಗಿ ಹಿಡಿದು ವಿದ್ಯಾಚರಣನು ತಿಕ್ಕಹತ್ತಿದನು. ಅನಾಹತ ಚಕ್ರದಿಂದ ಪಿತ್ತವಾಯು ಮೂಲಾಧಾರ ಚಕ್ರಕ್ಕೆ ಇಳಿಯಹತ್ತಿತು. ಅದು ಅಧೋಗಾಮಿಯಾದಂತೆ ಕುಮಾರಿಲ ಭಟ್ಟರು ' ಹಾ ' ಅನ್ನುತ್ತ ಕಣ್ಣುಮುಚ್ಚಿದರು.

ವಿದ್ಯಾಚರಣನು ನಾನಿನ್ನು ಹೋಗಿಬರುವೆನೆಂದು ಹೇಳಿ ಎದ್ದನು.

ಕುಮಾರಿಲಭಟ್ಟರ ಹೆಂಡತಿಯು ಚಿಂತಾತುರದಿಂದ ವಿದ್ಯಾಚರಣನ ಮೊಗವನ್ನು ನೋಡಿದಳು. ' ಅಮ್ಮಾ ತಾವು ಏನೂ ಚಿಂತೆ ಮಾಡುವದು ಬೇಡ. ಅವರಿಗೆಲ್ಲವೂ ನೆಟ್ಟಗಾಗುವದು. ನಾನು ಇಂಜಕ್ಶನ್ ಕೊಡಲಿಲ್ಲವೆಂದು ಅನ್ಯಥಾ ಭಾವಿಸಬಾರದು. ನರಗಳನ್ನು ತಿಕ್ಕಿದ್ದು ಅವರಿಗೆ

ಸಾಕು " ಎಂದು ವಿದ್ಯಾಚರಣನು ಹೇಳಿದನು.

" ಅವರಿಗೆ ಹೃದಯವಿಕಾರವಾಗಿರುವದೆಂದು ನನ್ನ ಸಂಶಯವಿತ್ತು. ಮೊನ್ನೆ ನಮ್ಮ ಗುರುತಿನವನೊಬ್ಬನು ಸಂಕಟವೆನ್ನುತ್ತ ಹೊರಳಾಡಿ ಪ್ರಾಣ ಬಿಟ್ಟನು. ಅದಕ್ಕೆ ನಾವು ಗಾಬರಿಗೊಂಡದ್ದು. ಜೀವದ ಪರಿವೆ ಇಲ್ಲದೆ ರಾತ್ರಿಯಲ್ಲಿ ಡಾಕ್ಟರರನ್ನು ಕರೆಯಲು ಮೇಧಾ ಧಾವಿಸಿ ಹೋ-ದಳು. ನಮ್ಮ ಬಡತನವನ್ನು ಲೆಕ್ಕಿಸದೆ ತಾವು ಬಂದಿರಿ" ಎಂದು ಮೇಧಾವಿನಿಯ ತಾಯಿಯು ನುಡಿದಳು.

" ಮೇಧಾವಿನಿ ಅವರಿಗೆ ದೀಪ ತೋರಿಸು. "

" ನನಗೆ ಕಾಣಿಸುವದು. ದೀಪ ಬೇಡ. ಹೋಗುವೆನು," ಎಂದು ಹೊರಟನು.

" ನಾವು ಬಡವರು. ನಮ್ಮಲ್ಲಿ ಏನೂ ಹಣವಿಲ್ಲ. ತಮ್ಮ ಫೀಯನ್ನು ಇನ್ನೆರಡು ದಿನಗಳಲ್ಲಿ ತಂದು ಕೊಡುವೆ, ತಪ್ಪಿಸುವದಿಲ್ಲ " ಎಂದು ಮೇಧಾವಿನಿ ಹೇಳಿದಳು.

" ನಾನು ಫೀಯನ್ನು ಕೇಳಿಲ್ಲ. "

" ತಾವು ಕೇಳದಿದ್ದರೇನಾಯಿತು ? ನಾವು ಹೇಳುವದು ನಮ್ಮ ಕರ್ತವ್ಯವಲ್ಲವೇ ? "

" ಅಮ್ಮನು ನನಗೆ ಮೊದಲೇ ಫೀ ಕೊಟ್ಟಿರುವಳು" ಎಂದು ವಿದ್ಯಾಚರಣನು ನುಡಿದನು.

ಇದನ್ನು ಕೇಳಿ ಲಜ್ಜಿತಳಾದ ಮೇಧಾವಿನಿ ತಲೆಬಗ್ಗಿಸಿಕೊಂಡು ನಿಂತಳು. ಮಾತನಾಡಲು ಮಾತು ಹೊರಡಲಿಲ್ಲ. ಏನುತ್ತರ ಕೊಡಬೇಕೆಂಬುದು ಅವಳಿಗೆ ತೋಚದಾಯಿತು.

" ನಮಸ್ಕಾರ, ಹೋಗಿಬರುವೆನು"ಎಂದು ನುಡಿದು ಮನೆಯ ಕಡೆಗೆ ಹೊರಟನು ವಿದ್ಯಾಚರಣನು.

ವಿದ್ಯಾಚರಣನನ್ನು ಮನೆಗೆ ಕಳುಹಿಸಿ ಬರುವೆನೆಂದು ತನ್ನ ತಾಯಿಗೆ ಹೇಳಿ ಮೇಧಾವಿನಿಯು ಅವನ ಬೆನ್ನು ಹಿಂದೆ ಲಗುಬಗೆಯಿಂದ ಹೊರಟಳು. ತಾಯಿಯನ್ನೇ ಧ್ಯಾನಿಸುತ್ತ ಖಿನ್ನಮನಸ್ಸಿನಿಂದ ವಿದ್ಯಾಚರಣನು ಭರದಿಂದ ಬೀದಿಯಲ್ಲಿ ಸಾಗಿದನು.

ಅವನ ಹಿಂದೆ ಬಂದು ಕೂಡಿಕೊಂಡ ಮೇಧಾವಿನಿಯು "ತಮ್ಮ ಕೈಯಲ್ಲಿಯ ಬ್ಯಾಗ ಕೊಡಿರಿ ತೆಗೆದುಕೊಂಡು ಬರುವೆ ಎಂದು ನುಡಿದಳು.

ವಿದ್ಯಾಚರಣನು ಗಾಬರಿಯಾಗಿ ಹಿಂತಿರುಗಿ ನೋಡಿದನು.

"ಬಹಳೇ ರಾತ್ರಿಯಾಗಿರುವದು, ನೀವು ಮನೆಗೆ ಹೋಗಿರಿ. ನನ್ನನ್ನು ಕಳುಹಿಸಲು ಬರಬೇಡಿರಿ."

"ತಮ್ಮುಪಕಾರಕ್ಕೆ ಇಷ್ಟು ನನ್ನದು ಬೇಡವೇ."

ತನ್ನ ಕೈಯಲ್ಲಿಯ ಬ್ಯಾಗನ್ನು ತೆಗೆದುಕೊಳ್ಳಲು ಹಿಡಿದ ಕೂಡಲೆ ನಿರುಪಾಯನಾಗಿ ವಿದ್ಯಾಚರಣನು ಅವಳಿಗೆ ಕೊಟ್ಟನು.

"ನೀವು ಇಷ್ಟು ರಾತ್ರಿಯಲ್ಲಿ ಬರಬಾರದಾಗಿತ್ತು. ನಿಮ್ಮನ್ನು ತಿರುಗಿ ಕಳುಹಿಸುವ ಬಗೆ ಹೇಗೆ? ತಿರುಗಿ ನಾನೇ ನಿಮ್ಮನ್ನು ಕಳುಹಿಸಲು ಬರಬೇಕೋ?"

"ಅದೇನೂ ಬೇಡ; ನಾನೊಬ್ಬಳೇ ತಿರುಗಿ ಬರುವೆ."

"ನಿಮ್ಮೊಬ್ಬರನ್ನು ತಿರುಗಿ ಕಳುಹಿಸಿದರೆ ನಾನು ಮೂರ್ಖನಲ್ಲವೇ?"

"ಹಾಗೇನು ತಿಳಿದುಕೊಳ್ಳಬೇಡಿ, ಬಡತನಕ್ಕೆ ಹೆದರದವರಿಗೆ ಅಂಜಿಕೆಯೇ ಇರುವದಿಲ್ಲ. ನಾನೊಬ್ಬಳೆ ತಿರುಗಿ ಹೋಗುವೆ. ತಮಗೆ ಇದರ ಬಗ್ಗೆ ಯೋಚನೆ ಬೇಡ."

"ತಮ್ಮ ಸಂಗಡ ನಮ್ಮಲ್ಲಿಯ ಆಳು ಭೈರುವನ್ನು ಕಳುಹಿಸಿ ಕೊಡುವೆ."

"ತಾಯಿಯು ಮರಣಶಯ್ಯೆಯಲ್ಲಿದ್ದರೂ ಅವಳನ್ನು ತಾವು ಬಿಟ್ಟು ಬಂದಿರಿ. ನಾವು ಬಡವರೆಂದು ನಾನು ಹೋಗಿ ಕೇಳಿದ ಡಾಕ್ಟರರೆಲ್ಲರೂ ಒಂದಿಲ್ಲೊಂದು ನೆವ ಹೇಳಿ ಬರಲಿಲ್ಲ. ತಮ್ಮ ಉಪಕಾರ ಮರೆಯಲು ಸಾಧ್ಯವಿಲ್ಲ" ಎಂದು ಮೇಧಾವಿನಿ ನುಡಿದಳು.

"ಹಣ ಗಳಿಸಲಿಕ್ಕೆ ಡಾಕ್ಟರನಾಗಬೇಡ. ಯಾವ ರೋಗಿಗಳು ಬಂದರೂ ಮೊದಲು ಉಪಚರಿಸು. ಅವರಿಗೆ ಧೈರ್ಯದ ಮಾತನ್ನು ಹೇಳು. ಅವರು ಗುಣವಾದ ಮೇಲೆ ಕೊಟ್ಟರೆ ಹಣವನ್ನು ತೆಗೆದುಕೊಳ್ಳು. ಬಡವರಿದ್ದರೆ ಹಣ ಕೊಟ್ಟರೂ ತಗೆದುಕೊಳ್ಳಬೇಡ, ಎಂದು ನಮ್ಮ ಅಮ್ಮ ಮೇಲಿಂದ ಮೇಲೆ ನನಗೆ ಹೇಳುತ್ತಿರುವಳು. ನಾನು ಕರ್ತವ್ಯ ಮಾಡಿರುವೆ.

ಕರ್ತವ್ಯದಲ್ಲಿ ಉಪಕಾರವಿರುವದಿಲ್ಲ. ಉಪಕಾರದಲ್ಲಿ ಕರ್ತವ್ಯವಿರುವದಿಲ್ಲ" ಎಂದು ಆತ ನುಡಿದನು.

ನಿರಭ್ರ ಆಕಾಶವು ಮೋಡಗಳಿಂದ ಕಲೆಯಿತು. ಚಂದ್ರನು ಅಡಗಿಕೊಂಡನು. ಬೀದಿಯಲ್ಲಿಯ ದೀಪಗಳು ಮಿಣಿ ಮಿಣಿ ಮಿನುಗುತ್ತಿದ್ದವು. ಕತ್ತಲೆ ಬೆಳಕುಗಳಲ್ಲಿ ಅವರೀರ್ವರು ನಡೆದಿದ್ದರು. ಮಳೆಯ ತಂಗಾಳಿ ಬೀಸಹತ್ತಿತು,

" ಮಳೆ ಬರುವದು, ಮಳೆಯಲ್ಲಿ ಸಿಗುವೆವು " ಅಂದನು ವಿದ್ಯಾಚರಣ.

" ನೀವು ಬಂದದ್ದು ತಪ್ಪಾಯಿತು. "

" ಮಳೆ ಬರಲಿಕ್ಕಿಲ್ಲ, ಮೋಡ ಕಲೆತರೆ ಮಳೆ ಬರುವದೋ. "

ವಿದ್ಯಾಚರಣನು ಅವಳ ಕೈಯಲ್ಲಿಯ ಬ್ಯಾಗನ್ನು ತೆಗೆದುಕೊಂಡು ಭರದಿಂದ ಹೆಜ್ಜೆ ಹಾಕಲು ಮೇಧಾವಿನಿಗೆ ಹೇಳಿದನು.

ಪ್ರಚಂಡ ಮಾರುತನು ಭರದಿಂದ ಬೀಸಹತ್ತಿದನು. ಆಕಾಶದಲ್ಲಿ ಮೋಡಗಳ ತಿಕ್ಕಾಟ ಪ್ರಾರಂಭವಾಯಿತು, ಮಾರುತನ ಹೊಡೆತದಿಂದ ಬಳಕುತ್ತಿದ್ದ ವೃಕ್ಷದಡಿಯಲ್ಲಿಯ ಲತೆಯು ವೃಕ್ಷವನ್ನಾಶ್ರಯಿಸುವಂತೆ ಗುಡುಗಿನ ಆರ್ಭಟಕ್ಕೆ ಕೋಲ್ಮಿಂಚಿನ ಸೆಳೆತಕ್ಕೆ ಗಾಬರಿಗೊಂಡ ಮೇಧಾವಿನಿ ವಿದ್ಯಾಚರಣನ ಹಸ್ತವನ್ನು ಬಿಗಿಯಾಗಿ ಹಿಡಿದು ನಡೆದಳು. ಮಳೆಗರೆಯಹತ್ತಿತು. ಮಿಂಚಿನ ಹೊಡೆತಕ್ಕೆ ದೀಪದ ಕಂಬದ ತಂತಿಗಳು ಕತ್ತರಿಸಿದ್ದರಿಂದ ದಾರಿ ದೀಪಗಳೆಲ್ಲವೂ ಆರಿ ಕತ್ತಲೆಯು ಬೀದಿಗಳನ್ನು ನುಂಗಿತು. ಗಾಬರಿಗೊಂಡ ದ್ವಾಸುಪರ್ಣಗಳು ಆಶ್ರಮಕ್ಕೆ ಧಾವಿಸುವಂತೆ ಮಳೆಯಲ್ಲಿ ತೋಯಿಸಿಕೊಂಡು ಗಾಬರಿಗೊಂಡ ಅವರೀರ್ವರೂ ಮನೆಯ ಕಡೆಗೆ ವೇಗದಿಂದ ಧಾವಿಸಿದರು. ಮನೆಯನ್ನು ಸಮೀಪಿಸಿದರು. ಮಳೆಯು ರಭಸದಿಂದ ಸುರಿಯಹತ್ತಿತು. ಗಾಳಿಯ ಹೊಡೆತಕ್ಕೆ ಎಷ್ಟೋ ಮನೆಗಳ ಮೇಲಿನ ಹಂಚುಗಳು ಹಾರಹತ್ತಿದವು.

ವಿದ್ಯಾಚರಣನು ಹೋದ ಮೇಲೆ ವೇದವತಿಯು ಕುಸಿಯಹತ್ತಿದಳು. ದೇಹದಲ್ಲಿಯ ರಕ್ತವೆಲ್ಲ ನೀರಾಗಿ ಬೆವರಿನಿಂದ ಹೋಗಹತ್ತಿತು. ದೇವ

ವತಿಯ ದೇಹಸ್ಥಿತಿಯನ್ನು ಕಂಡು ರಂಜನಿಯು ಗಾಬರಿಗೊಂಡಳು. ಎದೆಯನ್ನು ತಿಕ್ಕಿದಳು. ತಮ್ಮ ಆಸ್ಪತ್ರೆಗೆ ಫೋನು ಮಾಡಿದಳು. ಆಸ್ಪತ್ರೆಯಲ್ಲಿ ಫೋನು ತೆಗೆದುಕೊಳ್ಳುವವರು ಯಾರೂ ಇದ್ದಿಲ್ಲ.

ಕತ್ತಲೆಯಲ್ಲಿ ಎಡುವುತ್ತ ಮುಗ್ಗುತ್ತ ವಿದ್ಯಾರಚಣನು ಮೇಧಾವಿನಿಯೊಂದಿಗೆ ಮನೆಯ ತಲಬಾಗಿಲವನ್ನು ಮುಟ್ಟಿದನು. ಮಧುಮತಿಯು ವಿದ್ಯಾಚರಣನ ಹಾದಿಯನ್ನು ಕಾಯುತ್ತ ಅದೇ ಬಾಗಿಲಕ್ಕೆ ಬಂದು ನಿಂತಿದ್ದಳು. ಸಿಡಿಲು ಖಟ್ ಖಡಲ್ ಎಂದು ಸಪ್ಪಳ ಮಾಡುತ್ತ ಅವರ ಮನೆಯ ಮೇಲೆ ಹಾಯ್ದು ಅವರ ಕಣ್ಣುಗಳಿಗೆ ಪಂಜು ಹಚ್ಚಿ ಹೋಯಿತು. ಅದರ ಝುಳಕ್ಕೆ ಅವರ ಮನೆಯ ದೀಪದ ತಂತಿಗಳು ಕತ್ತರಿಸಿದವು. ದೀಪ ಆರಿದ ಕೂಡಲೇ ಇತ್ತ ವೇದವತಿಯ ಪ್ರಾಣ ಪಕ್ಷಿಯು ಹಾರಿಹೋ-ಯಿತು. ವಿದ್ಯಾಚರಣನಿಗೆ ವೇದವತಿಯು ಹಾರಿ ಮೇಲಕ್ಕೆ ಹೋಗಿ ವ್ಯೋಮ ಮಂಡಲದಲ್ಲಿ ಸೇರಿದಂತೆ ಭಾಸವಾಯಿತು.

“ ಅಮ್ಮಾ ” ಎಂದು ಕೂಗಿ ಪಡಸಾಲೆಯಲ್ಲಿ ಸ್ಮೃತಿ ತಪ್ಪಿ ಬಿದ್ದನು.

ಮನೆಯಲ್ಲಿ ಅಂಧಃಕಾರ.

## ೩

ಕುಮಾರಿಲಭಟ್ಟರು ಎಲೆಯನ್ನು ಅಡಕೊತ್ತಿನಿಂದ ಸಣ್ಣ ಮಾಡುತ್ತ ಹಜಾರದಲ್ಲಿ ಕುಳಿತುಕೊಂಡಿದ್ದರು. ಮಧ್ಯಾಹ್ನದ ಮನೆಗೆಲಸವನ್ನು ಮುಗಿಸಿ ಅವರ ಹೆಂಡತಿ ಮೈತ್ರೇಯಿ ಎಲೆಯನ್ನು ಹಚ್ಚುತ್ತ ಭಟ್ಟರೆಡಗಡೆಗೆ ಸ್ವಲ್ಪ ದೂರದಲ್ಲಿ ಕುಳಿತಿದ್ದಳು.

“ ವೇದವತಿಯು ತೀರಿಕೊಂಡು ಒಂದು ತಿಂಗಳಾಯಿತು. ಅವರ ಮನೆಗೆ ಹೋಗಿ ವಿದ್ಯಾಚರಣನನ್ನು ಮಾತನಾಡಿಸಿ ಬರಬಾರದೆ ? ಬಹಳೇ

ಜಡ್ಡಿನಲ್ಲಿದ್ದ ತನ್ನ ತಾಯಿಯನ್ನು ಬಿಟ್ಟು ಅಂದು ಅಪರಾತ್ರಿಯಲ್ಲಿ ಇಲ್ಲಿಯ ವರೆಗೆ ಬಂದು ನಿಮಗೆ ಔಷಧ ಕೊಟ್ಟು ಬದುಕಿಸಿದನು. ತಾಯಿಯ ಹತ್ತರ ಅವನಿದ್ದರೆ ಏನಾಗುತ್ತಿತ್ತೊ" ಎಂದು ಮೈತ್ರೇಯಿ ನುಡಿದಳು.

"ನಾನು ಅವಳನ್ನು ಚೆನ್ನಾಗಿ ಬಲ್ಲೆ. ಅವರ ಮನೆಗೆ ನಾ ಹೋದರೆ ಇಪ್ಪತ್ತು ವರ್ಷಗಳ ಹಿಂದೆ ಅವಳು ಪಟ್ಟ ಕಷ್ಟವು ನೆನಪಾಗಿ ಬಹಳೇ ದುಃಖವಾಗುವದು. ಎಷ್ಟೇ ಎಡರುಗಳು ಬಂದರೂ ಧೈರ್ಯದಿಂದ ಅವುಗಳನ್ನು ಎದುರಿಸಿದಳು. ಮಗನನ್ನು ಮುಂದೆ ತಂದಳು" ಅಂದರು ಕುಮಾರಿಲಭಟ್ಟರು.

"ಏನೇ ಇದ್ದರೂ ನೀವು ಹೋಗಿ ಹುಡುಗನಿಗೆ ಸಮಾಧಾನ ಹೇಳಿ ಬರಬೇಕು. ಏನೂ ಕವಡಿ ಪುರುಷಾರ್ಥವಿಲ್ಲದೆ ವೇಳ್ಯೆಯನ್ನು ಕಳೆಯುವಿರಿ."

"ಒಂದು ದಿವಸ ಬಿಡುವು ಮಾಡಿಕೊಂಡು ಹೋಗಿ ಬರುವೆ, ಅವರ ಮನೆಗೆ ಹೋದರೆ ಮಧುಮತಿಯನ್ನು ನೋಡಿದರೆ ನನಗೆ ಹಿಂದಿನದು ನೆನಪಾಗಿ ಊರುಬಿಟ್ಟು ಓಡಿ ಹೋಗಬೇಕೆಂದೆನ್ನಿಸುವದು."

ಗಂಡನ ಮಾತನ್ನು ಕೇಳಿ ಮೈತ್ರೇಯಿಗೆ ಸಿಡಿಲು ಬಡಿದಂತಾಯಿತು. ಎಲೆ ಹಚ್ಚುವದನ್ನು ಅಲ್ಲಿಯೇ ಬಿಟ್ಟು ನೆಟ್ಟ ಕಣ್ಣಿನಿಂದ ಭಟ್ಟರ ಮೊಗವನ್ನು ದುರುದುರುನೆ ನೋಡಿದಳು. ಕುಮಾರಿಲಭಟ್ಟರು ವೇದವತಿಯನ್ನಿಟ್ಟುಕೊಂಡಿದ್ದರೆಂಬ ಭಾವನೆ ಥಟ್ಟನೆ ಅವಳಲ್ಲಿ ಮೂಡಿತು. ತನ್ನ ಗಂಡನಿಗೂ ವೇದವತಿಗೂ ಇಷ್ಟು ದಟ್ಟ ಪರಿಚಯವಿದ್ದದ್ದು ಅವಳಿಗೆ ಗೊತ್ತಿದ್ದಿಲ್ಲ. ತನ್ನ ಜೀವಮಾನದಲ್ಲಿ ವೇದವತಿಯು ಒಂದು ದಿನವಾದರೂ ಕುಮಾರಿಲಭಟ್ಟರ ಮನೆಗೆ ಬಂದಿದ್ದಿಲ್ಲ. ಅವರು ಆಸ್ಪತ್ರೆಗೆ ಮೇಲಿಂದ ಮೇಲೆ ಹೋಗುವರೆಂಬುದಿಷ್ಟೇ ಗೊತ್ತು, ಭಟ್ಟರಾದರೂ ಅವರ ಮನೆಗೆ ಎಂದೂ ಹೋಗಿದ್ದಿಲ್ಲ.

ಕುಮಾರಿಲಭಟ್ಟನು ಚತುರನು; ಚಾಣಾಕ್ಷನು. ಹೆಂಡತಿಯ ಮುಖಭಾವದ ಮೇಲಿಂದ ಅವಳ ಮನದಿಂಗಿತವನ್ನು ಅರಿತುಕೊಂಡನು.

"ನೀನು ಮನಸ್ಸಿನಲ್ಲಿ ಮಾಡಿದ ಕಲ್ಪನೆ ಶುದ್ಧ ತಪ್ಪು. ವೇದವತಿಯು ಅಂತಹ ಮನುಷ್ಯಳಲ್ಲ. ಅವಳು ದಯಾಮುಖಿ."

" ನೀವು ಎಷ್ಟು ಹೇಳಿದರೂ ನಾನು ಹೇಗೆ ನಂಬಬೇಕು. ಹೆಣ್ಣು ಗಂಡಿನ ಸಂಬಂಧ ದೇವರಿಗೂ ತಿಳಿಯದ ವಿಷಯ. ಗಂಡಸು ಯಾವಾಗಲೂ ಹೆಂಗಸಿಗೆ ಸುಳ್ಳು ಹೇಳತಕ್ಕವನೇ ? "

" ಹೆಂಡತಿ ಗಂಡನಿಗೆ ಯಾವಾಗಲೂ ಸುಳ್ಳು ಹೇಳತಕ್ಕವಳೇ ? "

" ನಾನು ಸುಳ್ಳು ಹೇಳುತ್ತಿದ್ದರೆ ನನಗೆ ನೀವೇ ಹಾಕಿಕೊಟ್ಟ ಪಾಠ ತೀಡಿದಂತಾಯಿತು. "

" ಗಂಡ ಹೆಂಡಂದಿರು ಇಬ್ಬರೂ ಸತ್ಯ ಮಾತನಾಡಿದರೆ ಅವರು ವೈರಾಗಿಗಳಾಗಿರಬೇಕು. ಸತ್ಯಕ್ಕೆ ಸತ್ಯದಿಂದ ಸಂಸಾರವಾಗುವದಿಲ್ಲ. ಅಸತ್ಯಕ್ಕೆ ಅಸತ್ಯ ಬೆರೆತರೆ ಸಂಸಾರವಾಗುವದು. ಸುಳ್ಳುಮಯ ಸಂಸಾರ; ನಾನು ನೀನು ಮಾಡುವ ಸಂಸಾರ "

" ನೀವು ಮುದುಕರಾಗಿ ಹೀಗೆ ಮಾತನಾಡಿದರೆ ನಿಮ್ಮ ಮಕ್ಕಳು ಹೇಗೆ ಮಾತನಾಡಬೇಕು ? ನಿಮ್ಮ ಇತ್ತಂಡ ಮಾತುಗಳನ್ನು ಇನ್ನು ಮೇಲಾದರೂ ಬಿಡಬಾರದೇ ? "

" ಹುಟ್ಟು ಸ್ವಭಾವ ಸುಟ್ಟರೂ ಹೋಗದು. ಅದಕ್ಕೇನು ಮಾಡಬೇಕು. ನನ್ನ ಮಗನು ನನಗಿಂತ ಒಂದು ಹೆಜ್ಜೆ ಮುಂದೆ ಹೋಗಿರುವನು."

"ಅವನು ಸುಳ್ಳನಲ್ಲ. ಪ್ರವೀಣನಾಗಿದ್ದರೆ ನಿಮ್ಮನ್ನು ಹೊಂದಿಕೊಂಡು ಇರುತ್ತಿದ್ದ. ಒಂದು ಪೂರ್ವ ಮತ್ತೊಂದು ಪಶ್ಚಿಮ. ಎರಡೂ ಕೂಡುವ ಹಾಗಿಲ್ಲ. "

" ನೀನು ಯಾವಾಗಲೂ ಮಗನನ್ನು ಮೇಲುಗಟ್ಟುವವಳೇ ?"

" ಇರಲಿ; ಅವಳು ಯಾರ ಮಗಳು ? "

" ಅದನ್ನು ನಾನು ಹೇಳಲಾರೆ. "

" ಅವಳು ಯಾರ ಮಗಳು ? " ಮತ್ತೊಮ್ಮೆ ಕೇಳಿದಳು.

" ಅವಳು ನನ್ನ ನಿನ್ನ ಮಗಳು. "

" ಸನಗರಿಯುದೆ ನಿಮ್ಮ ನನ್ನ ಮಗಳು ಹೇಗಾಗುವಳು. "

" ಆಗದಿದ್ದರೆ ಬಿಟ್ಟು ಬಿಡು. "

" ನಾನಾಡಿದ್ದು ಬಿಟ್ಟು ಬಿಡಬಹುದು. ನೀವಾಡಿದ್ದು ಬಿಟ್ಟು ಬಿಡಲು

ಬರುವದೊ ? ಸಂಶಯದ ಬೀಜ ಮನದಲ್ಲಿ ಬಿತ್ತಿ ಬಿಡೆಂದರೆ ಮನಸ್ಸು ಹೇಗೆ ಬಿಡುವದು."

"ತಿಳಿದು ಕೊಂಡಹಾಗೆ ಮನವು."

"ಬುದ್ಧಿಗೆ ಹೊಳೆದದ್ದು ತಿಳಿದುಕೊಂಡೆ."

"ಹೆಂಗಸರಿಗೆ ಬುದ್ಧಿ ಇಲ್ಲವೆಂದು ಹೇಳುವದು ಇದಕ್ಕೆ."

"ಅಡಗೆಯ ಮನೆಯಲ್ಲಿರುವ ನಮಗೆ ಬುದ್ಧಿ ಇರದಿದ್ದರೆ ನಡೆಯುವದು; ಹೊರಗೆ ತಿರುಗಾಡುವವರಿಗೆ ಇದ್ದರೆ ಸಾಕು."

ದೂರದಲ್ಲಿ ಮೇಧಾವಿನಿಯು ಬರವನ್ನು ಕುಳಿತಲ್ಲಿಂದಲೇ ಭಟ್ಟರು ನೋಡಿದರು.

"ಮೇಧಾವಿನಿ ಯಾರನ್ನೋ ಕರೆದುಕೊಂಡು ಬರುತ್ತಿರುವಳು."

"ಯಾರಾದರೂ ಅವಳ ಕಾಲೇಜಿನ ಗೆಳತಿಯಿರಬಹುದು."

"ಅವಳು ಇಂದಿಗೂ ಯಾರನ್ನೂ ಮನೆಗೆ ಕರೆದುಕೊಂಡು ಬಂದಿರಲಿಲ್ಲ. ನಮ್ಮದು ಬಡತನದ ಬಾಳುವೆಯೆಂದು ಅವಳಿಗೆ ಗೊತ್ತು. ಜನರ ಮುಂದೆ ನಮ್ಮ ಬಡತನವನ್ನು ಮುಚ್ಚಿಟ್ಟುಕೊಳ್ಳಬೇಕಾಗುವದು."

"ಬಡತನವಿರುವದೆಂದು ಹೇಳಲು ನಾಚಿಕೆಯೇಕೆ ? ಅವರ ಮನೆಯ ಬಾಗಿಲಕ್ಕೆ ನಾವು ಕೈಯೊಡ್ಡಿ ಭಿಕ್ಷೆ ಬೇಡಲು ಹೋಗಿ ನಿಲ್ಲು-ವದಿಲ್ಲ."

"ಬಡವನೆಂದು ಹೇಳುವವನು ಜನರ ಕೀಳುದೃಷ್ಟಿಯಲ್ಲಿ ಬರುವನು. ಅಪ್ರತಿಷ್ಠರಿದ್ದರೂ ತಾವು ಸನ್ಮಾನ್ಯ ಪ್ರತಿಷ್ಠಿತರೆಂದು ತಿಳಿದು ಕೊಂಡ ಜನರು ತಮ್ಮ ಬಾಲ್ಯದ ಗೆಳೆಯನು ಬಡತನದಲ್ಲಿ ತೊಳಲಾಡುತ್ತಿದ್ದರೆ ಅವನ ನೆರಳಿಗೆ ಹೆದರಿ ಓಡಿ ಹೋಗುವರು. ಅವರ ಬಡತನದ ಭೂತ ತಮಗೆ ಬಡಿಯಬಹುದೆಂದು ಅಂಜುವರು. ಈಗಿನ ಕಾಲದಲ್ಲಿ ಬಡವರೆಂದು ತೋರಿಸದಿರುವದೇ ಕ್ಷೇಮ. ಜನರ ವಿಥ್ಯಾಚಾರಕ್ಕೆ ನಾವು ಹೆದರಬೇಕಾಗುವದು," ಎಂದು ಕುಮಾರೀ ಭಟ್ಟರು ನುಡಿದರು.

ಮೇಧಾವಿನಿಯು ಒಳಗೆ ಬಂದು ತನ್ನ ಹಿಂದೆ ನಿಂತಿದ್ದವಳನ್ನು ತೋರಿಸುತ್ತ,

"ಅಮ್ಮಾ, ಇವಳು ಮಧುಮತಿ. ನಮ್ಮ ಡಾಕ್ಟರ ವಿದ್ಯಾಚರಣರ

ತಂಗಿ. ಇವಳು ಬಿ. ಎ. ದಲ್ಲಿ ಓದುತ್ತಿರುವಳು. ಈ ವರುಷ ಕೊನೆಯ ಬಿ. ಎ. ಪರೀಕ್ಷೆಗೆ ಕುಳಿತುಕೊಳ್ಳುವಳು. ಪರೀಕ್ಷೆಗೆ ತತ್ವ ಹಾಗೂ ಮಾನಸ ಶಾಸ್ತ್ರ ತೆಗೆದುಕೊಂಡಿರುವಳು " ಎಂದು ನುಡಿದಳು.

" ಮಗು ಬಾ, ಕುಳಿತುಕೋ, ಎಂದು ಮೈತ್ರೇಯಿ ಮಧುಮತಿಯನ್ನು ಅಕ್ಕರತೆಯಿಂದ ಕರೆದಳು.

ಮಧುಮತಿಯು ಮೈತ್ರೇಯಿಯ ಬದಿಯಲ್ಲಿ ಓರಣವಾಗಿ ಕುಳಿತುಕೊಂಡಳು. ತನ್ನ ದೃಷ್ಟಿ ಚಾಪಲ್ಯದಿಂದ ಅವರು ಕುಳಿತುಕೊಂಡ ಹಜಾರವನ್ನು ಸೂಕ್ಷ್ಮವಾಗಿ ನಿರೀಕ್ಷಿಸಹತ್ತಿದಳು. ಮೈತ್ರೇಯಿ ಮಧುಮತಿಯನ್ನು ನೋಡಿ ಚಲುವೆ ಹುಡುಗಿಯೆಂದು ಸಂತೋಷಪಟ್ಟಳು. ಹುಡುಗಿಯು ಎಷ್ಟು ಬೆಳೆದಿರುವಳೆಂದು ಕುತೂಹಲದಿಂದ ಕುಮಾರಿಲಭಟ್ಟರು ಆಪಾದಮೌಳಿಪರಿಯಂತ ಮಧುಮತಿಯನ್ನು ಎವೆ ಬಡಿಯದೆ ನೋಡಹತ್ತಿದರು. ತನ್ನಲ್ಲಿ ನಟ್ಟ ಭಟ್ಟರ ದೃಷ್ಟಿಯನ್ನು ಕಂಡು ' ಭಟ್ಟರೇ, ಅಡಕೊತ್ತು ನಿಮ್ಮ ಬೆರಳನ್ನು ಕತ್ತರಿಸಬಹುದು. ಕಣ್ಣಿಟ್ಟು ಉಪಯೋಗಿಸಿದರೆ ನೆಟ್ಟಗೆ "ಎಂದು ಮಧುಮತಿಯು ನುಡಿದಳು.

ಅವಳ ಮಾತು ಭಟ್ಟರ ಮೊಗಗೆಡಿಸಿತು. ಪತಿಯ ಸಪ್ಪಗಿನ ಮೊಗವನ್ನು ಕಂಡು ಮೈತ್ರೇಯಿಯ ಮೊಗದ ಮೇಲೆ ನಸುನಗೆ ಸುಳಿಯಿತು. ಮೇಧಾವಿನಿಯು ತನ್ನ ಕೋಣೆಯಲ್ಲಿ ಪುಸ್ತಕಗಳನ್ನಿಟ್ಟು ಹೊರಗೆ ಬಂದು ' ಅಮ್ಮಾ ' ಚಹ ಮಾಡಿಕೊಂಡು ಬರುವೆನೆಂದು ಹೇಳಿ ಹೋದಳು.

" ನಿಮ್ಮ ಅಮ್ಮನು ಸಾಯುವ ಮುಂದೆ ಏನಾದರೂ ಹೇಳಿದಳೋ," ಎಂದು ಮೈತ್ರೇಯಿ ಕೇಳಿದಳು.

" ಏನೂ ಹೇಳಲಿಲ್ಲ. ಪ್ರಾಣ ಹೋಗುವ ಮುಂಚೆ ' ಚಾ-ರು-ವೇ' ಇಷ್ಟೇ ಅಸ್ಪಷ್ಟ ಅಕ್ಷರಗಳನ್ನು ನುಡಿದಳು. ಅವುಗಳರ್ಥ ನಮಗೇನೂ ಆಗಿರುವದಿಲ್ಲ. "

" ವಿದ್ಯಾಚರಣನಿಗೂ ಅರ್ಥವಾಗಿಲ್ಲವೇ ? " ಮೈತ್ರೇಯಿ ಕೇಳಿದಳು.

" ಅವನಿಗೆ ನಾನು ಈ ಅಕ್ಷರಗಳನ್ನು ಹೇಳಿದೆ. ಅವನಿಗೆ ಅರ್ಥವಾಗಿರುವದೋ ಇಲ್ಲವೋ ನನಗೆ ಗೊತ್ತಿಲ್ಲ. "

" ಸಾಯುವ ಮುಂದೆ ಮನುಷ್ಯ ಏನಾದರೂ ಬಡಬಡಿಸುವನು.

ಅದಕ್ಕೆ ಮಹತ್ವವೇ ಇಲ್ಲ ” ಎಂದು ಭಟ್ಟರು ನುಡಿದರು.

“ ತಿಳಿದರೆ ಮಹತ್ವ. ತಿಳಿಯದಿದ್ದರೆ ಹೇಗೆ ಮಹತ್ವ ಬರುವದು ” ಎಂದು ಎಲೆ ಹಚ್ಚುತ್ತ ಮೈತ್ರೇಯಿ ನುಡಿದಳು.

“ ಮಹತ್ವ ಕೊಡಲು ನಮ್ಮ ಭಾವನೆಯಂತೆ ಅವುಗಳಲ್ಲಿ ಅರ್ಥ ತುಂಬ ಬೇಕಾಗುವದು. ಅರ್ಥ ಕೊಡದಿದ್ದರೆ ಮಹತ್ವವೇ ಬರುವದಿಲ್ಲ.”

ಮಧುಮತಿಯ ಮಾತುಗಳನ್ನು ಕೇಳಿ ಹುಡುಗಿಯು ಮಾತಿನಲ್ಲಿ ಚಪಲಳಿರುವಳು ” ಎಂದು ಕುಮಾರಿಲಭಟ್ಟರು ನುಡಿದರು.

“ ನಾನು ಇದ್ದದ್ದು ಹೇಳಿದೆ. ಹೆಚ್ಚಿನ ಹೊಸದೇನನ್ನೂ ಹೇಳಲಿಲ್ಲ. ನಾನು ಸ್ವಲ್ಪ ವಾಚಾಳಿ, ಕ್ಷಮಿಸಬೇಕು, ಭಟ್ಟರೇ, ” ಎಂದು ಮಧುಮತಿ ಅಂದಳು.

ಮೇಧಾವಿನಿಯು ಚಹ ತೆಗೆದುಕೊಂಡು ಬಂದು ಮಧುಮತಿಗೆ ಹಾಗೂ ಭಟ್ಟರಿಗೆ ಕೊಟ್ಟು ತಾನೂ ಕುಡಿಯುತ್ತ ಮಧುಮತಿಯ ಹತ್ತರ ಕುಳಿತುಕೊಂಡಳು.

“ ಅಮ್ಮಾ, ಮೊನ್ನೆ ನಾನು ವಿದ್ಯಾಚರಣರ ಮನೆಗೆ ಹೋದಾಗ್ಗೆ ಮಧುಮತಿಯ ಪರಿಚಯವಾಯಿತು. ಒಂದೇ ಕಾಲೇಜದಲ್ಲಿದ್ದರೂ ಒಬ್ಬರ ಪರಿಚಯ ಒಬ್ಬರಿಗಿದ್ದಿಲ್ಲ. ನಾನು ಕಾಲೇಜದಲ್ಲಿ ವಿಶೇಷ ಪರಿಚಯ ಮಾಡಿಕೊಂಡಿಲ್ಲ. ”

“ ಜಾಣ ಹುಡುಗಿಯರು ಹೆಚ್ಚಾಗಿ ಪರಿಚಯ ಮಾಡಿಕೊಳ್ಳುವದಿಲ್ಲ. ನನ್ನಂತಹ ಖಿಲಾಡಿ ಹುಡುಗಿಯರಿಗೆ ಬಹಳ ಜನರ ಪರಿಚಯಬೇಕಾಗುವದು. ನಾನು ಮಾತನಾಡುವದನ್ನು ಕೇಳಲು ಕೆಲವರು ಬೇಕಲ್ಲವೇ ” ಎಂದು ಮಧುಮತಿ ನುಡಿದಳು.

“ ಹೆಚ್ಚು ಜನರ ಪರಿಚಯ ಮಾಡಿಕೊಳ್ಳುವದು ಅವರವರ ಸ್ವಭಾವದ ಮೇಲಿರುವದು ” ಎಂದು ಮೇಧಾವಿನಿಯು ಹೇಳಿದಳು.

“ ನಿನ್ನದು ತೀಕ್ಷ್ಣ ಬುದ್ಧಿ, ಪ್ರಗಲ್ಭವಿಚಾರ. ಆದುದರಿಂದ ಪರರ ಪರಿಚಯವೇ ಬೇಕಾಗುವದಿಲ್ಲ. ವಿಚಾರ ವಾಹಿನಿಯಲ್ಲಿ ತೇಲಾಡುತ್ತ ಹೋಗುವಿ. ಅನಾವಶ್ಯಕ ಪರಿಚಯ ವಿಚಾರಕ್ಕೆ ಆತಂಕ ” ಮಧುಮತಿ ನುಡಿದಳು.

" ಅಮ್ಮಾ, ಇವಳದು ಕೋಗಿಲ ಕಂಠ. ಹಾಡಹತ್ತಿದರೆ ಎಲ್ಲರೂ ಮೈ ಮರೆತು ಆನಂದದಲ್ಲಿ ಮುಳುಗುವರು, ನೃತ್ಯದಲ್ಲಿ ಮಿಗಿಲಾದವಳು."

" ನನಗೆ ಸ್ವಲ್ಪ ಹಾಡಲು ಬರುತ್ತದೆ. ನೃತ್ಯದಲ್ಲಿ ಸ್ವಲ್ಪ ಗತಿಯುಂಟು. ಮೇಧಾವಿನಿಯು ನುಡಿದಷ್ಟು ನಾನಿರುವದಿಲ್ಲ. ತನಗೆ ಬೇಕಾದವಳೆಂದು ನನ್ನನ್ನು ಹೆಚ್ಚಾಗಿ ಹೊಗಳುವಳು. ಮಧ್ಯಮ ತರಗತಿಯವಳೆಂದರೆ ಸೈ"

' ಗಾಯನ ನೃತ್ಯ ಕುಲೀನ ಸ್ತ್ರೀಯರಿಗೆ ಶೋಭಿಸುವದಿಲ್ಲ. ಅದು ಹಿಂದಕ್ಕೆ ದೇವದಾಸಿಯರ ಕಲೆಯು ' ಎಂದು ಕುಮಾರಿಲಭಟ್ಟರು ಏನೋ ವಿಚಾರ ಮಾಡುತ್ತ ಥಟ್ಟನೆ ನುಡಿದರು.

ತಂದೆಯ ಮಾತು ಕೇಳಿ ಮೇಧಾವಿನಿಯು ಮನದಲ್ಲಿ ಸಂಕಟಪಟ್ಟಳು. ತಾತ ಈ ಮಾತು ಆಡಬಾರದಾಗಿತ್ತೆಂದು ನೊಂದುಕೊಂಡಳು. ಮಧುಮತಿಯ ಲಕ್ಷ್ಯವನ್ನು ಬೇರೆ ಕಡೆಗೆ ಎಳೆಯಬೇಕೆಂದು ' ನನ್ನ ಕೋಣೆಯನ್ನು ತೋರಿಸುವೆನು ಬಾ ' ಎಂದು ನುಡಿದಳು.

ಮಧುಮತಿಗೆ ಯಾರಾದರೂ ವಾದಿಸುವವರು ಸಿಕ್ಕರೆ ಸಾಕು, ಅವರ ಬಾಯಿಯನ್ನು ಬಂದು ಮಾಡುವವರಿಗೆ ಬಿಡದ ಸ್ವಭಾವದವಳು.

" ಸ್ತ್ರೀಯರಲ್ಲಿ ಕುಲೀನ, ಅಕುಲೀನ ಭೇದಗಳಿಲ್ಲ. ನಮಗೆ ಬೇಕಾದವರು ಕುಲೀನರು, ಬೇಡಾದವರು ಅಕುಲೀನರು. ನಾನು ನಿಮಗೆ ಬೇಕಾದರೆ ಕುಲೀನಳು, ಬೇಡಾದರೆ ಅಕುಲೀನಳು. ಪ್ರತಿಯೊಬ್ಬನಿಗೆ ಗಾಯನ ಕೇಳುವದು ಬೇಕು, ನೃತ್ಯ ನೋಡುವದು ಬೇಕು, ಆದರೆ ತನ್ನ ಹೆಂಡತಿ ಗಾಯನ ನೃತ್ಯ ಮಾಡಬಾರದು. ಪರರ ಹೆಂಡಂದಿರು, ಪರರ ಹೆಂಗಸರು ಮಾಡಬೇಕು, ಅದನ್ನು ನೋಡಿ ಆನಂದ ಪಡಬೇಕು " ಎಂದು ಮಧುಮತಿಯು ಭಟ್ಟರಿಗೆ ಹೇಳಿದಳು.

ಮಧುಮತಿಯ ಮಾತುಗಳನ್ನು ಕೇಳಿ ಮೈತ್ರೇಯಿ ಬೆಪ್ಪಾಗಿ ಕುಳಿತು ಪತಿಯ ಮೊಗವನ್ನು ನೋಡಿದಳು. ಹುಡುಗಿಯ ಮಾತುಗಳನ್ನು ಕೇಳಿ ಭಟ್ಟರ ಮೊಗದ ಮೇಲೆ ಆಶ್ಚರ್ಯದ ಭಾವನೆ ಮೂಡಿತು. ಭಟ್ಟರು ಹಟವಾದಿ, ಮಧುಮತಿಯಾದರೂ ಇತ್ತಂಡವಾದಿಯು. ಮಧುಮತಿಯನ್ನು ಕೆರಳಿಸಬೇಕೆಂದು ಭಟ್ಟರು ಮಾಡಿದರು.

" ಹಿಂದಕ್ಕೆ ತಮ್ಮ ಸಂಗೀತ, ವಾದ್ಯ, ನೃತ್ಯ ಮಧುರಲಾಸ್ಯಗಳಿಂದ ದೇವದಾಸಿಯರು ದೇವರನ್ನು ಸಂಪ್ರೀತಿಗೊಳಿಸುತ್ತಿದ್ದರು. ಸಾಂಪ್ರತಕ್ಕೆ ಜೀವನದಲ್ಲಿ ಪತಿತರ ಕಲೆಯಾಗಿರುವದು. ಗಾಯಕರು ನರ್ತಕಿಯರು ಕಂದರ್ಪನ ಸೇನಾನಿಗಳು. "

" ದೇವದಾಸಿಯುವರು ಕಂದರ್ಪನ ಸೇನಾನಿಗಳಿದ್ದಿಲ್ಲವೇ ? "

" ಛೀ ಅನಾರ್ಯರಂತೆ ಮಾತನಾಡಬಾರದು. ಅವರು ದೇವದಾಸಿಯರು. "

" ಕಲ್ಲು ದೇವರಿಗೋ; ಜೀವಂತ ದೇವರಿಗೋ ? "

" ನೀನು ಇನ್ನೂ ಸಣ್ಣವಳು. ನಿನಗೆ ತಿಳಿಯದು. "

" ನಿಮ್ಮ ದೃಷ್ಟಿಯಿಂದ ನನಗೆ ತಿಳಿಯಲಿಕ್ಕಿಲ್ಲ, ನನ್ನ ದೃಷ್ಟಿಯಿಂದ ನೀವು ಮುದುಕರಾಗಿದ್ದರಿಂದ ತಿಳಿಯಲಿಕ್ಕಿಲ್ಲ. "

" ಇನ್ನೂ ನಿನ್ನ ತಲೆಯ ಮೇಲಿನ ಮಾಸ ಹಾರಿರುವದಿಲ್ಲ. ಜೀವನದಲ್ಲಿಯ ಅನುಭವ ಬಂದಿರುವದಿಲ್ಲ. ನಿನಗೆ ತಿಳಿಯುವ ಬಗೆಯಾದರೂ ಹೇಗೆ ? "

" ನಿಮ್ಮ ಜೀವನದ ಅನುಭವದಿಂದ ತಿಳಿಯುವದು ನನಗೆ ಬೇಡ. ನನ್ನ ಅನುಭವದಿಂದ ನನಗೆ ಏನು ತಿಳಿಯುವದೋ ಅಷ್ಟು ಸಾಕು. "

" ಹಿಂದಿನವರು ಕ್ವಚಿತ್‌ಗಾನಿ ಪತಿವ್ರತಾ " ಎಂದು ಹೇಳಿರುವರು. ಕುಮಾರಿಲಭಟ್ಟರು ನುಡಿದರು.

" ತಾವು ಹೇಳಿದ್ದು ಕೇಳಿದೆ— ಆದರೆ ಈಗಿನವರು ಅನ್ನುವದು ತಾವು ಕೇಳಿದಂತೆ ಕಾಣಿಸುವದಿಲ್ಲ. "

" ಅದೇನು ? "

" ಕ್ವಚಿತ್ ಸ್ತ್ರೀ ಪತಿವ್ರತಾ, ಎಂದು ಅನ್ನುವರು. ಇದಕ್ಕೆ ನೀವೇನು ಅನ್ನುವಿರಿ ? "

" ಇಂತಹ ಮಾತುಗಳನ್ನು ಬಾಯಿಂದ ಆಡಬಾರದು. "

" ಸೊನ್ನೆ ಮಾಡಿ ತಿಳಿಸಬೇಕೋ ? "

" ನೀನು ಸ್ತ್ರೀಯಲ್ಲವೇ. ನೀನು ಹೀಗೆ ಆಡಿದರೆ ಹೇಗೆ. "

" ಕ್ವಚಿತ್ ನರಃ ಪತ್ನೀವ್ರತಾ ಇದನ್ನೂ ನೀವು ಕೇಳಿರಲಿಕ್ಕಿಲ್ಲ, ಇದು

ಸತ್ಯವೋ ಅಸತ್ಯವೋ ನೀವೇ ಹೇಳಿರಿ. ನಾನು ಹೇಳಿದ್ದು ಈ ಶತಮಾನದ ಬಿಡಿ ಮುತ್ತುಗಳು. ಎಲ್ಲರೂ ಹೀಗೆ ಇರುವರೆಂದು ನಾ ಹೇಳುವದಿಲ್ಲ. ಜನಸಾಮಾನ್ಯರೆಲ್ಲರೂ ಹೀಗೆಯೆ. ನಾನು-ನೀವು ಜನಸಾಮಾನ್ಯರು. ಮೈತ್ರೇಯಿ, ಮೇಧಾವಿನಿ, ಹಾಗೂ ವಿದ್ಯಾಚರಣ ಜನಸಾಮಾನ್ಯರಲ್ಲ. ವೇದವತಿಯು ಇವರೆಲ್ಲರಿಗಿಂತ ಮುಂದೆ" ಎಂದು ಮಧುಮತಿಯು ನುಡಿದಳು.

ಕುಮಾರಿಲಭಟ್ಟರು ಮಧುಮತಿಯ ಮಾತುಗಳನ್ನು ಕೇಳಿ ನಿರುಪಾಯನಾಗಿ ಎದ್ದು ಒಳಗೆ ಹೋದನು. ಮೇಧಾವಿನಿ ಮನದಲ್ಲಿ ನೊಂದು ಕೊಂಡಳು.

"ಮೇಧಾವಿನಿ, ನೀನು ಮನದಲ್ಲಿ ನೊಂದುಕೊಂಡಂತೆ ತೋರುವದು ಏನೋ ಮಾತಿನ ಭರದಲ್ಲಿ ಹಿಂದು ಮುಂದೆ ನೋಡದೆ ಮಾತನಾಡಿದೆ. ನಾನು ಮಾತನಾಡಹತ್ತಿದರೆ ನನ್ನ ಬುದ್ಧಿಯು ಸ್ವಾಧೀನದಲ್ಲಿರುವದಿಲ್ಲ. ಎಷ್ಟೋ ಮುಂದೆ ಓಡುವದು. ಮಾತುಗಳು ಹಿಂದೆ ಬೀಳುವವು, ಅಕಸ್ಮಾತ್ತಾಗಿ ನಿಮ್ಮ ಮನೆಗೆ ಬಂದು ನಿನ್ನ ಮನವನ್ನು ನೋಯಿಸಿದೆ. ದಯವಿಟ್ಟು ಕ್ಷಮಿಸು. ನನಗೆ ಪರಿಚಯವಾದ ಮೇಲೆ ನಿನ್ನನ್ನು ಅಕ್ಕನೆಂದು ತಿಳಿದುಕೊಂಡಿರುವೆನು. ಅಕ್ಕನು ತಂಗಿಯ ತಪ್ಪನ್ನು ಕ್ಷಮಿಸುವಂತೆ ನನ್ನ ತಪ್ಪನ್ನು ಕ್ಷಮಿಸಬೇಕು" ಎಂದು ಮಧುಮತಿಯು ನುಡಿದು ನಮಸ್ಕಾರ ಮಾಡಿ ಹೊರಟು ಹೋದಳು.

"ಮಧುಮತಿ ನಿಲ್ಲು, ನಾ ಬರುವೆ" ಎಂದು ಮೇಧಾವಿನಿ ಕೂಗಿದರೂ ನಿಲ್ಲದೆ ಹಾಗೇ ಹೊರಟು ಹೋದಳು.

"ಅಮ್ಮಾ ನಾನು ಅವಳ ಮನೆಯವರೆಗೆ ಹೋಗಿಬರುವೆ" ಎಂದು ಹೇಳಿ ಅವಳೂ ಮಧುಮತಿ ಹಿಂದೆ ಹೊರಟಳು.

ಮಧುಮತಿಯು ಬಹಳೇ ದೂರ ಹೋದದ್ದು ಕಂಡು ಮೇಧಾವಿನಿಯು ಅವಸರದಿಂದ ಅವಳ ಹಿಂದೆ ಸಾಗಿದಳು. ಕೆಲವು ನಿಮಿಷಗಳ ಮೇಲೆ ಬೀದಿಯಲ್ಲಿ ರಂಜನಿಯು ಮೇಧಾವಿಯನ್ನು ಕೂಡಿಕೊಂಡಳು. ಮೇಧಾವಿನಿಯನ್ನು ಕಂಡು ರಂಜನಿಗೆ ತುಂಬಾ ಆನಂದವಾಯಿತು.

"ಎತ್ತ ಹೊರಟದ್ದು" ಎಂದು ರಂಜನಿ ಕೇಳಿದಳು.

ತಾನು ಹೊರಟ ಸಮಾಚಾರವನ್ನು ಅರುಹಿದಳು.

" ಇಷ್ಟು ಮನಸ್ಸಿಗೆ ಹಚ್ಚಿಕೊಳ್ಳಬಾರದು. ಮಧುಮತಿಯು ಬಹಳ ವಿಚಿತ್ರ ಹುಡುಗಿ. ವೇದವತಿಯ ಎದುರಿಗೆ ಮಾತ್ರ ಬಾಯಿಗೆ ಬೀಗ ಹಾಕಿಕೊಳ್ಳುತ್ತಿದ್ದಳು. ಅವಳನ್ನು ತಡವಿದರೆ ಸಾಕು. ಮಾತನಾಡಿ ಸಿದ್ದು ತಪ್ಪಾಯಿತೆಂದೆನಿಸಿ ಬಿಡುವಳು " ಎಂದು ರಂಜನಿಯು ನುಡಿದಳು.

" ಅವಳ ಮಾತಿನಲ್ಲಿ ಅಸಂಬದ್ಧತೆಯಿರುವದಿಲ್ಲ; ತರ್ಕಯುಕ್ತ ಇರುವದು, ಮಾತು ಮೃದುವಾದರೂ ಬಹು ತೀಕ್ಷ್ಣ " ಮೇಧಾವಿನಿ ಅಂದಳು.

" ನಿಮ್ಮ ಪರೀಕ್ಷೆ ಬಂದಿರಬಹುದಲ್ಲ. "

" ಇನ್ನು ಎರಡು ತಿಂಗಳಲ್ಲಿರುವದು. "

" ಕೊನೆಯ ಎಂ. ಎ. "

" ಹೌದು. "

" ನಾನು ವಿದ್ಯಾಚರಣನ ಮನೆಗೇ ಹೊರಟಿರುವೆನು. ನಾನು ಮಧು ಮತಿಗೆ ಹೇಳುವೆನು. "

" ನಾನು ಮನೆಯವರೆಗೆ ಬಂದು ಅವಳನ್ನು ಭೆಟ್ಟಿಯಾಗಿ ಹೋಗ ಬೇಕೆಂದು ಮಾಡಿರುವೆನು. "

" ವಿದ್ಯಾಚರಣನ ಭೆಟ್ಟಿಯಾದರೂ ಆಗಬಹುದು. "

" ಅವರದೇನು ಅವಶ್ಯವಿಲ್ಲ. "

" ತಾನಾಗಿ ಆದರೆ... "

" ಒಳಿತು. "

" ವೇದವತಿಯು ತೀರಿಕೊಂಡ ಮೇಲೆ ವಿದ್ಯಾಚರಣನು ಅಷ್ಟೊಂದು ಮನೆಯಲ್ಲಿ ಇರುವದಿಲ್ಲ. ಯಾವಾಗಲೂ ಆಸ್ಪತ್ರೆಯಲ್ಲಿಯೇ ಇರುವನು. ಮನೆಯ ಎಲ್ಲ ಭಾರ ಚಂದ್ರಾನ ಮೇಲೆ "

" ಯಾವ ಆಸ್ಪತ್ರೆಯಲ್ಲಿರುವರು. "

" ಬದರೀನಾರಾಯಣ ಆಸ್ಪತ್ರೆಯಲ್ಲಿ. "

" ನಿಮ್ಮ ಆಸ್ಪತ್ರೆಯಲ್ಲೇಕೆ ಇಲ್ಲ. "

" ವೇದವತಿಯು ನಮ್ಮಲ್ಲಿ ಬೇಡೆಂದು ಹೇಳಿದಳು. ಬದರೀನಾರಾ-

ಯಣ ಆಸ್ಪತ್ರೆಯಲ್ಲಿ ವಿದ್ಯಾಚರಣನು ಮುಖ್ಯನು. ಆತನು ಆಸ್ಪತ್ರೆಯ ಜನರಿಗೆ ಪಂಚಪ್ರಾಣ. ತಾಯಿಯ ಗುಣಗಳು ಒಂದೂ ಬಿಡದೆ ಅವನಲ್ಲಿ ರುವವು" ಎಂದು ರಂಜನಿ ನುಡಿದಳು.

"ತಾಯಿ ಪುಣ್ಯಾತ್ಮಳು," ಎಂದು ಅಂದಳು ಮೇಧಾವಿನಿ.

"ಅವಳು ಪುಣ್ಯಾತ್ಮಳೋ ಪಾಪಾತ್ಮಳೋ ನನಗೆ ಗೊತ್ತಿಲ್ಲ. ಆದರೆ ಎಲ್ಲರೂ ಮಾತ್ರ ಅವಳನ್ನು ಪೂಜ್ಯ ಭಾವದಿಂದ ನೋಡುತ್ತಿದ್ದರು. ನನ್ನದೂ ಅವಳದೂ ಪರಿಚಯ ಇಪ್ಪತ್ತು ವರುಷವು. ನನ್ನನ್ನು ದಾಯಿ ಕೆಲಸಕ್ಕೆ ತೆಗೆದುಕೊಂಡವಳು ಅವಳೇ."

"ಅವರು ಮೊದಲು ಏನು ಮಾಡುತ್ತಿದ್ದರು."

"ಅದು ನನಗೆ ಗೊತ್ತಿಲ್ಲ."

"ಪತಿಯು ತೀರಿದ ಮೇಲೆ ದಾಯಿ ಆದರೋ."

"ಅದೂ ನನಗೆ ಗೊತ್ತಿಲ್ಲ. ದಾಯಿ ಇದ್ದದ್ದು ಮಾತ್ರ ನನಗೆ ಗೊತ್ತು."

"ಅವರು ಸಿರಿವಂತರೋ?"

"ಒಬ್ಬಳೇ ಮಗಳೆಂದು ಅವಳ ತಂದೆ ಆಸ್ತಿಯನ್ನು ಚನ್ನಾಗಿ ಬಿಟ್ಟಿರುವನು. ಮನೆಯಿಂದ ಸಿರಿವಂತರೆಂದು ನನಗನಿಸುವದು. ಮಗನನ್ನು ಪರದೇಶಕ್ಕೆ ಕಳುಹಿಸಿ ಆತನನ್ನು ಪ್ರಖ್ಯಾತ ಸರಜನನನ್ನಾಗಿ ಮಾಡಿದಳು. ಪರದೇಶದಲ್ಲಿ ಶಸ್ತ್ರಕ್ರಿಯೆಯಲ್ಲಿ ನಿಪುಣನೆಂದು ಖ್ಯಾತಿಯನ್ನು ಪಡೆದನು. ವಿದ್ಯಾಚರಣನು ಮರಳಿ ಬಂದು ಒಂದು ವರುಷವಾಯಿತು."

ಮೇಧಾವಿನಿಯು ಬಹು ಆಸ್ಥೆಯಿಂದ ಅವಳನ್ನು ಕೇಳುತ್ತಿದ್ದಳು.

"ಅಗೋ ಚಂದ್ರಾ ಬಾಗಿಲದಲ್ಲಿ ನಿಂತಿರುವಳು" ಎಂದು ಮೇಧಾವಿನಿಯು ರಂಜನಿಗೆ ಹೇಳಿದಳು.

ಇವರು ಬರುವದನ್ನು ಕಂಡು ಚಂದ್ರಿಯು ಒಳಗೆ ಹೋಗಿ ಅದೇ ಬಂದು ಕುಳಿತಿದ್ದ ಮಧುಮಾಶಿಗೆ ಅರುಹಿದಳು. "ಅವರನ್ನು ಕರೆ" ಎಂದು ಹೇಳಿ ವಿದ್ಯಾಚರಣನ ಕೋಣೆಗೆ ಹೋದಳು. ಏನೋ ಓದುತ್ತ ಕುಳಿತುಕೊಂಡ ಆತನಿಗೆ ಅವರು ಬರುತ್ತಿರುವದನ್ನು ಹೇಳಿದಳು. ವಿದ್ಯಾಚರಣ ಏನೂ ಉತ್ತರ ಕೊಡದೆ ತನ್ನ ಕಾರ್ಯದಲ್ಲಿ ನಿರತನಾದನು. ಅವ

ನಿಂದ ಮಾರುತ್ತರ ಬರದೆ ಇದ್ದದ್ದನ್ನು ಕಂಡು ಅವಮಾನಿತಳಾದಳೆಂದು ತಿಳಿದು ಮಧುಮತಿಯು ಸಿಡಿಮಿಡಿಗೊಂಡಳು.

" ನಿನಗೆ ಯಾವಾಗಲೂ ಮೂಕ ದೆವ್ವ ಬಡಿದಿರುವದೋ " ಎಂದು ನುಡಿದಳು.

ಹಜಾರದಲ್ಲಿ ಬಂದ ರಂಜನಿಯು ' ಮಧುಮತಿ ' ಎಂದು ಕೂಗಿದಳು. ಒಳಗಿನ ಕೋಣೆಯೊಳಗಿಂದಲೇ " ಬಂದೆ " ಎಂದು ಉತ್ತರ ಕೊಟ್ಟಳು.

ಓಡುತ್ತ ಬಂದು ಅವರನ್ನು ವಿದ್ಯಾಚರಣನ ಕೋಣೆಯ ಕಡೆಗೆ ಕರೆದುಕೊಂಡು ಹೋದಳು. ಅವರು ಬರುವ ಸಪ್ಪಳವನ್ನು ಕೇಳಿ ವಿದ್ಯಾಚರಣನು ತಾನೇ ಕೋಣೆಯಿಂದ ಹೊರಗೆ ಬಂದು ಕುಳಿತುಕೊಳ್ಳಲು ಹೇಳಿದನು.

" ನಿನ್ನ ಕ್ಷಮೆಯನ್ನು ಕೇಳಲು ಮೇಧಾವಿನಿಯು ಬಂದಿರುವಳು. " ಎಂದು ರಂಜನಿಯು ಹೇಳಿದಳು.

" ಯಾರ ಕ್ಷಮೆ " ವಿದ್ಯಾಚರಣ ಕೇಳಿದನು.

" ನಿನ್ನದಲ್ಲ; ಮಧುಮತಿಯ ಕ್ಷಮೆ. "

" ಮಧುಮತಿಯದೇತಕ್ಕೆ. "

" ಅದು ನನಗೆ ಗೊತ್ತಿಲ್ಲ. ಮಧುಮತಿಗೂ ಮೇಧಾವಿನಿಗೂ ಗೊತ್ತು. ಬೀದಿಯಲ್ಲಿಬ್ಬರೂ ಕೂಡಿ ಇಲ್ಲಿಗೆ ಬರುವ ಮುಂಗೆ ಮೇಧಾವಿನಿಯು ಅಂದ ಮಾತಿನ ಮೇಲಿಂದ ನಾನು ಹೇಳಿದೆ. "

" ಹಾಗೇನೂ ಇಲ್ಲ. ಮೇಧಾವಿನಿಯು ನನಗೆ ಏನೂ ತಪ್ಪು ಮಾಡಿರುವದಿಲ್ಲ. ಅವಳು ನನ್ನ ಕ್ಷಮೆ ಕೇಳುವ ಕಾರಣವಿಲ್ಲ " ಎಂದು ಮಧುಮತಿಯು ನುಡಿದಳು.

" ನಾನು ಇನ್ನೊಮ್ಮೆ ಭೆಟ್ಟಿಯಾಗಿ ಹೋಗಬೇಕೆಂದು ಬಂದೆ. "

" ರಂಜನಿಯು ಸದಾಸರ್ವದಾ ಅರ್ಥಕ್ಕೆ ಅನರ್ಥವನ್ನು ಹಚ್ಚುವಳು" ಎಂದು ಮಧುಮತಿಯು ನುಡಿದಳು.

" ನಿನ್ನ ಮಾತಿನ ಅರ್ಥವೇ ಆಗುವದಿಲ್ಲ; ಅಂದ ಮೇಲೆ ಅನರ್ಥವನ್ನು ಹೇಗೆ ಹಚ್ಚಬೇಕು. "

" ಮಾತನಾಡುವವರ ಶಬ್ದಗಳ ಅರ್ಥವನ್ನು ತಿಳಿದುಕೊಳ್ಳದೆ ಉತ್ತರ ಕೊಡುವದೇ ಅನರ್ಥ. "

" ನಿನಗೆ ತರ್ಕವಾಚಸ್ಪತಿಯೆಂದು ಕರೆಯಬೇಕು " ಎಂದು ಮೇಧಾವಿನಿಯು ವಿದ್ಯಾಚರಣನ ಮುಖದ ಕಡೆಗೆ ನೋಡುತ್ತ ನುಡಿದಳು.

" ಹೆಂಗಸರು ತರ್ಕ ಬದ್ಧವಾಗಿ ಮಾತನಾಡಿದರೆ ಗಂಡಸರು ತಮ್ಮ ಮಾನ ಹೋಯಿತೆಂದು ತಿಳಿದುಕೊಳ್ಳುವರು. ರಾಮಾಯಣ, ಹನುಮಾಯನ ಕಾಲದಲ್ಲಿಯ ನಿಯಮಗಳನ್ನೇ ಈ ಇಪ್ಪತ್ತನೇ ಶತಮಾನದ ಗಗನಯಾನ ಯುಗದಲ್ಲಿ ಅಳತೆಗೋಲನ್ನಾಗಿ ಮಾಡಿಕೊಂಡು ತಾವು ಮಾತನಾಡಿದ್ದೇ ತರ್ಕಬದ್ಧ; ತಮ್ಮ ನುಡಿಯೇ ಜಾಣ್ನುಡಿಯೆಂದು ಗಂಡಸರು ತಿಳಿದುಕೊಂಡು ಹೆಂಗಸರ ಕೂಡ ಜೀವನವನ್ನು ಸಾಗಿಸಬೇಕೆನ್ನುವರು " ಎಂದು ಮಧುಮತಿ ಅಂದಳು.

" ನಾನು ಹಾಗೆ ಎಂದೂ ತಿಳಿದುಕೊಂಡಿಲ್ಲ" ಎಂದು ವಿದ್ಯಾಚರಣನು ನುಡಿದನು.

"ಗಂಡಸರು ಹಾಗೇಕೆ ತಿಳಿದುಕೊಳ್ಳುವರು" ಮೇಧಾವಿನಿ ಕೇಳಿದಳು.

" ಹೆಂಗಸರು ತಮ್ಮ ಅಧಿಕಾರದಲ್ಲಿಯ ಗೊಂಬೆಗಳೆಂದು ತೋರಿಸುವದರ ದರ್ಪದ ಸಲುವಾಗಿ ತಿಳಿದುಕೊಳ್ಳುವರು. ಹೆಂಗಸು ತಮ್ಮ ಮಾಲ್ಕಿಯ ಹಕ್ಕಿನ ಜೀವ; ಅವಳು ತನ್ನ ಅಸ್ತಿತ್ವಕ್ಕೆ ಗಂಡಸಿಗೆ ದೇಣೆದಾರ ಎಂದು ತಿಳಿದುಕೊಳ್ಳುವರು. ಇಂತಹ ಸ್ವಾರ್ಥಸಾಧಿಸುವದರ ಸಲುವಾಗಿ ಕಾಲನ ದವಡೆಯಲ್ಲಿ ಸಿಲುಕಿ ಜರ್ಜರಿತವಾದ ಹಳೇ ನಿಯಮಗಳನ್ನು ಮುಂದೆ ಮಾಡುವರು. ಗಂಡಸರೆದುರಿಗೆ ಹೆಂಗಸು ಮಾತನಾಡಬಾರದು. ಮಾತನಾಡಿದರೂ ತಲೆ ಬಗ್ಗಿಸಿ ಮಾತನಾಡಬೇಕು. ಮಾತಿನಲ್ಲಿ ತರ್ಕ ಬದ್ಧತೆಯಿರಬಾರದು. ಉಪಮಾ ಉಪಮೇಯಗಳನ್ನು ಹಾಕಿ ಮಾತನಾಡಬಾರದು. ಹೀಗೆ ಮಾಡುವ ಹೆಂಗಸು ಮಾನವಂತಿ. ಆದರೆ ಈ ನಿಯಮಗಳನ್ನು ಪಾಲಿಸದವಳು ಗೈಯಾಳಿ " ಎಂದು ಮಧುಮತಿ ಮಾತನಾಡಿದಳು.

" ಮಧುಮತಿ, ಒಂದು ದಿವಸ ನಿನ್ನ ಉಪನ್ಯಾಸವಿಡೋಣವಂತೆ " ಎಂದು ವಿದ್ಯಾಚರಣನು ನುಡಿದನು.

ವಿದ್ಯಾಚರಣನ ಮಾತುಗಳನ್ನು ಕೇಳಿ ಮಧುಮಂತಿಯು ಸುಮ್ಮನಾದಳು. "ನಿಮ್ಮ ತಂದೆಯವರು ಸುಖರೂಪದಿಂದಿರುವರೋ," ಎಂದು ಮೇಧಾವಿನಿಯನ್ನು ವಿದ್ಯಾಚರಣನು ಕೇಳಿದನು.

"ಇಂದು ನಾನು ಮೇಧಾವಿನಿಯ ಮನೆಗೆ ಹೋಗಿದ್ದೆ. ನಾನಲ್ಲಿ ಅವಳ ತಂದೆಯನ್ನು ಭೆಟ್ಟಿಯಾಗಿದ್ದೆ. ಅವರು ಮಾತಿನಲ್ಲಿ ಬಹಳೇ ಹರಿತವಿದ್ದಂತೆ ಕಾಣುವದು."

"ಅವರಿಗೆ ಜೇಲುವಾಸವೂ ಆಗಿರುವದು" ಎಂದು ರಂಜನಿಯು ಅಂದಳು.

"ಯಾರ ಗಂಟನ್ನು ನುಂಗಿದ್ದರು."

"ತಮ್ಮ ಗಂಟನ್ನೇ ನುಂಗಲಿಕ್ಕಾಗದವರು ಪರರ ಗಂಟನ್ನು ಹೇಗೆ ನುಂಗುವರು" ಎಂದು ರಂಜನಿ ನುಡಿದಳು.

"ತಮ್ಮ ಗಂಟನ್ನು ನುಂಗಲು ಯಾರೂ ಹಾತೊರೆಯುವದಿಲ್ಲ. ಪರರ ಗಂಟನ್ನು ನುಂಗಲು ಸಕಲರು ಪರಮಾಸೆಯಿಂದ ಆತುರ ಪಡುತ್ತಿರುವರು. ಭಟ್ಟರು ಇದಕ್ಕೆ ಅಪವಾದವೆಂದು ನನಗನಿಸುವದಿಲ್ಲ."

"ಯಾರ ಗಂಟನ್ನೂ ಎತ್ತಿ ಬಡಿಯಲಿಲ್ಲ. ಭಾರತಕ್ಕೆ ಸ್ವಾತಂತ್ರ್ಯ ದೊರಕಿಸಲು ಚಳವಳಿಯಲ್ಲಿ ಜೇಲಿಗೆ ಹೋಗಿದ್ದರು" ರಂಜನಿ ನುಡಿದಳು.

"ಸ್ವಾತಂತ್ರ್ಯ ದೊರಕಿಸುವದರಲ್ಲಿ ತಮ್ಮ ಅಳಲಿಯ ಸೇವೆಯನ್ನು ಸಲ್ಲಿಸಿರುವರೇ? ಪಾಪ! ಜೇಲಿಗೆ ಹೋದಾಗ್ಗೆ ತಮ್ಮ ಬ್ರಾಹ್ಮಣಿಕೆಯನ್ನು ಎಲ್ಲಿಟ್ಟು ಹೋಗಿದ್ದರು."

"ಎಲ್ಲಿಯಾದರೂ ಇಟ್ಟು ಹೋಗಲು ಬರುವದೋ?" ರಂಜನಿ ಕೇಳಿದಳು.

"ನಿನ್ನ ಕಡೆಗಿಟ್ಟು ಹೋಗಿದ್ದರು" ಎಂದ ವಿದ್ಯಾಚರಣ.

"ನಾನಿನ್ನೂ ಹುಟ್ಟಿದ್ದಿಲ್ಲ" ಮಧುಮಂತಿ.

"ನೀನು ಹುಟ್ಟುವಿಯೆಂದು ತಿಳಿದು ಆವ್ಹಾನ ಮಾಡಿ ಇಟ್ಟು ಹೋಗಿದ್ದರು."

ನುಡಿದನು ವಿದ್ಯಾಚರಣ.

"ಇಟ್ಟದ್ದು ನಾನು ಹೇಳುವೆ" ಮಧುಮಂತಿ.

" ಗೊತ್ತಿದ್ದರೆ ಹೇಳು " ಎಂದಳು ರಂಜನಿ.

" ಕರ್ಣರ ಅನುಕೂಲಸಿಂಧುವಿನ ಪ್ರಕಾರ ಅವರು ಜೇಲಿನಲ್ಲಿ ಪ್ರವೇಶ ಮಾಡುವಾಗ್ಗೆ ಜೇಲಿನ ಸಮೀಪದಲ್ಲಿದ್ದ ಯಾವದಾದರೊಂದು ಮರದ ಹೊದರಿನಲ್ಲಿ, ಪಾರ್ಥನು ತನ್ನ ಬಿಲ್ಲು ಬತ್ತಳಿಕೆಗಳನ್ನು ಶಮೀ ವೃಕ್ಷದಲ್ಲಿ ಬಚ್ಚಿಟ್ಟು ಬೃಹನ್ನಳೆಯಾಗಿ ಹೋದಂತೆ ಯಜ್ಞೋಪವೀತ, ರುದ್ರಾಕ್ಷಿಮಾಲೆ, ವಿಭೂತಿಯ ಉಂಡೆ— ಇವುಗಳನ್ನು ಅಡಗಿಸಿಟ್ಟು ಯಾವ ದಾದರೊಂದು ಗೂಗಿಗೆ ಕಾರ್ಯೇ ಹೇಳಿ ಹೋಗಿರಬಹುದು " ಎಂದು ಕೈಯಲ್ಲಿದ್ದ ತನ್ನ ವೀಣೆಯ ತುದಿಯನು ಕಿಂಪುತ್ತ ಮಧುಮತಿಯು ನುಡಿದಳು.

" ನೀನು ಯಾವಾಗಲೂ ಪರರಿಗೆ ಚುಚ್ಚುವ ಮಾತುಗಳನ್ನೇ ಆಡುವಿ. ಮೃದು ಮಾತುಗಳನ್ನು ಮರೆತಿರುವಿಯೋ ಏನೋ, ಹೀಗೆ ಮೊಂಡ ಮಾತ ನಾಡುವ ಮಹಾರೋಗ ನಿನ್ನಲ್ಲಿ ಸೇರಿವಂತೆ ತೋರುವದು " ಎಂದು ವಿದ್ಯಾಚರಣನು ನುಡಿದನು.

" ಔಷಧ ಕೊಟ್ಟು ಗುಣ ಮಾಡುವದು ನಿನ್ನ ಕೈಯಲ್ಲಿಯೇ ಇರುವದು. "

" ಔಷಧದಿಂದ ಗುಣವಾಗುವದಿಲ್ಲ. "

" ಮತ್ತೆ ಹೇಗೆ ಗುಣವಾಗಬೇಕು. "

" ಜೀವನದಲ್ಲಿ ಆಘಾತಗಳು ಬಂದರೆ ತಾನೇ ಗುಣವಾಗುವದು. ಕಾಮಣಿಯ ರೋಗಕ್ಕೆ ಅಂಗಾಲಿಗೆ ಮೊಸರಿನಲ್ಲಿ ಅರಿಸಿಣ ಪುಡಿಯನ್ನು ಕಲಿಸಿ ಹಚ್ಚಿ ಅದರ ಮೇಲೆ ಸೂಜಿಯಿಂದ ಬರೆಕೊಟ್ಟು ಆ ರೋಗವನ್ನು ಗುಣಪಡಿಸುತ್ತಿದ್ದರಂತೆ. ಜೀವನದ ಆಘಾತದ ಬರೆಗಳು ನಿನಗೆ ಬಿದ್ದರೆ ಎಲ್ಲವೂ ತಾನೇ ಸರಿಯಾಗುವದು. "

" ಅಂದರೇನಾಯಿತು. ಅದನ್ನು ಅಲ್ಲಿಯೇ ಬಿಡತಕ್ಕದ್ದು. ಅವಳೂ ಅವರ ಮಗಳೆಂದು ತಿಳಿದುಕೊಂಡರಾಯಿತು " ಮೇಧಾವಿನಿ ಅಂದಳು.

" ನಾವು ಯಾವದೇ ಮಾತನ್ನಾಡಿದರೂ ಮಧುಮತಿಯು ಅದಕ್ಕೆ ಬಾಲವನ್ನು ಹಚ್ಚಿ ಗಾಳಿಯಲ್ಲಿ ಹಾರಿ ಬಿಡುವಳು. ಅದು ಯಾರಿಗೆ ಹೋಗಿ ಬಡಿಯುವದೋ ನಿಯಮವಿಲ್ಲ. ತನಗೆ ಬಡೆದರೂ ಚಿಂತೆಯಿಲ್ಲ. ಅದಕ್ಕೆ

ಬಾಲವನ್ನು ಹಚ್ಚಿ ಹಾರಿ ಬಿಡತಕ್ಕದ್ದು ಇಷ್ಟೇ ಅವಳಿಗೆ ಗೊತ್ತು" ಎಂದು ವಿದ್ಯಾಚರಣನು ನುಡಿದನು.

ಚಂದ್ರಾ ಎಲ್ಲರಿಗೂ ಚಹ ತಂದುಕೊಟ್ಟಳು.

"ನಿಮ್ಮ ಆಸ್ಪತ್ರೆಯು ಬಹು ದೊಡ್ಡದೋ" ಎಂದು ಮೇಧಾವಿನಿಯು ಕೇಳಿದಳು.

"ಅಷ್ಟೇನು ದೊಡ್ಡದಲ್ಲ, ನೂರು ಹಾಸಿಗೆಗಳಿರುವವು" ಎಂದು ವಿದ್ಯಾಚರಣನು ಚಹ ಕುಡಿಯುತ್ತ ಹೇಳಿದನು.

"ನೂರು ರೋಗಿಗಳ ಹಾಸಿಗೆಗಳೆಂದರೆ ದೊಡ್ಡದು" ಮೇಧಾವಿನಿ ಅಂದಳು.

"ನಮ್ಮ ಆಸ್ಪತ್ರೆ ಸಿರಿವಂತರಿಗಲ್ಲ, ಬಡವರಿಗಾಗಿರುವದು. ಬದರಿನಾರಾಯಣನೆಂಬವನು ಆಸ್ಪತ್ರೆಯನ್ನು ನಡೆಸಿಕೊಂಡು ಹೋಗಲಿಕ್ಕೆ ಸುಮಾರು ೩೦ ಲಕ್ಷ ರೂಪಾಯಿಗಳ ಠೇವನ್ನಿಟ್ಟಿರುವನು. ಬಡವರು ಏನಾದರೂ ತಿಳಿದು ಕೊಟ್ಟರೆ ತೆಗೆದುಕೊಳ್ಳುವೆವು. ಕೊಡಲೇಬೇಕೆಂಬ ನಿಯಮವಿಲ್ಲ. ಅಮ್ಮನ ಇಚ್ಛಾನುಸಾರವಾಗಿ ಇಲ್ಲಿ ದುಡಿಯಲು ನಾನು ಹೋದದ್ದು. ನನ್ನ ಸಲುವಾಗಿಯೇ ದೇವರು ಈ ಆಸ್ಪತ್ರೆಯನ್ನು ತೆರೆದಂತೆ ಕಾಣುವದು. ನಾನು ಪರದೇಶದಿಂದ ಮರಳಿ ಬರುವ ಎರಡು ತಿಂಗಳ ಮುಂಚಿತವಾಗಿಯೇ ಈ ಆಸ್ಪತ್ರೆಯನ್ನು ತೆರೆದರು. ಅಮೇರಿಕೆಯಿಂದ ನನ್ನ ಬಗ್ಗೆ ಯಾರೋ ಬದರೀನಾರಾಯಣರಿಗೆ ಬರೆದಂತೆ ತೋರುವದು. ನಾನು ವಿಮಾನದಿಂದ ಮುಂಬಯಿಯಲ್ಲಿ ಇಳಿದ ಕೂಡಲೇ ಆ ಆಸ್ಪತ್ರೆಯ ಸಂಚಾಲಕನು ಬಂದು ನನಗೆ ಭೆಟ್ಟಿಯಾಗಿ ಬದರೀನಾರಾಯಣರನ್ನು ಕಾಣುವಂತೆ ಹೇಳಿದನು. ಮುಂದೆ ಕೆಲವು ದಿನಗಳು ಕಳೆದ ಮೇಲೆ ಅಮ್ಮನ ಸಲಹೆ ಪಡೆದು ಅವರನ್ನು ಭೆಟ್ಟಿಯಾದೆ. ಆಸ್ಪತ್ರೆಯನ್ನೇ ನನ್ನ ವಶಕ್ಕೆ ಕೊಟ್ಟು ನೋಡಿಕೊಳ್ಳೆಂದು ಹೇಳಿದರು. ನನಗೆ ಬಡವರ ಸೇವೆ ಮಾಡಲು ಸುಸಂಧಿ ದೊರಕಿತು." ಎಂದು ವಿದ್ಯಾಚರಣನು ಹೇಳಿದನು.

ವಿದ್ಯಾಚರಣನ ಮಾತುಗಳನ್ನು ಕೇಳುತ್ತ ಮೇಧಾವಿನಿಯು ಕಲ್ಲುಗೊಂಬೆಯಂತೆ ಕುಳಿತಿದ್ದಳು.

" ಚರಣನು ಮಾಡುವ ಬಡವರ ಸೇವೆಯನ್ನು ಜನರು ಪ್ರಶಂಸೆ ಮಾಡುವರೇನು ? ಎಂದೂ ಇಲ್ಲ. ಅವನನ್ನೇ ಟೀಕಿಸುವರು " ಎಂದು ಮಧುಮತಿ ನುಡಿದಳು.

" ನಾನು ಪ್ರಶಂಸೆಗಾಗಿ ಕೆಲಸ ಮಾಡುವದಿಲ್ಲ. ಬಡರೋಗಿಗಳ ಸೇವೆಯೇ ದರಿದ್ರನಾರಾಯಣನ ಸೇವೆ. ರೋಗಿಗಳು ಗುಣಹೊಂದಿ ನಗುತ್ತ ತಮ್ಮ ಮನೆಗೆ ಹೋಗುವದನ್ನು ನೋಡಿ ಆಗುವ ಆನಂದ ನನಗೆ ಒಂದು ಲಕ್ಷ ರೂಪಾಯಿಗಳಿಂದ ದೊರೆಯುವ ಆನಂದಕ್ಕಿಂತ ಮಿಗಿಲು. ಅವರ ಆನಂದದಲ್ಲಿಯೇ ನನ್ನ ದೇವರ ಸಾನ್ನಿಧ್ಯ. ದೇವರನ್ನು ಟೀಕಿಸುವವರಿಗೆ ನಾನೆಷ್ಟರವನು " ಎಂದು ವಿದ್ಯಾಚರಣನು ಅಂದನು.

" ತಾನೇ ತನ್ನ ಆಸ್ಪತ್ರೆಯನ್ನು ತೆರೆದಿದ್ದರೆ ಲಕ್ಷಾವಧಿ ರೂಪಾಯಿಗಳನ್ನು ಗಳಿಸುತ್ತಿದ್ದ. ಇಂದಿನವರೆಗೆ ಚರಣನ ಶಸ್ತ್ರಕ್ರಿಯೆಯಿಂದ ಆಸ್ಪತ್ರೆಗೆ ಸುಮಾರು ಎರಡು ಲಕ್ಷ ರೂಪಾಯಿ ಆದಾಯವಾಗಿರುವದೆಂದು ಅದರ ಸಂಚಾಲಕನು ವೃತ್ತಕಾರರಿಗೆ ತಿಳಿಸಿರುವನು. ಹುಡುಗ ಚಕ್ರಂ; ಇನ್ನೂ ಪ್ರಪಂಚದ ಝಳ ತಾಕಿರುವದಿಲ್ಲೆಂದು ಟೀಕಿಸುವರು. ವಂಚಿಸುವವರನ್ನೇ ಜನರು ಪ್ರಶಂಸೆ ಮಾಡುವರು. ಹೆಚ್ಚು ಹೆಚ್ಚು ವಂಚಿಸಿದಷ್ಟು ಹೆಚ್ಚು ಪ್ರತಿಷ್ಠೆಯನ್ನು ಪಡೆಯುವನು. ಗಣ್ಯವ್ಯಕ್ತಿಯಾಗಿ ಸಮಾಜದಲ್ಲಿಯು ಉಧೋ ಉಧೋ ಎಂಬುವ ಭಟ್ಟಂಗಿಯ ಬಳಗದವರನ್ನು ಕಟ್ಟಿಕೊಂಡು ' ಅಹಂ ಕರ್ತಾ ' ಎಂದು ಮೆರೆಯುವನು. ರಂಜನೀ, ಇದು ನಮ್ಮ ಸಾಂಪ್ರತದ ಜೀವನದ ಪ್ರಪಂಚ " ಎಂದು ಮಧುಮತಿ ನುಡಿದಳು.

" ನಿನ್ನ ಪ್ರಪಂಚವಿಲ್ಲೇನು " ಮೇಧಾವಿನಿ ಕೇಳಿದಳು.

" ನಾನು, ನೀನು ಇನ್ನೂ ಚಿಕ್ಕವರು. ನಮ್ಮ ಜೀವನ ಇನ್ನೂ ವಿಸ್ತಾರಹೊಂದಿಲ್ಲ. ವಿಸ್ತೃತ ಹೊಂದಿದ ಮೇಲೆ ಪ್ರಪಂಚದಲ್ಲಿ ವಂಚಕಿಯಾಗುವೆನೋ ಭಂಜಕಿಯಾಗುವೆನೋ ದೇವರಿಗೆ ಗೊತ್ತು " ಎಂದು ಮಧುಮತಿಯು ಮಾತನಾಡಿದಳು.

" ಜಗತ್ತಿನಲ್ಲಿ ಎಲ್ಲರೂ ವಂಚಕರಾದರೆ ಹೇಗೆ ನಡೆಯಬೇಕು " ಎಂದು ಮೇಧಾವಿನಿಯು ಮಧುಮತಿಗೆ ಕೇಳಿದಳು.

" ಅವಳ ದೃಷ್ಟಿಯಲ್ಲಿ ಜಗತ್ತು ವಂಚಕರದು " ಎಂದಳು ರಂಜನಿ.

" ಈಗ ನೋಡುವ ಹಾಗು ಇರುವ ಜಗತ್ತು ವಂಚಕರಿಗಾಗಿರುವದೋ ಸಾಧುಗಳಿಗಾಗಿರುವದೋ ನೀನೇ ಹೇಳು. ದಿನಾಲು ನಾವು ನೋಡುತ್ತೇವೆ; ಕೇಳುತ್ತೇವೆ. ಇಷ್ಟಿದ್ದರೂ ವಂಚಕರ ಜಗತ್ತೆಂದು ಅನ್ನಲು ನಾವು ಸಿದ್ಧರಿಲ್ಲ. ನೀವು ದೇಶದ ಹಿತಕ್ಕೆ ತ್ಯಾಗ ಮಾಡಿರಿ; ನಾವು ದೇಶದ ಹಿತಕ್ಕೆ ಭೋಗ ಮಾಡುವೆವು. ಹೊನ್ನಿನ ಹೊಗೆ ಹೋಗುವ ರಾಷ್ಟ್ರವನ್ನು ನಿರ್ಮಾಣ ಮಾಡಲು ಬಡತನದ ಬವಣೆಯನ್ನು ಸೋಸಿರಿ; ಸಿರಿವಂತ ರಾಷ್ಟ್ರ ಮಾಡಲು ಹಣವನ್ನು ನಾವು ನೀರಿನಂತೆ ವೆಚ್ಚ ಮಾಡಿದಂತೆ ತೋರಿಸಿ ನಮ್ಮಲ್ಲಿ ಕೂಡಿಟ್ಟುಕೊಂಡು ಪರರಿಗೆ ನಮ್ಮ ರಾಷ್ಟ್ರದ ಸಿರಿಯನ್ನು ತೋರಿಸುವೆವು. ಬಡವರ ಉಳಿತಾಯವೆಲ್ಲ ತತ್ವಬೋಧಿಸುವ ಜಕೋದರರ ತುತ್ತಿಗೆ. ತತ್ವಬೋಧಕರು ಘಾತಕರಿದ್ದರೂ ನಮ್ಮ ಹಿತ ರಕ್ಷಕರೆಂದು ತೋರಿಸುವ ಮೋಜಿನ ವೇಷಧಾರಿಗಳು. ಈ ಮೋಹಿನಿ ಪುತ್ರರು ಗಾಂಧಿಯ ಮರಣದೊಂದಿಗೆ ಗಾಂಧೀಯುಗದ ಸಮಾಧಿಯನ್ನು ಕಟ್ಟಿದರು. "

" ಅದು ನಮ್ಮ ತಪ್ಪು; ನಾವು ಅವರ ಬಲೆಯಲ್ಲಿ ಸಿಗಬೇಕೆ. ನಾವು ಅವರಿಂದ ದೂರ ಸರಿದು ಇದ್ದರಾಯಿತು" ಎಂದು ಮೇಧಾವಿನಿಯು ಅಂದಳು.

" ಅವರು ಬೀಸಿದ ಬಲೆಯಿಂದ ಪಾರಾಗುವವರೇ ವಿರಳ. ಅವರದು ಬ್ರಹ್ಮಾಂಡಜಾಲ. ನಿಮ್ಮ ಅಣ್ಣನು ಏನು ಮಾಡುವನು" ಮಧುಮತಿಯು ಕೇಳಿದಳು.

" ಅವನು ಏನು ಮಾಡಿರುವನೆಂಬುವದು ನನಗೆ ಗೊತ್ತಿಲ್ಲ. ಯಾರೊ ಅವನಿಗೆ ಸಮಾಜ ಸೇವಕನೆಂದು ಕರೆದದ್ದು ಕೇಳಿದ್ದೆ " ಎಂದು ಮೇಧಾವಿನಿಯು ಅಂದಳು.

"ನೀನು ಸಿಟ್ಟಿಗೆ ಬರಬೇಡ; ಆ ವಂಚಕರ ಗುಂಪಿನಲ್ಲಿ ನಿನ್ನ ಅಣ್ಣನೂ ಒಬ್ಬನು. "

" ನನಗೆ ಗೊತ್ತಿಲ್ಲ, ನಾನು ಹೇಗೆ ಹೇಳಲಿ. ಅವನ ರೀತಿ ನಡಾವಳಿಗಳು ಅಪ್ಪನಿಗೆ ಸರಿ ಬರಲಿಲ್ಲ. ಮನೆ ಬಿಟ್ಟು ಹೋದರೆ ನೆಟ್ಟಗೆಂದು ಅಣ್ಣನಿಗೆ ಅಪ್ಪನು ಹೇಳಿದನು. ಅಪ್ಪನ ಮಾತು ಕೇಳಿ ಕಿಡಿಕಿಡಿಯಾಗಿ ಎಂದೋ ಮನೆಯನ್ನು ಬಿಟ್ಟು ಹೋಗಿರುವನು " ಎಂದು ಮೇಧಾವಿನಿಯು ಹೇಳಿದಳು. "

" ನೀವು ಪ್ರಪಂಚ ಹೇಗೆ ಸಾಗಿಸುವಿರಿ; ಮತ್ತೆ ಮನೆಯಲ್ಲಿ ಯಾರಾದರೂ ದುಡಿಯುವವರು ಇರುವರೋ " ಎಂದು ರಂಜನಿಯು ಕೇಳಿದಳು.

" ಹೇಗೋ ಬಡತನದಿಂದ ಕಾಲಹಾಕುತ್ತಿರುವೆವು. ನನ್ನ ಎಂ. ಎ. ಪರೀಕ್ಷೆ ಮುಗಿದ ಮೇಲೆ ಎಲ್ಲಿಯಾದರೂ ಉದ್ಯೋಗವನ್ನು ಹಿಡಿಯುವೆ. ಮೊದಲೇ ಹಿಡಿಯಬೇಕೆಂದು ಮಾಡಿದ್ದೆ. ಅಮ್ಮನು ಬೇಡವೆಂದು ಹೇಳಿದಳು. ನನಗೆ ಮಾಸಿಕ ಶಿಷ್ಯ ವೇತನ ೧೫೦ ರೂಪಾಯಿ ಬರುವದು. ಅಷ್ಟರಲ್ಲಿಯೇ ಪ್ರಪಂಚ ಹಾಗೂ ವಿದ್ಯಾಭ್ಯಾಸ ಮಾಡಿಕೊಂಡು ಹೋಗುವೆವು. ಮನೆಯಲ್ಲಿ ಯಾರೂ ಇಲ್ಲದ್ದಕ್ಕೆ ಅಂದು ಡಾಕ್ಟರರನ್ನು ಕರೆಯಲು ಬಹಳೇ ರಾತ್ರಿಯಾದರೂ ನಾನೇ ಕರೆಯಲು ಬಂದಿದ್ದೆ. "

" ನಿಮ್ಮ ಧೈರ್ಯವನ್ನು ಎಷ್ಟು ಹೊಗಳಿದರೂ ಕಡಿಮೆ " ವಿದ್ಯಾಚರಣನು ಅಂದನು.

" ಎಲ್ಲರೂ ಸಾಮಾನ್ಯವಾಗಿ ಅಂಜುಬುರುಕರು. ಧೈರ್ಯ ತಂದು ಕೊಡುವದು ಆಗ್ಗೆ ಅವರಿಗಿದ್ದ ಪ್ರಸಂಗ. ತಂದೆಯ ಮೇಲಿನ ಪ್ರೇಮದಿಂದ ಅಷ್ಟು ಸರಿರಾತ್ರಿಯಲ್ಲಿ ಅಂಜದೆ ಬಂದಿರಬಹುದು. "

ಇದನ್ನು ಮೇಧಾವಿನಿಯು ನುಡಿದ ಕೂಡಲೆ ಆಕೆಗೆ ವೇದವತಿಯು ತನ್ನ ಕೈಯನ್ನು ವಿದ್ಯಾಚರಣನ ಕೈಯಲ್ಲಿ ಕೊಟ್ಟಿದ್ದು ನೆನಪಾಯಿತು. ವಿದ್ಯಾಚರಣನಿಗೆ ರಾತ್ರಿಯಲ್ಲಿ ತೋಯಿಸಿಕೊಂಡು ನಡುಗುತ್ತಿದ್ದ ಮೇಧಾವಿನಿಯ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡು ಮನೆಗೆ ಬಂದದ್ದು ಸ್ಮರಣೆಗೆ ಬಂದಿತು. ಅವಳ ಮೊಗವನ್ನು ದಿಟ್ಟಿಸಿ ನೋಡಿ ಮೊಗ ಕೆಳಗೆ ಮಾಡಿದನು. ಮತ್ತೊಮ್ಮೆ ಮೇಧಾವಿನಿಯ ಮೊಗವನ್ನು ನೋಡಿದನು. ಅವಳ ದೃಷ್ಟಿಯಲ್ಲಿ ಅವನ ದೃಷ್ಟಿಯು ತಾಕಿತು. ಅವನ ಹೃದಯ ತರಂಗಗಳು ಅವಳ ಹೃದಯ ತರಂಗಗಳನ್ನು ನುಂಗಿದವು. ತನ್ನ ವಿಚಾರ ವಾಹಿನಿಯಲ್ಲಿ ಮೇಧಾವಿನಿ ವಿದ್ಯಾಚರಣನನ್ನು ತೇಲಿಬಿಟ್ಟಳು.

# ೪

ಗಿರಿಧಾರಿಯು ಕುಮಾರಿಲಭಟ್ಟರ ಮಗನು. ಆತನು ಕಲಿತದ್ದು ರ, ರ, ಈ, ಕ. ಆತನ ಬುದ್ಧಿ ಕಲಿಯುವದರಲ್ಲಿ ಇದಕ್ಕೂ ಮುಂದೆ ಸಾಗಲಿಲ್ಲ. ತನ್ನ ಬಾಲ್ಯವನ್ನು ಉಡಾಳತನದಲ್ಲಿ ಕಳೆದನು. ಭಟ್ಟರು ಮಗನಿಗೆ ಹವ್ಯಕವ್ಯಗಳಿಗೆ ಬೇಕಾಗುವ ಮಂತ್ರಗಳನ್ನಾದರೂ ಕಲಿಸಿ ವೈದಿಕ ವೃತ್ತಿಯಲ್ಲಿ ನಿಪುಣನನ್ನು ಮಾಡಬೇಕೆಂದು ವಿಶ್ವಪ್ರಯತ್ನ ಪಟ್ಟರು. ಅವರ ಪ್ರಯತ್ನಗಳೆಲ್ಲವೂ ನೀರಿನಲ್ಲಿ ಹೋಮ ಮಾಡಿದಂತಾದವು. ಆದರೆ ಮಗನು ತಾನೇ ಗೆದ್ದನು, ಭಟ್ಟರನ್ನು ಸೋಲಿಸಿದನು. ಭಟ್ಟರ ಮಂತ್ರ ತಂತ್ರಗಳು ಅವರ ತಲೆಯಲ್ಲಿಯೇ ಉಳಿದವು. ಇವನೊಬ್ಬನು ತಮ್ಮ ವಂಶದಲ್ಲಿ ವ್ರಾತ್ಯನು ಹುಟ್ಟಿದನೆಂದು ಕುದ್ದು ಮನದಲ್ಲಿಯೇ ಚಡಪಡಿಸಹತ್ತಿದ್ದರು. ತಂದೆಗೂ ಮಗನಿಗೂ ಒಂದೂರಾಗದು. ತಂದೆಯ ಕೊರಳಲ್ಲಿಯ ರುದ್ರಾಕ್ಷಿಯ ಮಾಲೆ, ಹಣೆಯ ಮೇಲೆ ವಿಭೂತಿಯ ಪಟ್ಟಿಗಳನ್ನು ಕಂಡು ಬಾಲ್ಯದಲ್ಲಿ ಗಿರಿಧಾರಿ ಹಲ್ಲು ಕಿರಿದು ಮಂಗನಂತೆ ಭಟ್ಟರ ಮುಂದೆ ಕುಣಿದು ಓಡಿಹೋಗುತ್ತಿದ್ದನು.

ಸನಾತನ ಗೂಬೆಯೆಂಬ ತಿರೋ ನಾಮದ ವಿಧವೆಯ ವೇಷದಲ್ಲಿದ್ದ ಭಟ್ಟರ ಚಿತ್ರವನ್ನು— ಯಾರಿಂದಲೋ ತೆಗೆಯಿಸಿಕೊಂಡು ಬಂದು— ಮನೆಯ ಹಜಾರದಲ್ಲಿಯ ಗೋಡೆಯ ಮೇಲೆ ಯಾರಿಗೂ ತಿಳಿಯದಂತೆ ಗಿರಿಧಾರಿ ಬಡೆದು ಫರಾರಿಯಾಗಿದ್ದನು. ಆಗ್ಗೆ ಆತನು ಬಾಲಕನೂ ಅಲ್ಲ, ಯುವಕನೂ ಅಲ್ಲ. ಅಂದು ಮನೆಯಲ್ಲಿ ಭಟ್ಟರ ರೌದ್ರಾವತಾರದ ರಂಭಾಟ, ಚೀರಾಟ ಮನೆಯನ್ನೇ ಗದಗಮಿಸಿ ಬಿಟ್ಟಿತು. ಓಡಿ ಹೋದ ಮಗನನ್ನು ಹಿಡಿತಂದು ಮೈಮೇಲೆ ಬಾರು ಮೂಡುವಂತೆ ಥಳಿಸಿ ನಾಲ್ಕು ದಿನ ಲಂಘನ ಹಾಕಿ ಬಿಟ್ಟಿದ್ದರು. ತಾಯಿ ಎಷ್ಟು ಹೇಳಿಕೊಂಡರೂ ಮಗನ ಶಿಕ್ಷೆಯನ್ನು ಕಡಿಮೆ ಮಾಡಲಿಲ್ಲ, ಚಿತ್ರದಲ್ಲಿಯ ವಿಧವೆಯ ವೇಷ ಅವರನ್ನು ಕೆರಳಿಸಿತ್ತು. ವ್ರಾತ್ಯ, ದೈತ್ಯ, ಚಾಂಡಾಲ,— ಎಂದು ಮಗನನ್ನು ಬೈಯುಹತ್ತಿದನು. ಗಿರಿಧಾರಿ ತಿಳಿಯದೆ ಮಾಡಿದ ಕೃತಿಯಿಂದ

ತಂದೆಯಲ್ಲಿ ಕೊನೆಯವರೆಗೆ ಮಗನ ಬಗ್ಗೆ ಒಂದು ತರಹದ ಶತ್ರುತ್ವ ಭಾವ ಉಳಿಯಿತು.

ಬಾಲ್ಯವನ್ನು ದಾಟಿ ಯೌವನಕ್ಕೆ ಬಂದನು. ಕುತಂತ್ರಗಳಲ್ಲಿ ಚಾಣಕ್ಯನಾದನು. ಪುಂಡರಲ್ಲಿ ಗಂಡುಗಲಿಯಾದನು. ಆನೆ ಬಲದಿಂದ ಹುಂಜದಂತೆ ಆತನು ಪರರ ಸಂಗಡ ಕಾದಾಡುತ್ತಿದ್ದನು. ಆತನ ಹೆಸರುತೆಗೆಯಲು ಎಲ್ಲರೂ ಹೆದರಿ ಸಾಯುತ್ತಿದ್ದರು. ಒಮ್ಮೆ ತಡವಿದರೆ ಸಾಕು, ತಡವಿದವರನ್ನು ಬಿಡುತ್ತಲೇ ಇಲ್ಲ. ಮಗನ ಈ ಜೀವನಕ್ಕೆ ಹೇಸಿಗೆಪಟ್ಟು ಕುಮಾರಿಲಭಟ್ಟರು ಆತನನ್ನು ಮನೆಯಲ್ಲಿಟ್ಟುಕೊಳ್ಳುವದು ಏನೂ ಪ್ರಯೋಜನವಿಲ್ಲವೆಂದು ಮನೆಯಿಂದ ಹೊರಗೆ ಹಾಕಿದರು. ಗಿರಿಧಾರಿಯಾದರೂ ಏನೂ ವ್ಯಥೆ ಪಡಲಿಲ್ಲ, ನೆಟ್ಟಗಾಯಿತೆಂದು ಹೊರಬಿದ್ದನು.

ರೂಪಜೀವಿಗಳ ಸಹವಾಸದಿಂದ ಆತನಿಗೆ ಸಮಾಜದಲ್ಲಿಯ ಪ್ರತಿಷ್ಠಿತ, ಅಪ್ರತಿಷ್ಠಿತ ಜನರ ಪರಿಚಯವಾಗಿತ್ತು. ಮಹಾನಗರದಲ್ಲಿ ಆತನ ಹೆಸರು ಕೇಳದವರು ಯಾರೂ ಇದ್ದಿಲ್ಲ. ಯಾವದೇ ಚುನಾವಣೆ ಬಂದರೆ ತೀರಿತು. ಎಲ್ಲ ಅಭ್ಯರ್ಥಿಗಳು ಮತ ದೊರಕಿಸಲು ಅವನನ್ನು ಹಿಡಿಯಲು ಪ್ರಯತ್ನ ಮಾಡುತ್ತಿದ್ದರು. ಕೆಲವರಂತೂ ಸಾವಿರಾರು ರೂಪಾಯಿಗಳನ್ನು ಕೊಟ್ಟು ತಮ್ಮ ಮತ ಪ್ರಚಾರಕನೆಂದು ತೆಗೆದುಕೊಳ್ಳುತ್ತಿದ್ದರು. ಕೈಕೊಂಡ ಕೆಲಸವನ್ನು ಆಸ್ಥೆಯಿಂದ ಮಾಡುವದು ಅವನಲ್ಲಿಯ ಬಹು ದೊಡ್ಡ ಗುಣವು.

ಹೊರಗೆ ಹಾಕಿದ ಮೇಲೆ ಎಂದಾದರೂ ಗಿರಿಧಾರಿಯು ಮನೆಗೆ ಬಂದರೆ ಆತನನ್ನು ಕುಮಾರಿಲಭಟ್ಟರು ಎಂದೂ ಮಾತನಾಡಿಸುತ್ತಿದ್ದಿಲ್ಲ. ಮೊಗವನ್ನು ತಿರುಗಿಕೊಂಡು ಹೋಗುತ್ತಿದ್ದರು. ಗಿರಿಧಾರಿಯನ್ನು ನೋಡಿದರೆ ಭಟ್ಟರಿಗೆ ಗೋಡೆಯ ಮೇಲೆ ಆತ ಬಡೆದ ಹಿಂದಿನ ಚಿತ್ರದ ನೆನಪಾಗುತ್ತಿತ್ತು. ಗಿರಿಧಾರಿಯಾದರೂ ಅಭಿಮಾನದ ಕೂಸು. ತೇರಾಟಕ್ಕೆ ಹೋಗಿ ಹೋರಾಟ ಕೊಂಡಂತಾಗುವದೆಂದು ಆತನು ಭಟ್ಟರನ್ನು ಮಾತನಾಡಿಸುವ ಮನಸ್ಸೇ ಮಾಡುತ್ತಿದ್ದಿಲ್ಲ. ಮನೆಯಲ್ಲಿ ಭಟ್ಟರೇ ಇಲ್ಲವೆಂಬುವಂತೆ ಆತ ವರ್ತಿಸುತ್ತಿದ್ದ. ಆದರೆ ತಾಯಿ ತಂಗಿಯರನ್ನು ಮಾತ್ರ ಎಂದೂ ಮಾತನಾಡಿಸದೆ ಹಾಗೂ ಅವರ ಬದಿಯಲ್ಲಿ ಕುಳಿತು ತನ್ನ ಬದುಕಿನ ಸುಖ

ದುಃಖವನ್ನು ತೋಡಿಕೊಳ್ಳದೆ ಹೋಗುತ್ತಿದ್ದಿಲ್ಲ. ಮೇಧಾವಿನಿಯೆಂದರೆ ಅವನಿಗೆ ಪಂಚಪ್ರಾಣ. ವಾರಕ್ಕೊಂದು ಸಲವಾದರೂ ಮನೆಗೆ ಬಂದು ಅವಳನ್ನು ಮಾತನಾಡಿಸಿ ಅವಳ ಯೋಗಕ್ಷೇಮವನ್ನು ಕೇಳಿಕೊಂಡು ಹೋಗದಿದ್ದರೆ ಮನಸ್ಸು ಸಮಾಧಾನವಾಗುತ್ತಿದ್ದಿಲ್ಲ. ತಂದೆಗರಿಯದೆ ಮೇಧಾವಿನಿಗೆ ಅವಳ ಅಭ್ಯಾಸಕ್ಕೆ ಅನುಕೂಲತೆಗಳನ್ನು ಒದಗಿಸಿಕೊಡು ತ್ತಿದ್ದನು. ತಂದೆ ಮಗನನ್ನು ಎಷ್ಟೇ ಹೀನಗಳೆದರೂ ಮೈತ್ರೇಯಿ ಗಿರಿಧಾರಿ ಮನೆಗೆ ಬಂದರೆ ತಾಯಿಯ ಕಕುಲಾತೆಯಿಂದ ಆತನ ಬೆನ್ನ ಮೇಲೆ ಕೈಯಾಡಿಸುತ್ತ ಮಗನ ಮೊಗವನ್ನು ಅಂತಃಕರುಣದಿಂದ ನುಂಗು ವಂತೆ ನೋಡುತ್ತ ಕುಳಿತುಕೊಳ್ಳುವಳು. ತಂದೆಯು ಮಗನನ್ನು ಶ್ವಪಚ, ವ್ರಾತ್ಯ— ಎಂದು ಕರೆದರೂ ಗಿರಿಧಾರಿಯು ಜೀವನದಲ್ಲಿ ಗಣ್ಯವ್ಯಕ್ತಿಯಾ ಗಬೇಕೆಂದು ತಾಯಿಯು ಮುಡುಪನ್ನು ಹಾಕುತ್ತಿದ್ದಳು. ಹಾಗೂ ಹರಕೆ ಹೊರುತ್ತಿದ್ದಳು. ಭಟ್ಟರು ಮಾತ್ರ ಮಗನಿಗೆ ಗಿರಿಧಾರಿಯೆಂದೆನ್ನದೆ ವ್ರತಧಾರಿಯೆಂದು ಕರೆಯುತ್ತಿದ್ದರು.

ಗಿರಿಧಾರಿಯು ಇಂದು ಭಟ್ಟರ ಮನೆಗೆ ಕಾರಿನಲ್ಲಿ ಬಂದನು. ಮನೆಯ ಮುಂದೆ ಕಾರಿನ ಸಪ್ಪಳವಾದ ಕೂಡಲೇ ಕೋಣೆಯಲ್ಲೋದುತ್ತಿದ್ದ ಮೇಧಾ ವಿನಿ ವಿದ್ಯಾಚರಣನೇ ಬಂದಿರಬಹುದೆಂದು ಧಾವಿಸಿ ಹೊರಗೆ ಬಂದಳು.

ಗಿರಿಧಾರಿ ಕಾರಿನಿಂದಿಳಿಯುತ್ತಲೇ 'ಮೇಧಾವಿನಿ' ಎಂದು ಕೂಗಿದನು.

" ಅಮ್ಮಾ ಅಣ್ಣ ಬಂದಿರುವನು. ತೀವ್ರ ಬಾ. ಅಣ್ಣನ ಕಾರನ್ನು ನೋಡು," ಎಂದು ಮೇಧಾವಿನಿಯು ಒಳಗಿದ್ದ ತಾಯಿಯನ್ನು ಕರೆದಳು.

ಮಗಳು ಕರೆಯುವದನ್ನು ಕೇಳಿ ಅಡಿಗೆಯಮನೆಯಲ್ಲಿ ಕೆಲಸಮಾಡು ತ್ತಿದ್ದ ಮೈತ್ರೇಯಿ ಧಾವಿಸಿ ಹೊರಗೆ ಬಂದಳು. ಮಗನು ಬರುವ ರೀತಿ ಯನ್ನು ಕಂಡು ಎವೆಬಡಿಯದೆ ತಾಯಿಯು ಆತನು ಬರುವದನ್ನು ನೋಡುತ್ತ ನಿಂತಳು. ಒಳಗೆ ಬಂದವನೇ ಗಿರಿಧಾರಿಯು ತಾಯಿಗೆ ನಮಸ್ಕರಿಸಿದನು. ಕಕುಲಾತೆಯಿಂದ ಮಗನ ಮೈದಡವಿ ಮೈತ್ರೇಯಿ ಮಮತೆಯಿಂದ ಯೋಗಕ್ಷೇಮವನ್ನು ಕೇಳಿದಳು. ತಾಯಿಯ ಕಣ್ಣೊಳ ಗಿಂದುದುರಿದ ಎರಡು ಹನಿಗಳನ್ನು ನೋಡಿ ಗಿರಿಧಾರಿ,

" ಅಮ್ಮಾ ಇಂದೇಕೆ ನನ್ನನ್ನು ನೋಡಿ ನಿನ್ನ ಕಣ್ಣಲ್ಲಿ ನೀರು "

ಎಂದು ಕೇಳಿದನು.

"ಮಂಗೂ ನೀನು ಕಾರಿನಲ್ಲಿ ಬಂದಿರುವದನ್ನು ಕಂಡು ನನ್ನ ಮನಸ್ಸು ಹಿರಿ ಹಿರಿ ಹಿಗ್ಗಿತು. ಹಿಡಿಸಲಾರದಷ್ಟು ಆನಂದವಾಗಿ ಹನಿಗಳುದರಿದವು. ಅವರು ಕರೆಯುತ್ತಿದ್ದ ಮೃತಧಾರಿ ನೀನಲ್ಲವೆಂದು ನನಗೆ ಮನವರಿಕೆ ಮಾಡಿ ಕೊಟ್ಟೆ."

"ಅಪ್ಪನ ದೃಷ್ಟಿಯಲ್ಲಿ ನಾನು ಮೃತಧಾರಿ ಇರಬಹುದು. ನಾನು ಅವನಿಗೆ ಮೃತನು. ನಿನ್ನ ಮಮತೆಯ ಮಹಾಸಾಗರಕ್ಕೆ ನಾನು ಗಿರಿಧಾರಿ."

ಬದಿಯಲ್ಲಿ ಬಳುಕುತ್ತ ನಿಂತಿದ್ದ ತಂಗಿಯನ್ನು ಕರೆದುಕೊಂಡು ಗಿರಿಧಾರಿಯು ಅವಳ ಕೋಣೆಗೆ ಹೋದನು.

ಭಟ್ಟರು ಎಲ್ಲಿಯೋ ಹೊರಗೆ ಹೋಗಿದ್ದರು.

"ಮೇಧಾವಿನಿ ಅಭ್ಯಾಸ ಹೇಗೆ ನಡೆದಿರುವದು ?"

"ಅಭ್ಯಾಸ ಮಾಡುತ್ತಿರುವೆ. ಚನ್ನಾಗಿ ನಡೆದಿರುವದು."

"ಅಭ್ಯಾಸಕ್ಕೆ ತೊಂದರೆ ಮಾಡಿಕೊಳ್ಳಬೇಡ. ನನಗೆ ಸರಸ್ವತಿ ಶತ್ರು. ನೀನು ಮಾತ್ರ ಪ್ರಥಮ ವರ್ಗದಲ್ಲಿ ಉತ್ತೀರ್ಣಳಾಗಬೇಕು. ನೀನು ಹಾಗೆ ಮಾಡಿದರೆ ನನ್ನ ಆನಂದಕ್ಕೆ ಪಾರವೇ ಇಲ್ಲ. ನಾನು ನಿರಕ್ಷರಿಯಾದರೂ ನನ್ನ ತಂಗಿ ವಿದ್ಯಾಪತಿಯಾಗಬೇಕೆಂಬುದೇ ನನ್ನ ಹಂಬಲ" ಎಂದು ನುಡಿದು ತನ್ನ ಜೇಬಿನಲ್ಲಿಯ ಒಂದು ನೂರು ರೂಪಾಯಿ ನೋಟನ್ನು ತೆಗೆದು ಅವಳೆದುರಿಗಿನ ಮೇಜಿನ ಮೇಲಿಟ್ಟನು.

"ಅಣ್ಣಾ ಇದೇತಕ್ಕೆ ?"

"ನಿನ್ನ ಖರ್ಚಿಗಾಗಿ, ನಿನ್ನ ವಿದ್ಯಾಭ್ಯಾಸಕ್ಕಾಗಿ."

"ಮೊನ್ನೆ ನನ್ನ ಶಿಷ್ಯವೇತನ ಬಂದಿರುವದು"

"ಬಂದರೇನಾಯಿತು. ಇಟ್ಟುಕೊಳ್ಳು ನಿನ್ನ ಹತ್ತಿರ."

"ಬೇಡಣ್ಣಾ ನೀನೇ ಇಟ್ಟುಕೊಳ್ಳು, ನನಗೆ ಬೇಕಾದರೆ ನಿನಗೆ ಕೇಳುವೆ."

"ನೀನು ಕೇಳಿದ ಕಾಲಕ್ಕೆ ನನ್ನ ಹತ್ತರವಿರಬೇಕಲ್ಲ; ಇಂದು ಇದ್ದದ್ದು ನಾಳೆ ಇರುವದಿಲ್ಲ, ಇಂದು ಲಕ್ಷಾಧಿಪತಿಯಾದರೆ ನಾಳೆ ಭಿಕ್ಷಾಧಿ

ಪತಿಯಾಗಬಹುದು. ಇಟ್ಟುಕೊಳ್ಳು."

"ನನಗಿಷ್ಟು ಹಣ ಬೇಡ. ಪರೀಕ್ಷೆಯ ಫೀಯನ್ನು ಕಟ್ಟಲು ನನಗೆ ೨೫ ರೂಪಾಯಿ ಕಡಿಮೆ ಬೀಳುವವು. ನನ್ನ ಹತ್ತರ ೫೦ ರೂಪಾಯಿಗಳಿರುವವು. ಅಷ್ಟೇ ಹಣ ಕೊಡು ಹೆಚ್ಚಿಗೆ ಬೇಡ."

"ಫೀ ಕಟ್ಟುವ ಕೊನೆಯ ದಿನವೆಂದು ?"

"ನಾಳೆ."

"ನೀನು ಹಣಕ್ಕೆ ಏನು ಯೋಜನೆ ಮಾಡಿದ್ದಿ ?"

"ಹಣ ಸಿಕ್ಕರೆ ಕುಳಿತುಕೊಳ್ಳಬೇಕು; ಇಲ್ಲವಾದರೆ ಪರೀಕ್ಷೆಗೆ ಕೂಡುವದನ್ನು ಬಿಡಬೇಕೆಂದು ಮಾಡಿದ್ದೆ. ನನ್ನ ಈ ಸ್ಥಿತಿಯು ಮಧುಮತಿಗೆ ಗೊತ್ತಿತ್ತು; ನಾನು ಕೇಳದಿದ್ದರೂ ಅವಳು ಇಂದು ರೂಪಾಯಿ ತಂದು ಕೊಡುವೆನೆಂದು ಹೇಳಿದ್ದಳು."

"ನಾನು ಕೊಟ್ಟ ಹಣವನ್ನು ತೆಗೆದುಕೊಳ್ಳಲು ನಿನ್ನ ಮನಸ್ಸಿಲ್ಲವೇ"

"ಹಾಗೇನು ಅಲ್ಲ ಅಣ್ಣಾ. ನಿನಗೆ ತ್ರಾಸವಾಗುವದೆಂದು ನಾನು ಒಲ್ಲೆಂದೆನು. ಇಷ್ಟೇ."

"ಮಧುಮತಿಯೆಂದರೆ ಡಾಕ್ಟರ ವಿದ್ಯಾಚರಣನ ಮನೆಯಲ್ಲಿರುವ ಹುಡುಗಿ."

"ನಿನಗೆ ಹೇಗೆ ಗೊತ್ತು."

"ನಾನೇನು ದೇಶಸಂಚಾರಿ."

"ಅವರಲ್ಲಿ ಎಂದು ಹೋದದ್ದು?"

"ಅದೊಂದು ದೊಡ್ಡ ಕತೆಯಿರುವದು. ಒಬ್ಬ ಸಿರಿವಂತ ನನ್ನ ಪರಿಚಯಸ್ಥನು. ಆತನ ಪಕ್ಕದಲ್ಲಿರುವ ಮನೆಯನ್ನು ಚುನಾವಣೆಯ ಕಾರ್ಯಕ್ಕಾಗಿ ಬಾಡಿಗೆ ಹಿಡಿದಿರುವೆನು. ಅದಕ್ಕೂ ಮೊದಲು ಆ ಗ್ರಹಸ್ಥನ ಪರಿಚಯ ನನಗಿತ್ತು. ಮೊನ್ನೆ ರಾತ್ರಿ ಆ ಶ್ರೀಮಂತನ ಹೆಂಡತಿಯು ಊಟ ಮಾಡುತ್ತಿದ್ದಾಗ್ಗೆ ಒಂದು ಹಲ್ಲು ಬಿದ್ದು ತುತ್ತಿನ ಸಂಗಡ ಅವಳ ಗಂಟಲುದಲ್ಲಿ ಇಳಿದು ಕುತ್ತಿಗೆಯ ಶ್ವಾಸನಾಳದಲ್ಲಿ ಸಿಕ್ಕಿಕೊಂಡಿತು. ಅವಳಿಗೆ ಉಸಿರಾಡಿಸಲು ಬರದಾಯಿತು. ಕಣ್ಣು ಬೆಳ್ಳಗೆ ಮಾಡಿ ಕಾಲು ಚಲ್ಲಹತ್ತಿದಳು. ಆಕೆಯ ಗಂಡನು ಧಾವಿಸಿ ನನ್ನ ಕಡೆಗೆ ಬಂದನು.

ಅವನ ಕಂದಿದ ಮೊಗ, ನೀರಿನಿಂದ ತುಂಬಿ ತುಳುಕುತ್ತಿರುವ ಕಣ್ಣುಗಳು, ಥರಗುಡುತ್ತಿರುವ ದೇಹ, ಎಷ್ಟೋ ಕಾಲದ ವರೆಗೆ ಆರ್ತನಾದುತ್ತಿದ್ದ ಅಸ್ಪಷ್ಟ ಮಾತು— ಇವುಗಳನ್ನು ಕಂಡು ನನ್ನ ಮನವು ಕರಗಿ ನೀರಾಗಿ ಸಮಯಕ್ಕೆ ಬೇಕಾದ ಒಂದು ಶಕ್ತಿ ನನ್ನ ದೇಹದಲ್ಲಿ ಸಂಚರಿಸಿ ಯಂತ್ರ ದಂತೆ ಕ್ಷಣಾರ್ಧದಲ್ಲಿ ಕೆಲಸ ಮಾಡಿತು. ಆ ಶಕ್ತಿಯೇ ಅವರೆಲ್ಲರನ್ನು ಕಾರಿನಲ್ಲಿ ಜುಗುಲು ಕಿಶೋರಿ ಆಸ್ಪತ್ರೆಗೆ ಕರೆದುಕೊಂಡು ಬಂದಿತು. ಕಾರಿನಿಂದಿಳಿದವನೇ ಆಸ್ಪತ್ರೆಯೊಳಗೆ ಧಾವಿಸಿದೆನು. ಅಲ್ಲಿ ರಂಜನಿಯೆಂಬ ದಾಯಿಯಿರುವಳು. ಆಗ್ಗೆ ಅವಳು ನಮಗೆ ನೀಡಿದ ನೆರವನ್ನೆಷ್ಟು ನೆನೆ ದರೂ ಕಡಿಮೆ. ಅವಳು ಆಕೆಯ ಚಿಂತಾಜನಕ ಪರಿಸ್ಥಿತಿಯನ್ನು ಕಂಡು, ಕೂಡಲೇ ಫೋನು ಮಾಡಿ ಡಾಕ್ಟರರನ್ನು ಕರೆಸಿದಳು. ಆಪರೇ ಶನ್ನ ಮಾಡದ ಹೊರತು ಬೇರೊಂದು ಉಪಾಯವಿಲ್ಲೆಂದು ಡಾಕ್ಟರರು, ಅವಳನ್ನು ಆಪರೇಶನ್ನ ಕೋಣೆಗೆ ತೆಗೆದುಕೊಂಡು ಹೋದರು. ಆಪರೇ ಶನ್ನ ಕೋಣೆಯ ಹೊರಗ ಆ ಗ್ರಹಸ್ಥನು ಸಾವಿನ ಕರಾಲದವಡೆಯಲ್ಲಿ ಸಿಲುಕಿದ ಹೆಂಡತಿಯು ಹೇಗೆ ಪಾರಾಗುವಳೋ ಎಂಬ ಚಿಂತೆಯಿಂದ ವ್ಯಾ- ಕುಲನಾಗಿ ಅತ್ತಿಂದಿತ್ತ ಓಡಾಡುತ್ತಿರುವದನ್ನೂ, ನಡುನಡುವೆ ಕೋಣೆಯ ಮುಚ್ಚಿದ ಬಾಗಿಲ ಸಂದಿನೊಳಗಿಂದ ಉಸಿರು ಬಿಡುತ್ತ ನೋಡುತ್ತಿರುವ ದನ್ನೂ ಕಂಡು ಕೈಕಾಲುಗಳನ್ನು ಕಳೆದುಕೊಂಡ ಕಾಲಕ್ಕೆ ನಾನು ನುಸುಳಿದೆನು. ಅರ್ಧ ಗಂಟೆಯವರೆಗೂ ಆಪರೇಶನ್ನ ಮುಗಿಯಲಿಲ್ಲ. ಗಾಬರಿಗೊಂಡು ಹೊರಗೆ ಬಂದ ರಂಜನಿಯನ್ನು ಕಂಡು ನಾನು ಮಾತ ನಾಡಿಸಬೇಕೆಂದು ಅವಳೆಡೆಗೆ ಧಾವಿಸಿದೆ. ಅವಳನ್ನು ಮಾತನಾಡಿಸಲು ಧೈರ್ಯ ಸಾಲದೆ ನಾನು ಹಿಂತಿರುಗಿದನು. ಅವಳು ಯಾರಿಗೋ ಫೋನು ಮಾಡಿದಂತಾಯಿತು. ಒಂದು ಕ್ಷಣದಲ್ಲಿಯೇ ಒಂದು ಕಾರು ಬಹಳೇ ವೇಗದಿಂದ ಆಸ್ಪತ್ರೆಗೆ ಬಂದಿತು. ಕಾರು ಇಳಿಯುತ್ತಲೇ ಒಬ್ಬ ಯುವ ಕನು ಆಪರೇಶನ್ನ ಕೋಣೆಗೆ ಹೋದನು. ಕುತೂಹಲದಿಂದ ಹೊರಬಿದ್ದ ಜನರಿಗೆ ಬಂದ ವ್ಯಕ್ತಿಯಾರೆಂದು ಕೇಳಿದೆ. ಅವರು ಡಾಕ್ಟರ ವಿದ್ಯಾಚರಣ ನೆಂದು ಹೇಳಿದರು.

"ಮುಂದೆ ಏನಾಯಿತು" ಎಂದು ಆತುರದಿಂದ ಮೇಧಾವಿನಿ ಕೇಳಿದಳು.

" ಮುಂದೆ ಐವತ್ತು ನಿಮಿಷಗಳಲ್ಲಿ ವಿದ್ಯಾಚರಣನು ರಂಜನಿಯೊಡನೆ ನಗುತ್ತ ಹೊರಗೆ ಬಂದನು. ರಂಜನಿಯು ನನ್ನನ್ನೂ ಆ ಶ್ರೀಮಂತ ಮನುಷ್ಯನನ್ನೂ ತೋರಿಸಿದಳು. ಚಿಂತೆ ಮಾಡಬೇಡಿ; ಹಲ್ಲು ಹೊರಗೆ ಬಂದಿರುವದು. ಹದಿನೈದು ದಿನಗಳವರೆಗೆ ಆಸ್ಪತ್ರೆಯಲ್ಲಿರಬೇಕಾಗುವದು ಎಂದು ವಿದ್ಯಾಚರಣನು ಹೇಳಿ ಉಳಿದ ಡಾಕ್ಟರರ ಸಂಗಡ ಹೋದನು " ಎಂದು ಗಿರಿಧಾರಿಯು ಹೇಳಿದನು.

" ನೀನು ಅವರ ಸಂಗಡ ಮಾತನಾಡಲಿಲ್ಲವೇ ? "

" ಅವರು ಕಾರಿನಲ್ಲಿ ಕುಳಿತು ಹೋಗುವಾಗ್ಗೆ ನಾನು ಅವರನ್ನು ತಡೆದೆ. ತಮ್ಮ ಉಪಕಾರ ಮರೆಯುವದಿಲ್ಲ. ಫೀ ಏನು ಎಂದು ಶ್ರೀಮಂತನು ವಿದ್ಯಾಚರಣನಿಗೆ ಕೇಳಿದನು. ದೇವರು ನಿಮಗೆ ಕಲ್ಯಾಣ ಮಾಡಲೆಂದು ನುಡಿದು ನಕ್ಕು ಬಿಟ್ಟು ಕಾರನ್ನು ತೆಗೆದುಕೊಂಡು ಹೋಗೇಬಿಟ್ಟನು.

ಇಂದು ಮುಂಜಾನೆ ಆ ಸಿರಿವಂತನು ನನ್ನ ಕಡೆಗೆ ಬಂದಿದ್ದನು. ಆತನ ಹೆಸರು ವಸುಪಾಲಶೆಟ್ಟಿ. 'ಗಿರಿಧಾರಿ ನೀನು ನನಗೆ ಬಹಳೇ ಉಪಕಾರ ಮಾಡಿದಿ. ಅಂದು ರಾತ್ರಿ ಮನೆಗೆ ನೋಡಲಿಕ್ಕೆ ಬಂದವರೆಲ್ಲರೂ ನನಗೆ ಸಹಾಯ ಮಾಡದೆ ತಮಗೇಕೆ ಬೇಕೆಂದು ಓಡಿಹೋದರು. ವಿದ್ಯಾಚರಣನ ಉಪಕಾರವಂತೂ ಮರೆಯುವಹಾಗಿಲ್ಲ,' ಎಂದು ವಸುಪಾಲಶೆಟ್ಟಿ ನುಡಿದು ನನ್ನೆದುರಿಗೆ ವಿದ್ಯಾಚರಣನಿಗೆ ಕೊಡಲು ನೂರು ರೂಪಾಯಿಗಳ ಹತ್ತು ನೋಟುಗಳನ್ನು ಇಟ್ಟನು. ನನಗೆ ಸಹಾಯ ಮಾಡಿದ್ದಕ್ಕೆ ೩೦೧ ರೂಪಾಯಿಗಳನ್ನು ಕೊಟ್ಟನು. ನಾನು ಬೇಡೆಂದು ಎಷ್ಟು ಹೇಳಿದರೂ ಆತ ಕೇಳಲಿಲ್ಲ. ಸಂಕಟದಲ್ಲಿದ್ದವರಿಗೆ ಸಹಾಯ ನೀಡುವದು ಮನುಷ್ಯನ ಕರ್ತವ್ಯ. ನನ್ನ ಕರ್ತವ್ಯ ನಾನು ಮಾಡಿರುವೆನು. ಕರ್ತವ್ಯಕ್ಕೆ ಪ್ರತಿಫಲವಿರುವದಿಲ್ಲ ಎಂದು ಹೇಳಿದನು.

ನಾನು ಪ್ರತಿಫಲವೆಂದು ಕೊಟ್ಟಿರುವೆನೆಂದು ತಿಳಿಯಬೇಡಿರಿ. ನಿಮ್ಮ ಕೆಲಸದಿಂದ ನನಗೆ ಆನಂದವಾಗಿ ಬಹುಮಾನವೆಂದು ಕೊಟ್ಟಿರುವೆನೆಂದು ತಿಳಿಯಿರಿ ಎಂದು ವಸುಪಾಲಶೆಟ್ಟಿಯು ನುಡಿದು ನನಗೆ ಸ್ವೀಕರಿಸಲು ಒತ್ತಾಯಮಾಡಿದನು. "

" ನೀನು ವಿದ್ಯಾಚರಣನಿಗೆ ರೂಪಾಯಿಗಳನ್ನು ಮುಟ್ಟಿಸಿರುವಿಯಾ?"

“ ನಾನು ಇಟ್ಟುಕೊಂಡಿರುವೆನೆಂದು ನಿನಗೆ ಸಂಶಯವೋ. ”

“ ಹಾಗಲ್ಲ; ಏನೋ ಕೇಳಿದೆ. ಅವರದು ಬಡವರ ಆಸ್ಪತ್ರೆಯೆಂದು ಕೇಳಿದ್ದೆ. ಅಪ್ಪನಿಗೆ ಜಡ್ಡಾದಾಗ ಅಂದು ರಾತ್ರಿಯಲ್ಲಿ ಅವರನ್ನು ಕರೆದು ಕೊಂಡು ಬಂದಿದ್ದೆ. ”

“ ಅವರ ಮನೆಯವರೆಗೆ ಹೋಗಿ ರೂಪಾಯಿ ಮುಟ್ಟಿಸಿ ಅಲ್ಲಿಂದ ನೇರವಾಗಿ ಇಲ್ಲಿಗೆ ಬಂದಿರುವೆನು. ”

“ ಅವರು ಹಣವನ್ನು ತೆಗೆದುಕೊಂಡರೋ. ”

“ ಹಣವನ್ನು ಸ್ವೀಕರಿಸಲು ಅವರಿಗೆ ನಾನು ಒತ್ತಾಯ ಮಾಡಬೇಕಾಯಿತು. ಅದರಲ್ಲಿ ಎರಡು ನೂರು ರೂಪಾಯಿಗಳನ್ನು ತೆಗೆದುಕೊಂಡು ಉಳಿದ ೮೦೦ ರೂಪಾಯಿಗಳನ್ನು ತಮ್ಮ ಆಸ್ಪತ್ರೆಯಲ್ಲಿ ಕೊಟ್ಟು ಪಾವತಿಯನ್ನು ಪಡೆದುಕೊಳ್ಳಲು ಹೇಳಿದರು. ತಾವು ತೆಗೆದುಕೊಂಡ ೨೦೦ ರೂಪಾಯಿಗಳಿಗೆ ತಮ್ಮ ಪಾವತಿಯನ್ನು ಕೊಟ್ಟರು. ನಾನು ಅವರ ಮನೆಯಿಂದ ಹಾಗೇ ಆಸ್ಪತ್ರೆಗೆ ಹೋಗಿ ಉಳಿದ ರೂಪಾಯಿಗಳನ್ನು ಕೊಟ್ಟು ಪಾವತಿಯನ್ನು ಪಡೆದುಕೊಂಡು ವಿದ್ಯಾಚರಣನಿಗೆ ತೋರಿಸಿ ಇಲ್ಲಿಗೆ ಬಂದಿರುವೆನು ” ಎಂದು ಗಿರಿಧಾರಿಯು ಹೇಳುತ್ತಿರಲು ಆವಳ ಕಣ್ಣುಗಳಿಂದ ಹನಿಗಳು ಉದುರಹತ್ತಿದವು.

“ಮೇಧಾ, ಕಣ್ಣುಗಳಲ್ಲಿ ಹನಿಗಳೇಕೆ. ”

“ ವಿದ್ಯಾಚರಣನ ತ್ಯಾಗ ಬುದ್ಧಿಯನ್ನು ಕಂಡು ಮನದಲ್ಲಿ ಒಂದು ತರಹದ ಸಂತೋಷವಾಯಿತು. ”

“ ಅವನು ಪ್ರೇಮವತಿಯ ಮಗನಂತೆ. ”

“ ಹೌದು. ”

“ ತಾಯಿಗಿಂತ ಮಗನು ಮಿಗಿಲಾದ. ವಿಧವೆ ಕಷ್ಟಪಟ್ಟು ಮಗನಿಗೆ ಕಲಿಸಿದಳಂತೆ. ”

“ ಅವಳ ಹಣೆಯ ಮೇಲೆ ಯಾವಾಗಲೂ ಕುಂಕುಮದ ಬೊಟ್ಟು ಇದ್ದಂತೆ ಕಂಡಿತು. ”

“ ಇದರಲ್ಲಿ ನನಗೆ ಹೆಚ್ಚಾಗಿ ಗೊತ್ತಿಲ್ಲ. ಜನರಾಡುವ ಮಾತನ್ನು ಕೇಳಿ ನಾನು ಹೇಳಿದ್ದು. ಆದರೆ ವಿದ್ಯಾಚರಣನು ಮಾತ್ರ ಬಹು ಅಪ

ರೂಪ ಮನುಷ್ಯನು. ಅಂತಹವರು ಸಿಗುವದು ಬಹಳ ವಿರಳ. ಎಲ್ಲರೂ ಹಣ ಹಣವೆಂದು ಹೆಣಗಾಡುವರು. ಡಾಕ್ಟರರೆಲ್ಲರೂ ಹಣವನ್ನು ನೋಡಿ ರೋಗಿಗೆ ಔಷಧವನ್ನು ಕೊಡುವರು; ಆದರೆ ವಿದ್ಯಾಚರಣನು ಮಾತ್ರ ರೋಗಿಯನ್ನು ನೋಡಿ ಔಷಧವನ್ನು ಕೊಡುವಂತೆ ತೋರುವದು."

"ತಾಯಿ ಪುಣ್ಯವಂತಳು" ಅಂದಳು ಮೇಧಾವಿನಿ.

"ನನ್ನಂತಹ ಮಗನಿಂದ ನಮ್ಮ ಅಪ್ಪನಿಗೆ ಎಷ್ಟು ಪುಣ್ಯ ಬಂದಿರುವದು ನೋಡು."

"ಅಪ್ಪನಿಗೆ ಬರದಿದ್ದರೂ ತಂಗಿಗೆ ಹಾಗೂ ಅಮ್ಮನಿಗೆ ಬಂದಿರುವದು."

"ಮೇಧಾ, ನೀನು ಮಾತಿನಲ್ಲಿ ಜಾಣೆ. ಅಮ್ಮನ ಹೃದಯ ಅಪ್ಪನ ಬುದ್ಧಿ— ಇವುಗಳ ಸಂಯೋಗ ನಿನ್ನಲ್ಲಿ ಆಗಿರುವದು. ನನ್ನಲ್ಲಿ ಅಮ್ಮನ ಹೃದಯವೊಂದೇ ಇರುವದು. ನನ್ನಲ್ಲಿ ಅಪ್ಪನ ಬುದ್ಧಿ ಹಾರಿ ಹೋಗಿ ಕೋಣದ ಬುದ್ಧಿ ಸೇರಿಕೊಂಡಿರುವದು. ಬುದ್ಧಿಗೂ ಹೃದಯಕ್ಕೂ ಒಂದು ಊರು ಆಗುವದಿಲ್ಲ. ಆದುದರಿಂದ ಅಪ್ಪನು ನನ್ನನ್ನು ಕಂಡರೆ ಬೆಂಕಿ ಕಾರುವನು. ನಾನು ಸಮಾಜಕ್ಕೂ ಮನೆತನಕ್ಕೂ ನಿರುಪಯೋಗಿ ಮನುಷ್ಯನೆಂದು ಅಪ್ಪನ ಭಾವನೆ" ಎಂದು ಗಿರಿಧಾರಿ ಅಂದನು.

ಮೆಲ್ಲಮೆಲ್ಲನೆ ಹೆಜ್ಜೆಯನ್ನಿಕ್ಕುತ್ತ ನಾಗವೇಣಿಯನ್ನು ಎಡಗೈಯಿಂದ ತಿರುವುತ್ತ ಮಧುಮತಿಯು ಕೋಣೆಯೊಳಹೊಕ್ಕಳು. ಕೋಣೆಯಲ್ಲಿ ಗಿರಿಧಾರಿ ಕುಳಿತದ್ದು ಕಂಡು ಅವಳು ಹಿಂತಿರುಗುವವಳಿದ್ದಳು.

"ನನ್ನ ಅಣ್ಣ ಗಿರಿಧಾರಿ" ಎಂದು ಮೇಧಾವಿನಿ ನುಡಿದಳು.

"ನಿಮ್ಮ ಅಣ್ಣನೋ" ಎಂದು ಆಶ್ಚರ್ಯದಿಂದ ನುಡಿದಳು.

"ಕುಳಿತುಕೋ" ಎಂದು ಎದ್ದು ತನ್ನ ಖುರ್ಚಿಯನ್ನು ಕೊಟ್ಟಳು.

"ಒಲ್ಲೆ, ಕೆಲಸವಿರುವದು; ಹೋಗುವೆನು" ಎಂದು ಅನ್ನುತ್ತ ಮಧುಮತಿಯು ತಾನು ತಂದಿದ್ದ ೨೫ ರೂಪಾಯಿಗಳನ್ನು ಅವಳಿಗೆ ಕೊಡಲಿಕ್ಕೆ ಹೋದಳು.

"ನನಗೆ ರೂಪಾಯಿ ಸಿಕ್ಕಿರುವವು ಬೇಡ" ಎಂದು ಮೇಧಾವಿನಿ ಹೇಳಿದಳು.

“ ಹಾಗಾದರೆ ನಾನು ಹೊರಡುತ್ತೇನೆ. ”

“ ಸ್ವಲ್ಪ ಕುಳಿತುಕೋ ಅವಸರಬೇಡ. ”

”ಹೊರಗೆ ಕಾರು ನಿಂತಿರುವದು ಹೋಗುವೆ” ಎಂದಳು ಮಧುಮತಿ.

“ ಕಾರಿನಲ್ಲಿ ಬಂದೆಯೋ. ”

“ ಹೌದು. ಅಣ್ಣ ನನ್ನನ್ನು ಕಾರಿನಲ್ಲಿ ಕರೆದುಕೊಂಡು ಬಂದಿರುವನು. ನಿನಗೆ ರೂಪಾಯಿಗಳ ಅವಶ್ಯಕತೆ ಇದ್ದದ್ದು ನಾನು ಮೊದಲೇ ಹೇಳಿದ್ದೆ. ಇಲ್ಲಿ ಕುಳಿತಿರುವ ನಿಮ್ಮ ಅಣ್ಣ ನಮ್ಮ ಮನೆಗೆ ಬಂದಿದ್ದರು. ಅಣ್ಣನಿಗೆ ಅವರು ಎಷ್ಟೋ ರೂಪಾಯಿಗಳನ್ನು ಕೊಟ್ಟರು. ಎಷ್ಟು ಅನ್ನುವದು ನನಗೆ ಗೊತ್ತಿಲ್ಲ. ವಿದ್ಯಾಚರಣನು ನನಗೆ ರೂಪಾಯಿಗಳನ್ನು ಕೊಟ್ಟು ನಿನಗೆ ಕೊಡಲು ನನ್ನನ್ನು ಇಲ್ಲಿಯುವರೆಗೆ ಕರೆದುಕೊಂಡು ಬಂದಿರುವನು ” ಎಂದು ಮಧುಮತಿ ನುಡಿದಳು.

ಇದನ್ನು ಕೇಳುತ್ತಲೆ ಮೇಧಾವಿನಿ ಧಾವಿಸಿ ಹೊರಗೆ ಬಂದು ಕಾರಿನಲ್ಲಿದ್ದ ವಿದ್ಯಾಚರಣನನ್ನು ಕಂಡು ನಮಸ್ಕರಿಸಿ ಒಳಗೆ ಬಂದು ಹೋಗಲು ಬಿನ್ನಹ ಮಾಡಿಕೊಂಡಳು.

“ ಇದು ನಿಮ್ಮ ಬಂದು ಹೋಗು ” ಎಂದು ಮಧುಮತಿಯು ಒಳಗಿನಿಂದ ಕೂಗಿ ಅಣ್ಣನನ್ನು ಕರೆದಳು.

ಮೇಧಾವಿನಿಯು ಬಿನ್ನಹವನ್ನು ಆತನಿಗೆ ಅಲ್ಲಗಳೆಯಲಿಕ್ಕಾಗಲಿಲ್ಲ. ಮಧುಮತಿಯು ಕೂಗನ್ನು ಕೇಳಿದ ಮೇಲಂತೂ ನಿರುಪಾಯನಾಗಿ ಕಾರಿನಿಂದಿಳಿದನು. ಮೇಧಾವಿನಿಯು ಆತನನ್ನು ಕರೆದುಕೊಂಡು ಕೋಣೆಗೆ ಬಂದಳು. ಗಿರಿಧಾರಿಯು ಎದ್ದು ವಿದ್ಯಾಚರಣನಿಗೆ ನಮಸ್ಕಾರ ಮಾಡಿ ಅಲ್ಲಿದ್ದ ಖುರ್ಚಿಯನ್ನು ಆತನಿಗೆ ಕುಳಿತುಕೊಳ್ಳಲು ಕೊಟ್ಟನು. ವಿದ್ಯಾಚರಣನೇ ಕುಳಿತ ಮೇಲೆ ನಿರುಪಾಯಳಾಗಿ ಮಧುಮತಿಯು ಕೋಣೆಯಲ್ಲಿ ಹೋಗಿ ಕುಳಿತುಕೊಳ್ಳಬೇಕಾಯಿತು.

“ ನಮ್ಮದು ಬಡವರ ಮನೆ ” ಎಂದು ಮೇಧಾವಿನಿಯು ಅಂದಳು.

“ ಬಡತನದಲ್ಲಿರುವವರು ಮನುಷ್ಯರಲ್ಲವೇ ಸಿರಿತನದಲ್ಲಿ ಮೆರೆಯುವವರಿಷ್ಟೇ ಮನುಷ್ಯರೋ ” ಮಧುಮತಿಯು ನಗುತ್ತ ಕೇಳಿದಳು.

“ ಬಡವರ ಮನೆಗೆ ಸಿರಿವಂತರು ಬರುವದು ಬಹಳೇ ಕಷ್ಟ. ಮರ್ಯಾ

ದೆಗೆ ಬಟ್ಟುಬರುವದೆಂದು ಬಡವರಿಂದ ಐದಡಿ ಸರಿದು ನಿಲ್ಲುವರು. ಇದು ಲೋಕದ ರೂಢಿ ” ಎಂದು ಗಿರಿಧಾರಿ ನುಡಿದನು.

“ ಮೇಧಾವಿನಿಯ ಪರಿಚಯ ತಮಗೆ ಇದ್ದದ್ದು ನನಗೆ ಗೊತ್ತಿರ-ಲಿಲ್ಲ ” ಎಂದು ಗಿರಿಧಾರಿ ಅಂದನು.

ಗಿರಿಧಾರಿಯು ಮೇಧಾವಿನಿಯ ಕೋಣೆಯಲ್ಲಿ ಕುಳಿತದ್ದು ಕಂಡು ವಿದ್ಯಾಚರಣನಿಗೆ ಆಶ್ಚರ್ಯವಾಯಿತು. ತುಸು ಸಮಯದ ಹಿಂದೆ ತನಗೆ ರೂಪಾಯಿ ಕೊಡಲು ಬಂದವನು ತಾನು ತನ್ನ ಮನೆಯಿಂದ ಬರುವದರೊಳಗಾಗಿಯೇ ಬಂದಿರುವದನ್ನು ಕಂಡು ಆಶ್ಚರ್ಯಪಟ್ಟನು.

“ ಇವರು ಮೇಧಾವಿನಿಯ ಅಣ್ಣಂದಿರು ಗಿರಿಧಾರಿ. ಮೇಧಾವಿನಿಯು ಇವರು ಸಮಾಜಸೇವಕರೆಂದೊಮ್ಮೆ ಹೇಳಿದ್ದು ನಿನಗೆ ನೆನಪಿರಲಿಕ್ಕಿಲ್ಲ. ” ಎಂದು ಮಧುಮತಿಯು ವಿದ್ಯಾಚರಣನಿಗೆ ಹೇಳಿದಳು.

“ ನಾನು ಸಮಾಜ ಸೇವಕನಲ್ಲ; ಸ್ವಾರ್ಥಸೇವಕನು,” ಎಂದೆಂದನು ಗಿರಿಧಾರಿ.

“ ತಾವು ಸಮಾಜ ಸೇವಕರೆಂಬುದು ಹೇಗೆ ನನಗೆ ತಿಳಿಯಲಿಲ್ಲ ” ವಿದ್ಯಾಚರಣನು ಕೇಳಿದನು.

“ ತಮ್ಮ ವೇಷ ಮತ್ತು ರೀತಿ ಸಮಾಜ ಸೇವಕನಂತಿರುವದು ” ಎಂದು ಮಧುಮತಿಯು ಗಿರಿಧಾರಿಯ ಕಡೆಗೆ ನೋಡುತ್ತ ನುಡಿದಳು.

“ ಸಮಾಜಸೇವೆ ಮಾಡತಕ್ಕವನು ಸಮಾಜಸೇವಕನು. ನಾನು ಸಮಾಜ ಸೇವಕನಲ್ಲ; ಸಮಾಜ ಸೇವೆಯನ್ನು ನಾನೆಳ್ಳಷ್ಟಾದರೂ ಮಾಡಿರುವದಿಲ್ಲ. ಉದರಂಭರಣಾರ್ಥವಾಗಿ ನಾನು ಸಲ್ಲಿಸುವ ಸೇವೆಗೆ ತಮ್ಮ ಮನಬಂದ ಹೆಸರಿನಿಂದ ಕರೆಯಬಹುದು. ಸಮಾಜದುತ್ಕರ್ಷಕ್ಕೆ, ಅದರ ಸುಸ್ಥಿರತೆಗೆ, ನಿಯಮಬದ್ಧ ವಿಕಾಸಕ್ಕೆ, ಕಾಲಮಾನೋಚಿತವಾಗಿ ನಡೆದು ಬಂದ ನೀತಿನಡಾವಳಿಗಳನ್ನು, ಕಟ್ಟುನಿಟ್ಟುಗಳನ್ನು ಪಾಲಿಸುವದರಲ್ಲಿಯೇ ಸಮಾಜಸೇವೆಯಿರುವದು. ಇವುಗಳಲ್ಲಿ ನಾನು ಒಂದಾದರೂ ನಿಯಮ ಪಾಲಿಸುವದಿಲ್ಲ. ಸಮಾಜಕ್ಕಾಗಿ ನಾನು ದುಡಿಯುವದಿಲ್ಲ; ನನ್ನ ಸ್ವಹಿತಕ್ಕಾಗಿ ಸಮಾಜವನ್ನು ಉಪಯೋಗಿಸಿಕೊಳ್ಳುವೆನು. ನನ್ನ ಸ್ವಾರ್ಥ ಸಾಧನೆಯಿಂದ ಸಮಾಜಸೇವೆ ಆಗುತ್ತಿದ್ದರೆ ಸಮಾಜ ಸೇವಕನೆಂದು ಕರೆ

ಯುಬಹುದು" ಎಂದು ಗಿರಿಧಾರಿ ನುಡಿದನು.

"ಎಲ್ಲರೂ ಸ್ವಾರ್ಥಪರಾಯಣರೇ; ಸ್ವಾರ್ಥ ತ್ಯಜಿಸಿದವರು ಸಾವಿರಕ್ಕೆ ಒಬ್ಬರೋ ಇಬ್ಬರೊ?" ಎಂದು ನುಡಿದನು ವಿದ್ಯಾಚರಣ.

"ತಾವು ಮಾತ್ರ ಸಾಂಪ್ರತದ ಮುಂದಾಳುಗಳಂತೆ ಕಾಣುವಿರಿ" ಅಂದಳು ಮಧುಮತಿ.

"ನನ್ನಲ್ಲಿ ಏನೆಯನ್ನು ಸೀಳಿದರೆ ಎರಡು ಅಕ್ಷರಗಳಿಲ್ಲ; ಬುದ್ಧಿಯಂತೂ ಜನ್ಮದಿಂದಲೇ ಲೋಪ. ಸಮಾಜದಲ್ಲಿ ಕುಣಿದರೆ ಎಲ್ಲರೂ ಮುಂದಕ್ಕೆ ಕರೆಯುವರು. ಸ್ವಚ್ಛವಾದ ಬಿಳಿಯ ಟೊಪ್ಪಿಗೆ, ಗಂಜಿಯಿಂದ ಬೆಳ್ಳಗೆ ಹೊಳೆಯುತ್ತಿರುವ ಖಾದಿಯ ಧೋತರ; ಮೈಯಲ್ಲಿ ಬೆಳ್ಳಗಿನ ಖಾದಿಯ ಶರ್ಟು; ಅದರ ಮೇಲೊಂದು ಝುಬ್ಬಾ. ಇಷ್ಟು ವೇಷ ಈಗಿನ ಕಾಲಕ್ಕೆ ಬೇಕು. ಆ ವೇಷವನ್ನೇ ನಾನು ಧರಿಸುವೆನು. ಈ ವೇಷದಲ್ಲಿ ನನ್ನ ದಡ್ಡತನವೆಲ್ಲ ಮುಚ್ಚಿ ಹೋಗುವದು. ಗಾಂಧಿಜಿಯವರಿಗೆ ಭಾರತದ ಪಿತನೆಂದು ಕರೆಯುವರು. ಇಂತಹ ವೇಷವನ್ನು ಕಲ್ಪಿಸಿ ಕೊಟ್ಟದ್ದಕ್ಕೆ ನಾನು ಅವರಿಗೆ ಆದಿ ಬ್ರಹ್ಮನೆಂದು ಕರೆಯುವೆನು" ಎಂದು ಗಿರಿಧಾರಿ ಅಂದನು.

"ವೇಷ ಕಲ್ಪಿಸಿ ಕೊಟ್ಟದ್ದಕ್ಕಲ್ಲ; ಜನರಲ್ಲಿ ಇಂತಹವರು ಸುಚರಿತ್ರವುಳ್ಳವರೆಂಬ ಭಾವನೆಯನ್ನು ಬಿತ್ತಿದ್ದಕ್ಕೆ ನೀವು ಚಾರಿತ್ರ್ಯಹೀನರೆಂದು ಜನರು ಅರಿತರೆ ನಿಮ್ಮನ್ನು ಕೇಳುವದು ಸಂಶಯ" ಎಂದಂದಳು ಮಧುಮತಿ.

"ಭಾವನೆ ಬಹಳ ದಿವಸನಿಲ್ಲಲಾರದು" ಮೇಧಾವಿನಿಯು ನುಡಿದಳು.

"ಈ ವೇಷಧಾರಿಗಳು ಸಿಂಹದ ಚರ್ಮವನ್ನು ಹೊದ್ದುಕೊಂಡ ಜಂಡಕ ನರಿಗಳಂತೆ" ಎಂದು ಮಧುಮತಿಯು ನಗುತ್ತ ಗಿರಿಧಾರಿಗೆ ಹೇಳಿದಳು.

"ನಾವು ಚಾರಿತ್ರ್ಯಹೀನರಾದರೆ ನೀವು ಏನೆಂದರೂ ಸೈ."

ಸ್ವಲ್ಪ ಕುಳಿತುಕೊಳ್ಳಿ; ಈಗ ಬರುವೆನೆಂದು ಹೇಳಿ ಮೇಧಾವಿನಿಯು ಚಹವನ್ನು ತಯಾರಿಸಲು ಹೋದಳು.

"ನನಗೆ ವೇಳೆಯಾಯಿತು. ಹೋಗಿ ಬರುವೆ" ಎಂದು ಗಿರಿಧಾರಿಗೆ

ಹೇಳಿ ಹೊರಡಲು ವಿದ್ಯಾಚರಣನು ಸಿದ್ಧನಾದನು.

“ ತಾವು ನನ್ನ ಮನೆಗೆ ಬಂದಿರುವದಿಲ್ಲ; ಬಂದದ್ದು ಮೇಧಾವಿನಿಯ ಕಡೆಗೆ. ತಾವು ಅವಳಿಗೆ ಹೇಳಿ ಹೋಗುವದುಚಿತವು ” ಗಿರಿಧಾರಿ ಅಂದನು.

“ ಅಣ್ಣ ಮೇಧಾವಿನಿಗೆ ಹೇಳಲು ನಾಚುವನು. ”

“ ಹಾಗೇನೂ ಅಲ್ಲ ” ಎಂದುತ್ತರವಿತ್ತನು ವಿದ್ಯಾಚರಣನು.

“ ಅವಳು ಬಂದಮೇಲೆ ಹೇಳಿ ಹೋದರಾಯಿತು. ಈಗ ಬರಬಹುದು ” ಎಂದು ಮಧುಮತಿಯು ನುಡಿದಳು.

“ ಮೇಧಾ ” ಎಂದು ಗಿರಿಧಾರಿ ಕೂಗಿದನು.

“ ಬಂದೆ ಅಣ್ಣಾ; ಸ್ವಲ್ಪ ತಡೆ ” ಎಂದು ಮೇಧಾವಿನಿಯು ಒಳಗಿನಿಂದಲೇ ಉತ್ತರ ಕೊಟ್ಟಳು.

“ ತಮಗೆ ಸಮಾಜಸೇವಕರೆಂದು ಅನ್ನುವದಕ್ಕಿಂತ ಮುಂದಾಳುಗಳೆಂದು ಕರೆದರೆ ತಮ್ಮ ಈ ವೇಷ ಭೂಷಣಕ್ಕೆ ಹೆಚ್ಚಾಗಿ ಶೋಭಿಸುವದು” ಎಂದು ನಸುನಗೆಯಿಂದ ಮಧುಮತಿಯು ನುಡಿದಳು.

“ ಮುಂದಾಳಾಗಲಿಕ್ಕೆ ನನ್ನಲ್ಲಿ ಯೋಗ್ಯತೆಯೇಯಿಲ್ಲ; ಹಾಗು ಆಗುವದು ನನಗೆ ಬೇಡ. ”

“ ತಮ್ಮಲ್ಲಿ ಯೋಗ್ಯತೆಯಿಲ್ಲವೇ. ”

“ ಸಾಂಪ್ರತ ಮುಂದಾಳುಗಳ ಯೋಗ್ಯತೆ ನನ್ನಲ್ಲಿಲ್ಲ. ”

“ ಅಂದರೆ. ”

“ ದುಃಖದಿಂದ ತೊಳಲಿ ಬಳಲಿ ಕಾರ್ಗತ್ತಲೆಯಲ್ಲಿ ಮುಗ್ಗುತ್ತಿರುವ ಜೀವನ ಪಥಿಕರಿಗೆ ದಾರಿ ದೀಪ ತೋರಿಸುವ ಜನರು ಜಗದಲ್ಲಿ ಕೆಲವರುಂಟು. ಇವರು ಜೀವಿಗಳ ದೀಪಸ್ತಂಭ. ಇವರು ಅವತಾರಿಗಳು. ಮಹಾತ್ಮರು ಸಾಂಪ್ರತಯುಗದ ಭಾರತದ ದೀಪಸ್ತಂಭ. ಇಂತಹ ಜನರು ಒಂದು ವಿಶಿಷ್ಟ ವರ್ಗದ ಮುಂದಾಳುಗಳು. ಇಂತಹವರು ಜನಿಸುವದು ಬಹು ಅಪರೂಪ. ಸ್ವಾರ್ಥ ಪರಾಯಣ ಜನರು ಇಂತಹ ಜನರ ಹೆಸರಿನಿಂದ ಜಂಗಮರ ಸಾರುಗಂಟೆಯನ್ನು ಬಾರಿಸುತ್ತ ಗೋಮುಖ ವ್ಯಾಘ್ರರಾಗಿ ಮುಂದಾಳುಗಳೆಂದು ಡಂಭ ತೋರಿಸುತ್ತ ಮೆರೆಯುವರು. ಇವರೇ ನಮ್ಮ ಇಂದಿನ ಜನನಾಯಕರು. ವಂಚನೆಯ ಮಂಕುಬೂದಿ

ಯನ್ನು ಜನಗಳ ಕಣ್ಣುಗಳಲ್ಲಿರಚಿ ತಮ್ಮ ನಾಯಕತ್ವವನ್ನು ಸಂಪಾದಿಸಿದವರೇ ಬಹಳ ಜನರು. ಇಂತಹ ಜನರು ತಮ್ಮ ಅರ್ಹತೆಯ ಸತ್ವದಿಂದ ಆಳುವದಿಲ್ಲ; ಬಲಪ್ರಯೋಗ ಇಲ್ಲವೆ ವಂಚನೆ ಅವರಾಳಿಕೆಯ ನೆಲಗಟ್ಟು. ತಮ್ಮ ಅನುಯಾಯಿಗಳಲ್ಲಿ ಸ್ವಸಂತೋಷದಿಂದ ಆತನನ್ನು ಅನುಸರಿಸುವೆನೆಂದು ಒಂದು ಪೊಳ್ಳು ಕಲ್ಪನೆಯನ್ನು ಹುಟ್ಟಿಸಲು ಬಹು ಚತುರರು. ಗಾಳಿಗೋಪುರದ ವಚನಗಳನ್ನೀಡುತ್ತ ಜನಜಂಗುಳಿಯನ್ನು ಹುರುದುಂಬಿಸಿ ತಮ್ಮ ಜಯಜಯಕಾರ ಮಾಡಲು ಹಚ್ಚುವರು. ಜಾತಿ, ಮತ ಇಲ್ಲವೆ ಭಾಷೆ ಇವುಗಳಲ್ಲಿ ಕಾಲಕ್ಕೆ ಯಾವದು ಸರಿ ಹೋಗುವದೋ ಅದನ್ನುಪಯೋಗಿಸಿಕೊಂಡು ಜನಗಳ ಮನದಲ್ಲಿ ದ್ವೇಷಾಗ್ನಿಯನ್ನು ಹೊತ್ತಿಸಿ ಮೇಲಿಂದ ಮೇಲೆ ಅವರಲ್ಲಿ ಪುಟ ನೀಡುವ ಸವಿಮಾತುಗಳ ಆಜ್ಯವನ್ನು ಹಾಕುತ್ತ ತಮ್ಮ ಸ್ಥಾನ ಭದ್ರತೆಯನ್ನು ಮಾಡಿಕೊಳ್ಳುವರು."

"ಇಂತಹ ಮುಂದಾಳುಗಳನ್ನು ಜನರು ಹೇಗೆ ನಂಬುವರು" ಎಂದು ಮಧುಮತಿ ಪ್ರಶ್ನಿಸಿದಳು.

"ಸತ್ಯ ಅಸತ್ಯವೆಂದು, ಅಸತ್ಯ ಸತ್ಯವೆಂದು ತೋರಿಸುವದರಲ್ಲಿ ಇವರು ಬಹಳೇ ಜಾಣರು. ತಮ್ಮ ಸ್ವಾರ್ಥಕ್ಕೆ ಉಪಯೋಗವಾಗುವದೇ ಸತ್ಯ; ಆತಂಕ ಒಡ್ಡುವದೇ ಅಸತ್ಯ. ಸಮಯಕ್ಕನುಗುಣವಾಗಿ ಮಮತ್ವಕ್ಕೆ ಪುಷ್ಟಿಯನ್ನೀಯುವದಕ್ಕೆ ಸತ್ಯಾಸತ್ಯಗಳ ಸ್ಥಾನ ಪಲ್ಲಟಣ ಮಾಡುವರು. ಅಕಸ್ಮಾತ್ತಾಗಿ ಸೋಲು ಬಂದರೆ ಅವರು ಅದನ್ನು ಜಯವೆಂದೇ ಸಾಧಿಸಿ ತಮ್ಮ ಹಸ್ತಕರಿಂದ ಜಯಭೇರಿಯನ್ನು ಹೊಡಿಸಿ ಮೆರೆಯುವರು" ಎಂದು ಗಿರಿಧಾರಿ ನುಡಿದನು.

"ನಿಮ್ಮ ವಸುಪಾಲಶೆಟ್ಟಿಯ ಹೆಂಡತಿಯು ಬದುಕಿದ್ದು ಹೆಚ್ಚಿನದು. ಹಲ್ಲು ಜಾರಿ ಶ್ವಾಸನಾಳದಲ್ಲಿ ಹೋಗಿ ಸಿಕ್ಕಿತ್ತು. ಆ ಕಾಲಕ್ಕೆ ದೇವರು ಬುದ್ಧಿ ಕೊಟ್ಟನೋ ಗೊತ್ತಿಲ್ಲ. ಮನುಷ್ಯನ ಬುದ್ಧಿ ಶಕ್ತಿಗಿಂತ ಬೇರೊಂದು ಅದ್ಭುತ ಶಕ್ತಿಯಿರುವದೆಂದು ಅಂದು ನನಗೆ ಅನುಭವವಾಯಿತು. ಆದರೆ ಕಾಣಲಾರೆವು ಅದನ್ನು. ನನ್ನ ವೃತ್ತಿಯಲ್ಲಿ ಮಾತ್ರ ನನಗೆ ಮೇಲಿಂದ ಮೇಲೆ ಇಂತಹ ಅನುಭವವು ಬರುತ್ತಿರುವದು. ಇಂತಹ ಅನುಭವವು ಪ್ರತಿಯೊಂದು ವ್ಯಕ್ತಿಗೆ ಜೀವನದಲ್ಲಿ ದೊರೆತರೂ ಆತ ದೇವರ ಶಕ್ತಿ

ಯೆಂದು ಅನ್ನಲಾರನು. ಇದೇ ನಮ್ಮ ಜೀವನದ ವೈಚಿತ್ರ್ಯ. ”

“ ಗಿರಿಧಾರಿಯು ಉಪನ್ಯಾಸವಾಯಿತು; ಅಣ್ಣನ ವೇದಾಂತ ಪ್ರಾರಂಭ ವಾಗಿರುವದು; ಮೇಧಾ. ತೀವ್ರ ಓಡಿಬಾ. ”

“ ಸ್ವಲ್ಪ ತಡೆ; ಬರುವೆನು. ”

“ ನೀನು ಎಲ್ಲಿ ಹೋದರೂ ಹೀಗೇ,” ಅಂದನು ವಿದ್ಯಾಚರಣ.

“ ಅಣ್ಣಾ, ಇದು ಮೇಧಾವಿನಿಯ ಮನೆ. ಅವಳು ಪರಕೀಯಳಲ್ಲ. ಆತ್ಮೀಯಳು. ಪರರ ಮನೆಯಲ್ಲಿ ನಾನು ಮಾತನಾಡುವದಿಲ್ಲ. ನನ್ನದು ತಪ್ಪೆಂದು ಸಮಾಜ ಸೇವಕರೇ ಹೇಳಲಿ. ”

“ ಇದು ನನಗೆ ತಿಳಿಯಲಾರದ ವಿಷಯ. ಏನೋ ಒಂದು ಅಗೋ ಚರವಾದ ಅದ್ಭುತಶಕ್ತಿ ಜಗತ್ತಿನಲ್ಲಿರುವದೆಂದು ನನಗೆ ಒಮ್ಮೊಮ್ಮೆ ಅನಿ ಸುವದು. ಆ ಶಕ್ತಿ ತನ್ನದೆಂದು ಮನುಷ್ಯನು ತಿಳಿದು ಅಟ್ಟಹಾಸದಿಂದ ನಡೆಯುವನು. ಆದುದರಿಂದಲೇ ಇಷ್ಟು ಕಷ್ಟ; ದುಃಖ.” ಎಂದು ಗಿರಿ-ಧಾರಿಯು ನುಡಿದನು.

“ ನಾನು ಕೇಳಿದ್ದಕ್ಕೆ ಉತ್ತರವನ್ನೀಯದೆ ಅಣ್ಣನ ಮಾತಿಗೆ ಪುಷ್ಟಿ ಕೊಟ್ಟಿರಿ. ”

“ ಆತ್ಮೀಯಳೆಂದು ತಿಳಿದುಕೊಂಡ ಮೇಲೆ ಪರರ ಮನೆಯಾಗುವ ದಿಲ್ಲ ” ಗಿರಿಧಾರಿ ನುಡಿದನು.

“ ಅಣ್ಣಾ ಒಂದು ನಿಮಿಷ ಬಂದು ಹೋಗು ” ಎಂದು ಮೇಧಾವಿನಿ ಅಡುಗೆಯ ಮನೆಯಿಂದ ಕರೆದಳು.

ಬಂದೆನೆನ್ನುತ್ತ ಗಿರಿಧಾರಿ ಅಡುಗೆಯ ಮನೆಗೆ ಹೋದನು.

ಬಡತನದ ಪ್ರಪಂಚವನ್ನು ಕಂಡು ದುಃಖವು ಒತ್ತಿ ಬಂದಿತು. ದುಃಖ ಹತ್ತಿಕ್ಕಿಕೊಂಡು ಮೇಧಾವಿನಿಯ ಸಂಗಡ ಕಪ್ಪುಗಳನ್ನು ತೆಗೆದುಕೊಂಡು ಗಿರಿಧಾರಿಯು ಕೋಣೆಗೆ ಬಂದನು. ಮೇಧಾವಿನಿಯು ಕೋಣೆಗೆ ಬಂದು,

“ ಇದು ನಮ್ಮ ಬಡವರ ಚಹ ” ಎಂದು ನುಡಿದು ವಿದ್ಯಾಚರಣನಿಗೂ ಮಧುಮತಿಗೂ ಕೊಟ್ಟಳು. ”

ಮಧುಮತಿಯು ಕುಡಿಯುತ್ತ ‘ ಈ ಚುನಾವಣೆಯ ಪ್ರಚಾರದಲ್ಲಿ ತಮ್ಮ ಪಾತ್ರವಿಲ್ಲವೇ ’ ಎಂದು ಗಿರಿಧಾರಿಗೆ ಕೇಳಿದಳು.

“ ಏನೋ ಪಾತ್ರವಹಿಸಿರುವೆ. ಹೇಗೆ ನಿರ್ವಹಿಸುವೆನೋ ದೇವರೇ

ಬಲ್ಲ. ಈ ಪ್ರಚಾರದ ಕಾರ್ಯದಲ್ಲಿ ಎಳೆದು ನೂಕಿರುವರು. ಮಧ್ಯ, ಮಾಂಸ, ಮೈಥುನ— ಈ ತ್ರಿಗುಣಾತ್ಮಕ ಮಕಾರವನ್ನು ಪ್ರತಿಯೊಬ್ಬ ಅಭ್ಯರ್ಥಿಯು ತನ್ನ ಚುನಾವಣೆಯ ಪ್ರಚಾರದ ಅಧಿದೈವತೆಯನ್ನಾಗಿಟ್ಟು ಕೊಂಡು ಹೋರಾಡುತ್ತಿರುವನು. ಕೆಲವರಂತೂ ಒಡತನದ ಬಾಳುವೆ ಯಿಂದ ಬೆಂಡಾಗಿ ಜಗತ್ತಿನಲ್ಲಿ ತಮಗೆ ಎಲ್ಲಿಯಾದರೂ ಸುಖದ ಲವಲೇಷ ವಿರುವದೋ ಎಂಬ ಪ್ರಶ್ನೆಯನ್ನು ದುಃಖದ ಮೌನದಿಂದ ಹಾಕುತ್ತಿರುವ ಮೊಟಾವ ಅಂಗನೆಯರ ನಾಚು ರಂಗಗಳನ್ನು ಮದ್ಯದ ಹೊಳೆಯ ತೀರದಲ್ಲಿ ಮಾಡಿಸುತ್ತಿರುವರು. ಓರ್ವ ರೂಪಜೀವಿಯಿಂದ ಇಪ್ಪತ್ತೈದು ಮತ ಗಳು ದೊರಕುವವೆಂದು ಒಬ್ಬ ಅಭ್ಯರ್ಥಿಯು ಹೇಗೋ ಅರಿತುಕೊಂಡಿ ದ್ದನು. ಆ ರೂಪಜೀವಿಯನ್ನು ಹಿಡಿದರೆ ತನಗೆ ಅಷ್ಟು ಮತಗಳು ಸಿಗು ವವೆಂಬ ದೃಢವಾದ ನಂಬಿಕೆ ಅವನದು. ಆ ಅಭ್ಯರ್ಥಿಯು ನನಗೆ ಹಣ ಕೊಟ್ಟು ಅವಳೆಡೆಗೆ ಕಳುಹಿಸಿಕೊಟ್ಟನು. ”

“ ನಿಮ್ಮನ್ನೇಕೆ ಕಳುಹಿಸಿಕೊಟ್ಟನು. ಆ ರೂಪಜೀವಿಯುವರು ಏನಾ ದರೂ... ... ಇತ್ತೋ ” ಕೇಳಿದಳು ಮಧುಮತಿ.

“ ನನ್ನದೂ ಅವಳದೂ ಏನೂ ಸಂಬಂಧವಿಲ್ಲ. ಅವಳು ಸಂಕಟದಲ್ಲಿ ಸಿಲುಕಿ ಪೇಚಾಡುವಾಗ್ಗೆ ನನ್ನಿಂದ ಸಂಕಟ ದೂರಾಗುವದೆಂದು ಯಾರೋ ಅವಳಿಗೆ ಹೇಳಿದರಂತೆ. ಕಣ್ಣೀರು ಹಾಕುತ್ತ ದೀನವದನದಿಂದ ನನ್ನ ಕಡೆಗೆ ಬಂದು ನನ್ನ ಸಹಾಯ ಕೇಳಿದ್ದಳು. ”

“ ನೀವು ಅವಳಿಗೆ ಸಹಾಯ ಮಾಡಿದಿರೋ ? ”

“ ಅವಳ ಅಸಹಾಯಕ ಪರಿಸ್ಥಿತಿಯನ್ನು ಕಂಡು ಕನಿಕರಪಟ್ಟೆ. ದುಃಖ ದಲ್ಲಿ ಮಿಡುಕುವ ಜೀವಿಯೊಬ್ಬಳೆಂದು ಅಂದುಕೊಂಡೆ. ಅವಳ ಧರ್ಮಕರ್ಮಗಳು ನನ್ನ ಕಣ್ಣೆದುರಿಗೆ ಆಗ್ಗೆ ಯಾವೂ ಕುಣಿಯಲಿಲ್ಲ. ಸಹಾಯ ಮಾಡಬೇಕೆಂದು ಮನ ಹಾತೊರೆಯಿತು. ನನಗೆ ಹಾಗೆ ಪ್ರೇರಣೆ ಮಾಡಿದವನು ದೇವರು. ”

“ ಅವಳು ಯಾವ ಸಂಕಟದಲ್ಲಿದ್ದಳು. ”

“ ಅವಳನ್ನು ಕಂಡರಾಗದ ಪೋಲಿಸ ಜವಾನರಲ್ಲಿಯ ಕೆಲವು ಪೋಲಿ ಗಳು ಅವಳಿಂದ ಹಣವೆತ್ತಬೇಕೆಂಬ ಆಸೆಯಿಂದ ಅವಳ ಮೇಲೆ ಅಲ್ಲ

ಸಲ್ಲದ ಆರೋಪಗಳನ್ನು ಹೊರಿಸಿ ಪೋಲೀಸ ರಾಜ್ಯಕ್ಕೆಳೆತಂದು ಅವಳನ್ನು ಕಾಡಿಸಿ ಅವಳ ತಲೆಯ ಮೇಲೆ ತಮ್ಮ ಅಧಿಕಾರದ ಶಸ್ತ್ರವನ್ನಿಟ್ಟು ಬಿಟ್ಟಿದ್ದರು. ಅವಳು ನಿರಪರಾಧಿಯೆಂದು ನನಗೆ ಹೇಗೋ ಅನಿಸಿತು. ದೇವರು ನನ್ನಿಂದ ಅವಳಿಗೆ ಸಹಾಯ ಮಾಡಿಸಿದನು. ಅಶ್ರುಪೂರ್ಣ ಕುಲ ದೃಷ್ಟಿಯಿಂದ ಕೃತಜ್ಞತಾಪೂರ್ವಕವಾಗಿ ನನ್ನನ್ನು ನೋಡಿ 'ಇಂದಿನವರೆಗೆ ಬಡವರಿಗೆ ದೇವರಿಲ್ಲೆಂದು ನಾನು ತಿಳಿದುಕೊಂಡಿದ್ದೆ, ತಾನು ಇರುವೆನೆಂದು ನಿಮ್ಮಿಂದ ನನಗೆ ಮನವರಿಕೆ ಮಾಡಿಕೊಟ್ಟ'ನೆಂದು ನುಡಿದು ಮಿಂಚಿನಂತೆ ಹೋದಳು. ಹೋಗುವ ಮುನ್ನ ನಿಮಗೆ ಸವಡು ದೊರೆತರೆ ಈ ಬಡವಿಯ ಮನೆಯಲ್ಲಿ ಪಾದಧೂಳಿಯನ್ನು ಹಾಕಬೇಕೆಂದು ಹೇಳಿದಳು. ಅವಳ ಮಾತು ಕೇಳಿ 'ನೊಂದಜೀವಿ' ಎಂದು ಮನದಲ್ಲಿ ಅಂದುಕೊಂಡೆ.

ನಾನು ಅವಳಿಗೆ ಸಹಾಯ ಮಾಡಿದ್ದನ್ನು ಅಭ್ಯರ್ಥಿಯು ಹೇಗೋ ತಿಳಿಸುಕೊಂಡಿದ್ದನು. ಅವಳ ತಲೆಬಾಗಿಲದಲ್ಲಿ ನಾನು ಕಾಲಿಡುತ್ತಲೇ ಆನಂದಭರಿತಳಾಗಿ ನನ್ನನ್ನು ಬರಮಾಡಿಕೊಂಡಳು."

"ಅಂತೂ ಸಮಾಜ ಸೇವಕರ ಪಾದಧೂಳಿಯು ಹಾಸು ಹೊಚ್ಚಿದ ಹೊಲಸಿನ ಹಜಾರದಲ್ಲಿ ಬಿದ್ದಿತು" ಮಧುಮತಿ ನಗುತ್ತ ನುಡಿದಳು.

"ಅವಳ ಹಜಾರವು ಹೊಲಸಿನ ಗುಂಡಿಯಲ್ಲ, ಸ್ವಚ್ಛತೆಯ ಆದರ್ಶವಾಗಿತ್ತು. ರೂಪಜೀವಿಯ ಮನೆಯಾದರೂ ಅಲ್ಲಿ ಏನೋ ಒಂದು ತರಹದ ಪ್ರಶಾಂತತೆಯಿತ್ತು. ಅಲ್ಲಿಯ ಪ್ರಶಾಂತತೆ ಕಂಡು ನಾನು ಬೆರಗಾದೆ. ಏನೋ ಪೂರ್ವಜನ್ಮದ ಕರ್ಮದಿಂದ ಅವಳು ಈ ವೃತ್ತಿಯನ್ನು ಕೈಕೊಂಡಿರಬಹುದೆಂದಂದುಕೊಂಡೆ. ಅವಳು ಬೀದಿಯ ಬಸವಿಯಲ್ಲೆಂದು ಮನದಲ್ಲಂದುಕೊಂಡೆ. ಅವಳ ಹಿತಾರ ಪಿತಾರವನ್ನು ಕೇಳಬೇಕೆಂದು ಮನವು ಹಾತೊರೆಯಹತ್ತಿತು. ಕೇಳುವದೆಂದರೆ ಅವಿವೇಕತನದ ಪರಮಾವಧಿಯಾಗುವದೆಂದು ಬಿಟ್ಟು ಬಿಟ್ಟೆ. ರೂಪಜೀವಿಗಳು ಸೌಜನ್ಯದ ಗೋರಿಯನ್ನೇ ಕಟ್ಟುವರು, ಕಟ್ಟಿರುವರು. ಆದರೆ ಇವಳು ನನಗೆ ಸೌಜನ್ಯದ ಮೂರ್ತಿಮಂತಾಗಿ ತೋರಿದಳು. ಅವಳ ವೃತ್ತಿಗೂ ಸ್ವಭಾವಕ್ಕೂ ಅಜಗಜಾಂತರವನ್ನು ಕಂಡು ನಾನು ಬೆಪ್ಪಾಗಿ ಕುಳಿತುಕೊಂಡೆ. ಕೆಳಗಿಟ್ಟ

ಕಣ್ಣುಗಳನ್ನು ಮೇಲಕ್ಕೆತ್ತಿ ನಾನವಳನ್ನು ನೋಡಲಿಲ್ಲ. ನನ್ನ ಮೌನ ವನ್ನು ಕಂಡು ನಾ ಬಂದ ಕಾರಣವನ್ನು ಕೇಳಿದಳು. ಮತ್ತು ತಾನು ವೃತ್ತಿಯನ್ನು ಬಿಟ್ಟಿರುವೆನೆಂದು ಹೇಳಿದಳು. ಹೇಗೋ ಧೈರ್ಯ ತೆಗೆ ದುಕೊಂಡು ಬಂದ ಉದ್ದೇಶವನ್ನು ಪ್ರಸ್ತಾಪಿಸಿದೆ. ನನ್ನ ಮಾತುಗಳನ್ನು ಕೇಳುತ್ತಲೇ ಅವಳ ಮೊಗದ ಮೇಲೆ ಜಿಗುಪ್ಸೆ-ಕ್ರೋಧ-ತಾತ್ಸಾರ ಭಾವಗ ಳೆಲ್ಲವೂ ಮೂಡಿ ಉದಾಸೀನ ಭಾವವೊಂದೇ ಉಳಿಯಿತು. ಅವಳ ಮೊಗದ ಮೇಲಿನ ಭಾವನೆಗಳ ಪರಿವರ್ತನೆ ಕಂಡು ನನ್ನ ಮನವು ಗಾಬರಿಗೊಂ ಡಿತು. ನನ್ನ ಮಾತು ಶಾಂತ ಚಿತ್ತದಿಂದ ಕೇಳಿಕೊಂಡು " ನಾನು ಇಂದಿ ನವರೆಗೆ ಮದಿರಾಪಾನ ಮಾಡಿಲ್ಲ; ಮಾಂಸವನ್ನು ಸೇವಿಸಿರುವದಿಲ್ಲ. ನನ್ನ ಜೀವನಕ್ಕೆ ರೂಪವನ್ನು ಉಪಯೋಗಿಸಿಕೊಳ್ಳುವೆನೆಂಬುದು ಸತ್ಯ. ಕಾಮುಕರ ಕೇಳಿಗೆ, ಲೈಂಗಿಕ ಸುಖಕ್ಕೆ ರೂಪನನ್ನು ಧಾರೆಯೆರೆಯಲು ಈ ವೃತ್ತಿಯನ್ನು ಕೈಕೊಂಡಿರುವದಿಲ್ಲ. ಒಮ್ಮೆ ಬಾಳಬೇಕೆಂಬ ಜೀವ ನದ ಆಕಾಂಕ್ಷೆಯೇ ರೂಪಜೀವಿಯನ್ನಾಗಿ ಮಾಡಿದ್ದು. ಅನಾಥ ಬಡವಿಯ ರೂಪಕ್ಕೆ ಶ್ರೀಮಂತರ ಕಣ್ಣುಗಳು ಬಹಳ. ಗಂಡಸಿನ ಹೇಡಿತನ, ಸಮಾಜ ದಲ್ಲಿಯ ಡಂಭಾಚಾರ ಪ್ರವೃತ್ತಿ, ಶಿಷ್ಟರೆಂದು ಮೆರೆಯುವವರ ಮಿಥ್ಯಾ ಚಾರ— ಇವೆಲ್ಲವುಗಳು ನನ್ನ ಜೀವನದ ಹಂಬಲವನ್ನು ಕನುರಿಸಿ ನನ್ನನ್ನು ಈ ವೃತ್ತಿಗೆ ನೂಕಿದ್ದು. ರೂಪಜೀವಿಗಳ ಕುಲದಲ್ಲಿ ಹುಟ್ಟಿ ಬೆಳೆದವಳು ನಾನಲ್ಲ " ಎಂದು ನುಡಿದಳು. ಅವಳ ಮಾತುಗಳನ್ನು ಕೇಳಿ ನಾನು ಹೊರಡಲಿದ್ದೆನು. ನನಗೆ ಕುಳಿತುಕೊಳ್ಳಲು ಆಗ್ರಹ ಮಾಡಿದ್ದ ರಿಂದ ನಿರುಪಾಯನಾಗಿ ಕುಳಿತುಕೊಂಡೆ. ' ನೀವು ನನಗೆ ಜೀವನದಲ್ಲಿ ಸಹಾಯ ನೀಡಿದವರು. ನಿಮ್ಮ ಕರುಣೆಯಿಂದ ಜಗತ್ತಿನಲ್ಲಿ ದೇವನಿರುವ ನೆಂಬ ವಿಶ್ವಾಸ ಹುಟ್ಟಿತು. ಜಗತ್ತು ಎಷ್ಟೇ ನನ್ನ ಮೇಲೆ ಹರಿದು ಬಿದ್ದರೂ ಹೆಂಗಸು ಹಾದಿ ಬಿಟ್ಟು ಹಾದಿಗೆ ಹೋಗಬಾರದೆಂದು ಎಷ್ಟೋ ವರುಷಗಳ ಹಿಂದೆ ಒಬ್ಬ ಪುಣ್ಯಾತ್ಮಳು ನನಗೆ ಜೀವದಾನ ಮಾಡಿ ಉಪ ದೇಶ ಮಾಡಿದ್ದು ನನಗೆ ಈಗ ಹೆಜ್ಜೆ ಹೆಜ್ಜೆಗೆ ನೆನಪಾಗುತ್ತಿರುವದು. ನನ್ನ ಈ ಹೇಯ ವೃತ್ತಿಯ ಬಗ್ಗೆ ವಿಚಾರ ಮಾಡಲು ಹಚ್ಚಿದಿರಿ ' ಎಂದು ನುಡಿದಳು.

ಅವಳ ಮಾತು ಕೇಳುತ್ತಿದ್ದಂತೆ ನನ್ನ ಮನವು ಕಳವಳಗೊಂಡಿತು. ಮತದೊರಕಿಸಿ ಕೊಡಿರೆಂದು ಹೇಳುವ ಧೈರ್ಯ ಎಲ್ಲಿಯೋ ಮಾಯವಾಗಿ ನಾನು ಕೈಕೊಂಡ ಕಾರ್ಯದ ಬಗ್ಗೆ ಮನದಲ್ಲಿ ಹೇಯ ಉತ್ಪನ್ನವಾಯಿತು. ಅವಳ ಜೀವನಕ್ಕೂ ನನ್ನ ಜೀವನಕ್ಕೂ ಏನೂ ಅಭ್ಯಂತರ ಕಾಣಲಿಲ್ಲ. ಜೀವನದಲ್ಲಿ ಜೀವಿಸಬೇಕೆಂಬ ಆಕಾಂಕ್ಷೆಗೆ ಅವಳು ತನ್ನ ರೂಪವನ್ನು ಎಡೆಮಾಡಿರುವಳು. ಪ್ರತ್ಯುತ್ಪನ್ನ ದೃಷ್ಟಿಯಿಂದ ನನ್ನ ಬುದ್ಧಿ ಶಕ್ತಿಗಳನ್ನು ಪರರಿಗೆ ಮುಡುಪಾಗಿಟ್ಟಿರುವೆನು. ಅವಳು ತನ್ನ ರೂಪ ಮಾರಾಟಗಾರ್ತಿ; ನಾನು ನನ್ನ ಬುದ್ಧಿ ಶಕ್ತಿಗಳ ಮಾರಾಟಗಾರ. ಈರ್ವರಲ್ಲಿಯೂ ಜೀವಿಸಬೇಕೆಂಬ ಹಂಬಲ" ಎಂದು ನುಡಿದನು ಗಿರಿಧಾರಿ.

"ಮುಂದೆ ಮತಗಳನ್ನು ದೊರಕಿಸುವದರ ಗತಿಯೇನಾಯಿತು" ಎಂದು ಮಧುಮತಿಯು ಕೆದರಿ ಕೇಳಿದಳು.

"ಮುಂದೇನಾಗುವದು? ಆಗುವದಿಲ್ಲವೆಂದು ಪರಿಪರಿಯಿಂದ ನಾನು ಅವನಿಗೆ ಹೇಳಿದೆ. ಅಂದಿನಿಂದ ಇಂತಹ ಕಾರ್ಯಗಳಲ್ಲಿ ಕೈಹಾಕಬಾರದೆಂದು ಸಂಕಲ್ಪ ಮಾಡಿರುವೆನು."

"ನಿಶ್ಚಯವನ್ನೇಕೆ ಮಾಡಿದಿರಿ."

"ನಾನು ಅವಳ ಮನೆಯಿಂದೆದ್ದು ಹೊರಡುವ ಮುನ್ನ ನೀವು ಇಂತಹ ಅವಹೇಳನ ಕಾರ್ಯದಲ್ಲಿ ಧುಮುಕಬಾರದಾಗಿತ್ತು ಎಂದು ಆವಳಾಡಿದ ಮಾತು ನಾನು ಮರೆತಿಲ್ಲ."

"ನೀವು ತಿರುಗಿ ಅವಳೆಡೆಗೆ ಹೋದಿರೋ."

"ಅವಳನ್ನು ಕಾಣಬೇಕೆಂದು ಪ್ರಯತ್ನ ಮಾಡಿದೆ. ಎಲ್ಲವೂ ನಿಷ್ಫಲ. ಅವಳನ್ನು ನನ್ನ ಬಾಲ್ಯದಲ್ಲಿ ಎಲ್ಲಿಯೋ ನೋಡಿದಂತೆನಿಸುವದು. ಆದರೆ ಎಲ್ಲೆಂಬುದು ನನಗೆ ನೆನಪಾಗಲೊಲ್ಲದು."

"ಬಾಲ್ಯದ ಕನಸಿನಲ್ಲಿ ನೀವು ಕಂಡಿರಬಹುದು. ಅವಳೆಲ್ಲಿ ಹೋದಳೆಂದು ನೆರೆಹೊರೆಯವರಲ್ಲಿ ಕೇಳಬೇಕಾಗಿತ್ತು" ಎಂದು ನುಡಿದಳು ಮಧುಮತಿ.

"ಕೇಳಿದೆ. ಏನೂ ಪ್ರಯೋಜನವಾಗಲಿಲ್ಲ. ಯಾರೋ ಒಬ್ಬರು ಬಂದು ಕರೆದುಕೊಂಡು ಹೋದರೆಂದು ಗೊತ್ತಾಯಿತು. ಆವೇಶದ ಭರ

ದಲ್ಲಿ ಉದ್ವಿಗ್ನವಾದ ಮನಸ್ಸು ಉದಾತ್ತ ವಿಚಾರಗಳನ್ನು ಅವಳಲ್ಲಿ ತುಂಬಿ ನುಡಿಸಿರಬಹುದು. ಆದರೆ ಅವಳ ದೇಹವು ಆ ವಿಚಾರಗಳಿಗೆ ಹೊಂದಿ ಕೊಂಡು ಜೀವನವನ್ನು ಸಾಗಿಸಲು ಅಲ್ಲಗಳೆದಿರಬಹುದು. ಯಾರದೋ ಬೆನ್ನುಹತ್ತಿ ಓಡಿ ಹೋಗಿರಬಹುದೆಂದು ತಿಳಿದುಕೊಂಡೆ, ಮನುಷ್ಯನಲ್ಲಿ ನಡೆನುಡಿಗಳು ಸಮನ್ವಯವಾಗಿರುವದು ಬಹಳೇ ವಿರಳ. ಸಮನ್ವಯ ಮಾಡಿಕೊಂಡು ಹೇಗೆ ಜೀವಿಸಬೇಕೆಂಬುದೇ ನನ್ನ ಜೀವನದ ಸಮಸ್ಯೆ. "

" ಪ್ರತಿಯೊಬ್ಬನು ತನ್ನ ಸ್ವಭಾವಾನುಸಾರವಾಗಿ ವರ್ತಿಸಿದರೆ ಆತ ನಿಗೆ ಸಮಸ್ಯೆಯೇ ಉದ್ಭವಿಸುವದಿಲ್ಲ. ಸ್ವಭಾವಕ್ಕೂ ಜೀವನಕ್ಕೂ ಭೂವ್ಯಾಕಾಶ ಅಂತರವನ್ನಿಟ್ಟುಕೊಂಡು ಜೀವಿಸುವ ಜೀವಿಗೆ ಸುಖದ ಲವ ಲೇಶವಾದರೂ ದೊರಕದೆ ಅಶಾಂತಿಯಲ್ಲಿಯೇ ಮುಳುಗುವನು" ಎಂದು ವಿದ್ಯಾಚರಣನು ನುಡಿದನು.

" ಪ್ರತಿಯೊಬ್ಬನು ಸ್ವ-ಭಾವವನ್ನು ಹೃದಯದಲ್ಲಿ ಹುದುಗಿಸಿ ಹರಿ ದಾಡುವ ಮಾನಸ್ಸನ್ನು ಪರರ ಭಾವಕ್ಕೆ ಸಿಲುಕಿಸಿ ಪರರ ಅನುಕರಣ ಮಾಡುವದರಿಂದಲೇ ಜೀವನದಲ್ಲಿ ನಿರಾಶೆ ಹಾಗೂ ಬಾಳಿನ ಸಮಸ್ಯೆ " ಅಂದನು ಗಿರಿಧಾರಿ.

" ಹಂಗಿಸುವ ತನ್ನ ಹಳೇ ಜೀವನವನ್ನು ಬಿಟ್ಟು ಹೊಸ ಬಾಳನ್ನು ಮಾಡಬೇಕೆಂಬ ನಿರ್ಧಾರದಿಂದ ಹೋಗಿರಬಹುದು. ಬೆನ್ನುಹತ್ತಿ ಓಡಿ ಹೋಗಿರಬಹುದುವೆಂದು ತಿಳಿದುಕೊಳ್ಳುವದು ಅಪ್ರಾಸಮಂಜಸವಲ್ಲ. ಅವಳ ಜೀವನದಲ್ಲಿ ಪರಿವರ್ತನೆಯಾಗಿರಬಹುದು " ಎಂದು ನುಡಿದಳು ಮಧುಮತಿ.

ವಿದ್ಯಾಚರಣನು ವೇಳೆಯಾಯಿತೆಂದು ನಮಸ್ಕರಿಸಿ ಎದ್ದು ಹೊರ ಟನು. ಮೇಧಾವಿನಿಯು ಹೊರಗೆ ಬಂದು , ಅವ್ವಾ, ಡಾಕ್ಟರರು ಹೋಗು ವರೆಂದು ಅಡಿಗೆಮನೆಯಲ್ಲಿದ್ದ ಮೈತ್ರೇಯಿಗೆ ಕೇಳುವಂತೆ ಹೇಳಿದಳು. ಮೈತ್ರೇಯಿ ಹೊರಗೆ ಬಂದು ' ನಿಮಗೆ ಬಿಡುವಾದಾಗ್ಗೆ ಮೇಲಿಂದಮೇಲೆ ಬರುತ್ತಿರಬೇಕೆಂದು' ನುಡಿದಳು.

" ಅಣ್ಣನಿಗೆ ಊಟಕ್ಕೆ ವಿರಾಮ ಸಿಗುವದಿಲ್ಲ. ಇಂದು ಏಕೋ ನನ್ನ ಸಂಗಡ ಬಂದಿರುವನು " ಅಂದಳು ಮಧುಮತಿ.

ಮ-ಘುಮಂತಿಯೂ ವಿದ್ಯಾಚರಣನೂ ಹೊರಟು ಹೋದರು.

" ವೇದವತಿಯು ಪುಣ್ಯಾತ್ಮಳು " ಎಂದು ಮೈತ್ರೇಯಿ ನುಡಿಯುತ್ತ ಅಡಿಗೆಯ ಮನೆಗೆ ಹೋದಳು.

೫

" ಇಂದು ಹೋಗುವದಿಲ್ಲವೋ ಕಾಲೇಜಕ್ಕೆ. "

" ಏಕೆ ? "

" ಹನ್ನೊಂದು ಗಂಟೆಯಾಯಿತು; ಸ್ನಾನಕ್ಕೇಳಲಿಲ್ಲ. ದಿನದ ಕಾರ್ಯಕ್ರಮಗಳಲ್ಲಿ ಸುಸ್ತು ಕಂಡಿತು. ಅದಕ್ಕೆ ಕೇಳಿದೆ " ಎಂದು ಪ್ರೇಮನಂದಿನಿಯು ಪದ್ಮನಾಭನ ಕೋಣೆಯ ಹತ್ತರ ನಿಂತು ಕೇಳಿದಳು.

ಪದ್ಮನಾಭನು ಏನೋ ವಿಚಾರದಲ್ಲಿ ಮಗ್ನನಾಗಿದ್ದನು. ಮನಸ್ಸು ವ್ಯಗ್ರವಾಗಿತ್ತು. ಎರಡೂ ಕೈಗಳಿಂದ ಮೇಲಿಂದ ಮೇಲೆ ತಲೆಯನ್ನು ತಿಕ್ಕಿಕೊಳ್ಳುತ್ತಿದ್ದನು. ಮೇಜಿನ ಮೇಲೆ ಕಾಗದದ ರಾಶಿಯನ್ನು ಹರಪಿಕೊಂಡು ಒಂದೊಂದೇ ಕಾಗದವನ್ನು ಕೋಳಿಯು ಕಾಳನ್ನು ಆರಿಸುವಂತೆ ಆರಿಸುತ್ತಿದ್ದನು. ಕಾಗದವನ್ನಾರಿಸಿ ಅದನ್ನು ಚನ್ನಾಗಿ ಪರೀಕ್ಷಿಸಿ ಬೇರೆ ಕಡೆಗೆ ಇಡುತ್ತಿದ್ದನು. ಹೀಗೆ ಕಾಗದದ ಅರ್ಧ ರಾಶಿಯನ್ನು ಸರಿಸಿದ್ದನು.

ಕೋಣೆಯ ಬಾಗಿಲದಲ್ಲಿ ಇದನ್ನೆಲ್ಲ ನಿರೀಕ್ಷಿಸುತ್ತ ನಿಂತಿದ್ದ ಪ್ರೇಮನಂದಿನಿಯು ಇಷ್ಟು ವ್ಯಗ್ರ ಮನಸ್ಸಿನಿಂದ ಹುಡುಕುತ್ತಿರುವದೇನೆಂದು ಕೇಳಿದಳು. ಪ್ರೇಮನಂದಿನಿಯ ಮಾತು ಕೇಳಿ ಮಾರುತ್ತರವನ್ನೀಯದೆ ಶೂನ್ಯ ದೃಷ್ಟಿಯಿಂದ ಅವಳನ್ನು ನೋಡಿ ಮೇಜಿನ ಮೇಲಿನ ಕಾಗದಗಳಲ್ಲಿ ನಟ್ಟ ದೃಷ್ಟಿಯಿಂದ ಕುಳಿತುಕೊಂಡನು. ಅವನ ಅಂದಿನ ಹುಚ್ಚರ ಹಾವಭಾವಗಳನ್ನು ಕಂಡು, ಅವಳು ಗಾಬರಿಯಾಗಿ ಹುಡುಕುತ್ತಿರುವದೇನೆಂಬದನ್ನು ಹೇಳಿದರೆ ನನಗೆ ಶಕ್ಯವಿದ್ದಷ್ಟು ಸಹಾಯ ಮಾಡಲನುಕೂಲವಾ

ಗುವೆನೆಂದು ಅವಳು ಮೆಲ್ಲಗೆ ನುಡಿದಳು, ದೆವ್ವ ಬಡೆದ ಕಲ್ಲಿನಂತೆ ಕುಳಿತಿದ್ದ ಪದ್ಮನಾಭನು ಹುಚ್ಚರ ಹಾವಭಾವಗಳನ್ನು ಮಾಡುತ್ತ ಅಟ್ಟಹಾಸದಿಂದ ಗಹಿಗಹಿಸಿ ನಕ್ಕುಬಿಟ್ಟನು.

“ ಹೀಗೇಕೆ ಇಂದು ಹುಚ್ಚರ ಹಾಗೆ. ”

“ ಹುಚ್ಚರ ಹಾಗೆಂದೆನ್ನಬೇಡ. ಹುಚ್ಚನೇ ಆಗಿರುವೆನು. ”

“ ಡಾಕ್ಟರನ್ನು ಕರೆದುಕೊಂಡು ಬರುವೆ. ”

“ ಇಷ್ಟು ಉತ್ತರ ಕೊಡುವಷ್ಟು ಧೈರ್ಯ ಬೀದಿಯಲ್ಲಿಯ ಭಿಕಾರಿಗೆ ಬಂದಿತಲ್ಲ ? ಇದೊಂದು ಆಶ್ಚರ್ಯದ ಸಂಗತಿ. ”

“ ಜಗತ್ತಿನಲ್ಲಿ ಎಷ್ಟೋ ಆಶ್ಚರ್ಯದ ಸಂಗತಿಗಳಿರುವವು. ಅದರಲ್ಲಿ ಇದೊಂದು. ಸಜಾತೀಯುಗಳು ಹೊಂದಿಕೆಯಾಗುವಂತೆ ಭಿನ್ನಜಾತೀಯುಗಳು ಹೊಂದಿಕೆಯಾಗುವದಿಲ್ಲ. ”

“ ನಾನು ಬಿಕ್ಕೆ ಬೇಡುವೆನೆಂದು ಅನ್ನುವಿಯೇನು. ”

“ ನಾನು ಅನ್ನುವದಿಲ್ಲ. ನಿಮ್ಮ ದೃಷ್ಟಿಯಲ್ಲಿ ನಾನೊಬ್ಬ ಬಿಕ್ಕೆ ಬೇಡುವವಳು. ನಿಮ್ಮ ದೃಷ್ಟಿಯಲ್ಲೇಕೆ ಜನಜಂಗುಳಿಯ ದೃಷ್ಟಿಯಲ್ಲಿಯೂ! ಜೀವನದಲ್ಲಿ ದಿಕ್ಕುಕಾಣದೆ ಒದುಕಿ ಬಾಳಬೇಕೆಂಬ ಹವ್ಯಾಸಕ್ಕೆ ಸಿಲುಕಿ ಬೀದಿಯಲ್ಲಿಯ ಭಿಕಾರಿಯಾದವಳು ನಾನು. ನನ್ನನ್ನೆತ್ತಿ ಹಿಡಿದು ದಾರಿ ದೀಪ ತೋರಿಸಿದಿರಿ. ನಿಮ್ಮ ಆಶ್ರಯದಲ್ಲಿದ್ದುಕೊಂಡು ಮಾನದಿಂದ ಒಂದು ತುತ್ತು ಅನ್ನ ಉಣ್ಣುವೆನು. ನೀವು ಏನೆಂದು ಕರೆದರೂ ಆನಂದ.”

“ ನಿನ್ನನ್ನು ಕರೆದುಕೊಂಡು ಬಂದು ಮನೆಯಲ್ಲಿಟ್ಟುಕೊಂಡದ್ದೇ ತಪ್ಪು. ”

“ ನನ್ನಿಂದ ತಮಗೆ ದುಃಖವೇ ಆಗುತ್ತಿದ್ದರೆ ನಾನು ಇಲ್ಲಿಂದ ಹೊರಡುವದು ಲೇಸಲ್ಲವೇ ? ಗಂಡಸರ ಮಾತುಗಳನ್ನು ನಂಬಕೂಡದೆಂದು ನಾನೆಷ್ಟು ನಿರ್ಧಾರ ಮಾಡಿದರೂ ಮತ್ತೆ ಮತ್ತೆ ನಂಬಿ ದುಃಖದ ಮಡುವಿನಲ್ಲಿ ಮುಳುಗುವೆನು. ತಮ್ಮಲ್ಲಿ ನಾನು ಬರುವ ಮುಂದೆ ನನ್ನ ಹಿಂದಿನ ಎಲ್ಲ ವೃತ್ತಾಂತವನ್ನೂ ತಮಗೆ ಅರುಹಿದೆ. ಈ ಹವ್ಯಾಸದಲ್ಲಿ ಕೂಡಲೆ ಧುಮುಕಬೇಡಿರೆಂದು ಹೇಳಿ ನಾಲ್ಕಾರು ದಿನ ವಿಚಾರ ಮಾಡಲು ತಮಗೆ ಅವಧಿಯನ್ನೂ ಕೊಟ್ಟೆ; ನನ್ನ ಗತಿಸಿದ ಬಾಳುವೆಯು ಏನಿದ್ದರೂ ಅದನ್ನು

ನೀನು ಮರೆತುಬಿಡು, ನಿನ್ನನ್ನು ಅರ್ಧಾಂಗಿಯನ್ನಾಗಿ ಮಾಡಿಕೊಳ್ಳುವೆ
ನೆಂದು ನೀವು ನನಗೆ ಹೇಳಿ ಕರೆದುಕೊಂಡು ಬಂದಿರಿ. ಅದೆಲ್ಲವೂ ಹುರು
ಳಿಲ್ಲದ ಪಿಸು ನುಡಿಯಾಯಿತು."

"ನಾವಿಬ್ಬರೂ ದಂಪತಿಗಳಲ್ಲವೇ? ನೀನು ನನ್ನ ಅರ್ಧಾಂಗಿಯು
ಲ್ಲವೇ?"

"ನೀವು ನನ್ನನ್ನು ಈ ಮನೆಯ ಯಜಮಾನಿಯಂತೆ ನಡೆಸಿಕೊಳ್ಳು
ತ್ತಿರುವಿರಿ. ಅದನ್ನು ನಾನು ಅಲ್ಲಗಳೆಯಲಾರೆ. ಯಜಮಾನಿಯಾದರೆ
ಅರ್ಧಾಂಗಿಯಾಗಲಾರಳು. ಈ ಪತಿತಳನ್ನು ಗೌರವದೃಷ್ಟಿಯಿಂದಲೂ,
ಸ್ನಿಗ್ಧಭಾವದಿಂದಲೂ ನೋಡುತ್ತಿರುವ ನೀವು ನನಗೆ ದೊರೆತದ್ದು ನನ್ನ
ಭಾಗ್ಯ."

"ನಾನು ಐವತ್ತರ ಮನೆಯನ್ನು ದಾಟಿದೆ. ನೀನಾದರೂ ೪೫ರ
ಮನೆಯನ್ನು ಮುಟ್ಟಿದಂತೆ ತೋರುವದು. ನಾವಿಬ್ಬರೂ ಇನ್ನು ಮೇಲೆ
ಲಗ್ನವಾಗಿ ಮಾಡುವದೇನು? ನಾವು ಜನರಲ್ಲಿ ಅಪಹಾಸ್ಯಕ್ಕೀಡಾಗುವ
ದಿಲ್ಲವೇ."

"ಏನೋ ನನ್ನ ಮನದಲ್ಲಿಯ ಬಲವಾದ ಆಶೆ."

"ನಿನ್ನ ಆಶೆಯ ದಾಸನಾದರೂ ಆಶೆ ತಣಿಯಲಿಲ್ಲವೇ."

"ಆಶೆಗೆ ಅಂತ್ಯವಿಲ್ಲ, ಪಾಶೆಗೆ ಕಡೆಯಿಲ್ಲ ಎಂದು ನುಡಿಯುವರು.
ಸಮಾಜವನ್ನು ವಂಚಿಸಿ ಈಗ ನಾವು ಜೀವಿಸುವೆವು. ಗೌಪ್ಯವಾಗಿದ್ದ
ದಾಂಪತ್ಯ ಜೀವನವನ್ನು ಬಹಿರಂಗದಿಂದ ಸಾಗಿಸಲು ಈರ್ವರಲ್ಲಿಯೂ
ಮನೋಧೈರ್ಯಬೇಕು. ತಾನು ಮಾಡುತ್ತಿರುವ ಕೃತಿಯು ಸಹಜ
ಸ್ವಭಾವದಿಂದುದ್ಭವಿಸಿದ್ದಾದರೂ, ತನ್ನ ಬೆಳವಣಿಗೆಗೆ ಉಪಯುಕ್ತವಾದು
ದೆಂದು ಅರಿತರೂ ಮಾನವನು ಸಮಾಜದ ಕಟ್ಟಳೆಗಳಗೆದುರಾಗಿ ವರ್ತಿ
ಸಲು ಅಧೈರ್ಯಪಟ್ಟು ತನ್ನ ಕೃತಿಯನ್ನು ರಹಸ್ಯವಾಗಿಡಲು ಪ್ರಯತ್ನ
ಮಾಡುವನು. ಈ ಅಧೀರತನವು ನಮ್ಮಲ್ಲಿ ಬೇಡವೆಂದು ತಮಗೆ ಹಾಗೆ
ಬೇಡಿಕೊಂಡದ್ದು. ಇದಕ್ಕೂ ಹೆಚ್ಚಿಗೆ ನನ್ನದೇನೂ ಇಲ್ಲ" ಎಂದು ಪ್ರೇಮ
ನಂದಿನಿಯು ನುಡಿದಳು.

"ನಮ್ಮ ಕೃತಿಯು ನಮಗೆ ಯುಕ್ತವಾಗಿರಬಹುದು; ಅದು ಸಮಾ

ಜಕ್ಕೆ ಪ್ರಶಸ್ತವೋ ಅಪ್ರಶಸ್ತವೋ ಎಂಬುದು ನಮಗೆ ಹೇಗೆ ಹೇಳಲಿಕ್ಕಾಗುವದು ? ” ನಾವು ಬಹಿರಂಗದಿಂದ ನಡೆದರೆ ನಮ್ಮ ಕೃತಿಯು ಸಮಾಜಕ್ಕೆ ಸೂಕ್ತವೆಂಬ ನಮ್ಮ ಅಭಿಪ್ರಾಯವನ್ನು ಅದರ ಮೇಲೆ ಹೇರಿದಂತಾಗುವದಿಲ್ಲವೇ? ಅವರಿಂದಾಗುವ ಪರಿಣಾಮವನ್ನು ನಾವು ಸಾರಾಸಾರ ವಿಚಾರ ಮಾಡಬೇಕಾಗುವದು. ”

“ ನಮ್ಮಿಂದಲೇ ಸಮಾಜ. ಸಮಾಜದಿಂದ ನಾವಲ್ಲ. ”

“ ನಮ್ಮಿಂದ ಸಮಾಜವಾದರೂ, ಸಮಾಜದಿಂದ ನಾವು. ವ್ಯಕ್ತಿ ಹಾಗೂ ಸಮಾಜ ದೇಹ-ಪ್ರಾಣದ ಸಂಯೋಗವಿದ್ದಂತೆ. ನನ್ನಲ್ಲಿ ಧೈರ್ಯವಿದ್ದರೂ ಅದನ್ನು ತೋರಿಸಲು ನಾನೊಲ್ಲೆ. ಆ ಧೈರ್ಯವನ್ನರಿಯಲು ನಿಮಗೆ ಶಕ್ಯವಿಲ್ಲ. ”

“ ನಿಮ್ಮ ಮೊದಲಿನ ಈರ್ವ ಹೆಂಡಂದಿರು ಅರಿತಿದ್ದಿರಬಹುದು. ಮೊನ್ನೆ ಜಿಗುಲಿಕಿಶೋರಿ ಆಸ್ಪತ್ರೆಯಲ್ಲಿ ಯಾವನೋ ಪುಂಡನು ವೇದವತಿಯೆಂಬ ದಾಯಿಯ ಮೇಲೇರಿ ಹೋಗಿ ಅವಳನ್ನು ನೆಲಕ್ಕೆ ಕೆಡವಿ ಹೋದನೆಂದೂ ಬಿದ್ದ ಪೆಟ್ಟಿನಿಂದ ಅವಳು ಅಂದೇ ರಾತ್ರಿಯಲ್ಲಿ ಮೃತಪಟ್ಟಳೆಂದೂ ವರ್ತಮಾನಪತ್ರದಲ್ಲಿ ಬಂದಿರುವದು. ಅವಳು ಒಳ್ಳೇ ಚಾರಿತ್ರ್ಯವುಳ್ಳವಳಂತೆ. ಪುರುಷರು ತಮ್ಮ ಧೈರ್ಯಶೌರ್ಯಗಳನ್ನು ಹೆಂಗಸರ ಮುಂದಿಷ್ಟೇ ತೋರಿಸುವರೋ ? ”

“ ಅವನು ಹಾಗೆ ಮಾಡಿದ್ದರೆ ಮೂರ್ಖನು. ”

“ ಅವನು ಮೂರ್ಖನು ಹೇಗಾಗುವನು ? ಯುಕ್ತ ಸಮಯವನ್ನೊದಗಿಸಿಕೊಂಡು ಧೈರ್ಯದ ಪ್ರಯೋಗ ಮಾಡಿದ್ದರಿಂದ ಅವನು ಜಾಣನಲ್ಲವೇ. ”

“ಮನಸ್ಸಿಗನಿಸಿದಂತೆ ಮಾತನಾಡುವದು ಮನುಷ್ಯನ ಸಹಜಸ್ವಭಾವ. ಅದರಂತೆ ನೀನು ಮಾತನಾಡಿದಿ. ಆ ಮನುಷ್ಯನ ಕೃತಿಯು ‘ ತಪ್ಪೋ’ ಎಂಬುದು ಹೇಳಲು ಹೊರಗಿನವರಿಗೆ ಬರುವಂತಿಲ್ಲ. ಅವರ ಮನಸ್ಸೇ ಅವರ ಕೃತಿಗಳಿಗೆ ಸಾಕ್ಷಿ. ”

ಪದ್ಮನಾಭನು ಮುಂಬಯಿ ವಿಶ್ವವಿದ್ಯಾಲಯದ ಎಂ. ಎಸ್. ಸಿ. ರಸಾಯನ ಶಾಸ್ತ್ರದಲ್ಲಿ ಪ್ರಶಸ್ತಿಯನ್ನು ಪಡೆದಿದ್ದನು. ವಿದ್ಯಾಭ್ಯಾಸ ಮುಗಿದ

ನಂತರ ಕಾಲೇಜವಲ್ಲಿ ಪ್ರಾಧ್ಯಾಪಕನಾದನು. ಒಂದು ಕಾಲೇಜದಲ್ಲಿಯೂ ಆತ ನಿರಂತರ ಸೇವೆಯನ್ನು ಸಲ್ಲಿಸಲಿಲ್ಲ. ಕಾಲೇಜದಿಂದ ಕಾಲೇಜಕ್ಕೆ ಅಲೆಯುತ್ತಲೇ ಇದ್ದನು. ಹುಡುಗರಿಗೆ ಕಲಿಸುವ ಕಲೆಯಲ್ಲಿ ಮಿಗಿಲಾದವ. ಎಷ್ಟೋ ದುರ್ಗುಣಗಳ ತವರೂರಾಗಿದ್ದರೂ ಆತನು ಕಲಿಸುವ ನೈಪುಣ್ಯಕ್ಕೆ ಮೆಚ್ಚಿ ಯಾವದೇ ಕಾಲೇಜದವರಾದರೂ ತಮ್ಮಲ್ಲಿ ಪ್ರಾಧ್ಯಾಪಕನೆಂದು ತೆಗೆದುಕೊಳ್ಳಲು ಅಲ್ಲಗಳೆಯುತ್ತಿದ್ದಿಲ್ಲ. ಆದುದರಿಂದ ಅವನಿಗೆ ನೌಕರಿಯು ಕಷ್ಟವೇ ಆಗಲಿಲ್ಲ.

ಹೆಂಗಸರು ವ್ಯಭಿಚಾರದ ಪ್ರತೀಕವೆಂದು ಅವನ ಧೃಢವಾದ ಮನೋಭಾವನೆ. ಅದು ಅವನ ಮನೋವ್ಯಾಧಿ. ಬಾಲ್ಯದಿಂದಲೇ ಹೀಗೆ ಆತನ ಮನಸ್ಸಿನ ಮಾರ್ಪಾಟ. ಅದಕ್ಕೆ ಅವನ ತಾಯಿಯ ಜೀವನವು ಎಷ್ಟೋ ಕಾರಣವು. ಅವನ ಬಾಲ್ಯದಲ್ಲಿಯೇ ಆತನ ತಂದೆ ತೀರಿಕೊಂಡಿದ್ದ. ಆತನಿಗೆ ತಿಳುವಳಿಕೆ ಬಂದ ಮೇಲೆ ತಾಯಿಯ ಜೀವನವನ್ನು ಕಂಡು ಜಿಗುಪ್ಸೆಯುಂಟಾಗಿತ್ತು. ತಾಯಿಯು ತಾನು ಗರತಿ ಗಂಗಾದೇವಿಯೆಂದು ಸಾರುತ್ತ ಉಳಿದೆಲ್ಲ ಹೆಂಗಸರು ವ್ಯಭಿಚಾರಿಣಿಯರೆಂದು ಮಗನೆದುರಿಗೆ ಒಂದೂ ದಿನ ಬಿಡದೆ ಘಂಟಾಘೋಷ ಮಾಡುತ್ತಿದ್ದಳು. ಅವಳ ಮಾತು ಕೇಳಿ ಕೇಳಿ ಆತನ ತಲೆಯಲ್ಲಿ ಹೆಂಗಸು ವ್ಯಭಿಚಾರಿಯೆಂಬ ಭಾವನೆ ಬೆಳೆದು ವಿಶಾಲ ವೃಕ್ಷವಾಗಿತ್ತು. ಆ ವೃಕ್ಷದ ಬೇರುಗಳು ಆತನ ಹಾವಭಾವಗಳಲ್ಲಿ, ನಡೆ ನುಡಿಗಳಲ್ಲಿ, ಕೃತಿಗಳಲ್ಲಿ ನೆಲೆನಿಬಿಟ್ಟದ್ದು ಕಂಡು ಬರುತ್ತಿತ್ತು. ಆತನ ದಾಂಪತ್ಯ ಜೀವನಕ್ಕೆ ತಾಯಿಯು ಒಂದು ಕುಠಾರದಂತಿದ್ದಳು. 'ಹೆಂಡತಿಯನ್ನು ಬಿಟ್ಟು ಇರಲಾರ; ಇದ್ದರೆ ಇಟ್ಟುಕೊಳ್ಳಲಾರ' ಎಂಬ ಮಾತು ಅವನಲ್ಲಿ ಕಾಣಬಹುದು.

ಹೆಂಗಸು ವ್ಯಭಿಚಾರಿಯೆಂಬ ವಿಚಾರ ಆತನಲ್ಲಿ ಸುಳಿಯಿತೆಂದರೆ ಆತ ರಾಕ್ಷಸೀ ವೃತ್ತಿಯನ್ನು ತಾಳುತ್ತಿದ್ದನು. ಆ ವೃತ್ತಿಯನ್ನು ತಾಳಿದಾಗ್ಗೆ ಆತನು ಏನೂ ಮಾಡಲು ಹೇಸುತ್ತಿದ್ದಿಲ್ಲ. ಕೊಲೆ ಮಾಡಲಿಕ್ಕೂ ಹಿಂದು ಮುಂದೆ ನೋಡುವವನಲ್ಲ. ವಯಸ್ಸಾಗಿದ್ದರಿಂದ ರಾಕ್ಷಸೀ ವೃತ್ತಿಯನ್ನು ತಡೆಯುತ್ತಿದ್ದನು. ವಯಸ್ಸಾದಂತೆ ಮನೋಭಾವನೆಯಲ್ಲಿ ಪರಿವರ್ತನೆಯಾಗಹತ್ತಿತು.

ಪ್ರೇಮನಂದಿನಿ ಸುಂದರಿ. ಎತ್ತರ ನಿಲುವಿಕೆ, ಕೆಂಪು ಮೈಬಣ್ಣ, ಪುಷ್ಟವಾದ ದೇಹ. ವಯಸ್ಸಾದರೂ ನೋಡುವವರ ಮನವನ್ನು ಸೆಳೆಯುವಳು. ಜೀವನದಲ್ಲಿ ಪೆಟ್ಟು ತಿಂದವಳು.

"ನನ್ನ ಮನಸ್ಸು ನೋಯಿಸಬೇಡ. ಒಳಗೆ ಹೋಗಿ ಅಡಿಗೆಮಾಡು."

"ಅಡಿಗೆಯನ್ನು ಮಾಡಿರುವೆ. ತಾವು ಬರುವದೊಂದೇ ತಡ; ಊಟಕ್ಕೆ ಬಡಿಸುವೆ. ನನ್ನನ್ನು ನೋಯಿಸಿದ್ದು ನೀವು ಮರೆತುಬಿಡುವಿರಿ, ನಿಮ್ಮದೊಂದು ಮಾತ್ರ ನಿಮಗೆ ತಪ್ಪದೆ ನೆನಪಿರುವದು. ನನ್ನ ಜೀವನವನ್ನು ಪುರುಷರು ನೋಯಿಸಿ ಎಷ್ಟು ಹಾಳುಮಾಡಿದರೆಂಬುದನ್ನು ನಾನೆಷ್ಟು ಹೇಳಿದರೂ ಕಡಿಮೆ. ನಾನು ಜೇನುಬಟ್ಟಲವೆಂದು ಕುಡಿದರು. ನಾನು ಸೌಂದರ್ಯದ ರಸಪೀಡೆಂದು ರಸವನ್ನು ಸವೆದರು. ಮುಖದ ಕಾಂತಿಯನ್ನು ಕುಂದಿಸಿದರು. ರಸವನ್ನು ಸವೆದು ಕಬ್ಬಿನ ಸೊಪ್ಪೆಯನ್ನು ಹೊರಗೆ ಒಗೆಯುವಂತೆ, ಜೇನು ತುಪ್ಪವನ್ನು ಕುಡಿದು ಬಟ್ಟಲವನ್ನು ಬೀಸಾಡುವಂತೆ, ಬೆಂಕಿಯನ್ನು ಕಾಸಿಕೊಂಡು ನೀರೆರಚಿ ಆರಿಸಿದಂತೆ ನನ್ನ ಜೀವನವನ್ನು ಪುರುಷರು ಮಾಡಿರುವರು" ಎಂದು ಕಣ್ಣುಗಳಲ್ಲಿ ನೀರು ತಂದು ನುಡಿದಳು.

"ಹಿಂದಿನದನ್ನು ನೆನಿಸಿಕೊಂಡರೆ ಬರುವದೇನು?"

"ಪೆಟ್ಟು ತಿಂದವನಿಗೆ ಗಾಯದ ನೋವಾಗುವದು. ಪೆಟ್ಟು ಹಾಕಿದವನಿಗೆ ನೋವಾಗುವದಿಲ್ಲ. ನನ್ನ ಜೀವನದಲ್ಲಿಯ ಗಾಯಗಳು ನನ್ನ ಮರಣದಲ್ಲಿಯೇ ಮಾಯುವಂತೆ ತೋರುವವು. ಪುರುಷರ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ಕಿಂಚಿತ್ತಾದರೂ ನನ್ನ ಮನಸ್ಸಿನಲ್ಲಿ ಬರುವದಿಲ್ಲ" ಎಂದು ಪ್ರೇಮನಂದಿನಿಯು ನುಡಿದು ಒಳಗೆ ಹೋದಳು.

ಪದ್ಮನಾಭನು ಹಾಗೇ ವಿಚಾರ ಮಾಡುತ್ತ ಕುಳಿತುಕೊಂಡನು. ಒಂದು ನಾಲ್ಕೈದು ತಿಂಗಳುಗಳು ತಾನು ಮಹಾನಗರದಲ್ಲಿರಬಾರದೆಂದು ಅವನಿಗನಿಸಹತ್ತಿತು. ತಾನು ಎರಡು ವರುಷ ಸೇವೆ ಸಲ್ಲಿಸುವೆನೆಂದು ಬರೆದುಕೊಟ್ಟಿದ್ದರಿಂದ ಅವನಿಗೆ ಬಿಟ್ಟು ಹೋಗಲು ಬರುವಂತಿದ್ದಿಲ್ಲ. ಮಹಾನಗರದಲ್ಲಿರಬೇಕೆಂದು ಅವನ ಮನಸ್ಸು ಒಪ್ಪಲೊಲ್ಲದು.

ಪ್ರೇಮನಂದಿನಿಯು ಮತ್ತೆ ತಿರುಗಿ ಬಂದು ಪದ್ಮನಾಭನ ಕೋಣೆಯು

ಹತ್ತಿರ ನಿಂತು ' ತಾವು ಕಾಲೇಜಕ್ಕಿಂದು ಹೋಗುವದಿಲ್ಲವೋ " ಎಂದು ಮತ್ತೆ ಕೇಳಿದಳು. "

" ಏಕೆ. "

" ಅಡಿಗೆ ಆರಿ ಹೋಯಿತು. ನೀವು ಊಟಕ್ಕೆ ಏಳುವಂತೆ ಕಾಣುವದಿಲ್ಲ. ಏನು ವಿಚಾರ ಮಾಡುವಿರಿ ? "

" ಏನೂ ಇಲ್ಲ. "

" ತಪ್ಪು ಮಾಡಿದ್ದನ್ನೇ ವಿಚಾರ ಮಾಡುತ್ತ ಕುಳಿತುಕೊಂಡರೆ ಜೀವನದಲ್ಲಿ ಸ್ವಾರಸ್ಯವುಂಟಾಗುವದಿಲ್ಲ. ಇನ್ನೊಮ್ಮೆ ಆ ತಪ್ಪು ಮಾಡಬಾರದೆಂದು ಮನಸ್ಸು ದೃಢಪಡಿಸಬೇಕು. "

" ತಪ್ಪು ಮಾಡಿ ವಿಚಾರ ಮಾಡುತ್ತ ಕುಳಿತಿರುವೆನೆಂದು ನಿನ್ನ ಗ್ರಹಿಕೆಯೇನು ? "

" ನಿಮ್ಮ ಮ್ಲಾನ ಮುಖ, ಶೂನ್ಯ ದೃಷ್ಟಿ, ಕ್ಷಣ ಕ್ಷಣಕ್ಕೆ ಬದಲಾಗುತ್ತಿರುವ ಹಾವಭಾವಗಳು— ಇವೆಲ್ಲವುಗಳು ನಿಮ್ಮ ಮನದ ವಿರೋಧವಾಗಿ ನೀವು ಏನಾದರೊಂದು ಮಾಡಿರಬಹುದೆಂಬ ತರ್ಕ ನಿಮ್ಮನ್ನು ನೋಡುವವರಲ್ಲಿ ಹುಟ್ಟಿಸುವವು. ನಡೆಯುತಕ್ಕವನು ಎಡವತಕ್ಕವನೇ. ಮಾನವನ ಅಸ್ತಿತ್ವ ಅವನ ತಪ್ಪಿನಲ್ಲಿಯೇ. ತಪ್ಪು ತಪ್ಪಲ್ಲೆಂದು ಸಾಧಿಸಿ ಅದನ್ನು ಪುನಃ ಪುನಃ ಮಾಡುವದರಲ್ಲಿಯೇ ದಾನವನ ಅಸ್ತಿತ್ವವಿರುವದು. ತಪ್ಪು ತಪ್ಪಲ್ಲೆಂದು ತಿಳಿದು ಅದು ತನ್ನ ಜೀವನಕ್ಕೊಪ್ಪುವದೆಂಬ ತಿಳುವಳಿಕೆಯಲ್ಲಿ ದಾನವನ ದೊಡ್ಡಸ್ತಿಕೆ ಇರುವದು. ಮಾನವನು ಸಹಜವಾಗಿ ದಾನವನಾಗುವನು " ಎಂದು ಪ್ರೇಮನಂದಿನಿಯು ನುಡಿದಳು.

" ನಿನಗಿಷ್ಟು ವೇದಾಂತ ಗೊತ್ತಿರುವದೆಂದು ನಾನು ತಿಳಿದಿದಿದ್ದಿಲ್ಲ."

"ಇದು ನಾನು ಕಲಿತ ವೇದಾಂತವಲ್ಲ. ಇಲ್ಲಿಯವರೆಗೆ ಬದುಕಿ ಬಾಳಿಗ ಆಯುಷ್ಯದಲ್ಲಿ ಘಟಿಸಿದ ಸಂಗತಿಗಳು ಕಲಿಸಿದ ಜೀವನದ ಸಾರವಿದು. ದೇವ_ದಾನವ-ಮನುಷ್ಯರೆಲ್ಲರನ್ನು ನನ್ನ ಆಯುಷ್ಯದಲ್ಲಿ ಕಂಡಿರುವೆನು. "

" ನಾನೇನು ದೇವನೋ, ರಾಕ್ಷಸನೋ, ಮಾನವನೋ ಎಂಬುದನ್ನು ಹೇಳು ನೋಡುವ. "

" ನೀವು ನನಗೆ ದೇವರು."

" ಅದ್ಹೇಗೆ. "

" ತಾವು ತೋರಿಸಿದ ಕರುಣೆಯೇ ನನಗೆ ದೇವರು. "

ಪ್ರೇಮನಂದಿನಿಯ ಮಾತು ಕೇಳಿ ಪದ್ಮನಾಭನು ಬೆಪ್ಪಾಗಿ ಕುಳಿತನು. ಅವಳು ಜಗತ್ತನ್ನರಿಯುವವಳೆಂಬ ಭಾವನೆ ಅವನದಿತ್ತು. ಲೈಂಗಿಕ ವ್ಯಾಮೋಹದಲ್ಲಿ ಸಿಲುಕಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿರುವಳು; ಲೈಂಗಿಕ ವಿಚಾರದಲ್ಲಿಯೇ ಅವಳ ಬುದ್ಧಿ ಸ್ತಿಮಿತವಿರುವದು;— ಎಂಬೀ ವಿಚಾರಗಳು ಪದ್ಮನಾಭನಲ್ಲಿ ಇಂದು ಮಾಯವಾಗಿ ಹೋದವು.

ಪತಿತೋದ್ಧಾರ ಮಾಡಬೇಕೆಂಬ ಭಾವನೆಯು ಬೆಳಕು ಆತನಲ್ಲಿ ಬೆಳಗಿದ ಕೂಡಲೆ ಅವಳನ್ನು ತನ್ನ ಮನೆಗೆ ಕರೆದುಕೊಂಡು ಬಂದಿದ್ದನು. ಅವಳಾದರೂ ತನಗಿರಲಿಕ್ಕೆ ಆಶ್ರಯ ದೊರೆಯಿತೆಂದು ಆನಂದದಿಂದ ಬಂದಿದ್ದಳು. ಪ್ರೇಮನಂದಿನಿಯನ್ನು ಲೈಂಗಿಕದ ಗೊಂಬೆಯೆಂದು ಪದ್ಮನಾಭನು ತಿಳಿದುಕೊಂಡಿದ್ದನು. ಕರುಣೆಯೆರೆದ ಅನ್ನದಾತನಿಗೆ ತನ್ನ ದೇಹವನ್ನು ಎಡೆಯಾಗಿಟ್ಟಳು. ಕಾಲಕ್ರಮಿಸಿದಂತೆ ಅಡಿಗೆಯವಳಾಗಿ ಮನೆಯ ಯಜಮಾನಿಯಾದಳು. ಪದ್ಮನಾಭನ ಕರುಣೆಯನ್ನೇ ಸ್ಮರಿಸುತ್ತ ಪ್ರೇಮನಂದಿನಿಯು ಹುರುಪಿನಿಂದ ಜೀವನವನ್ನು ಸಾಗಿಸುತ್ತಿದ್ದಳು.

" ಜಗತ್ತಿನಲ್ಲಿಯ ಸ್ತ್ರೀಯರೆಲ್ಲರೂ ವ್ಯಭಿಚಾರಿಗಳೆಂಬ ಭಾವನೆಯಿಂದ ನಿಮ್ಮ ಜೀವನವು ಪ್ರಾರಂಭವಾಗಿರಬಹುದು. ನನ್ನ ಜೀವನದ ಮೊದಲನೇ ಅನುಭವದ ಮೇಲಿಂದ ಪುರುಷರೆಲ್ಲರೂ ಮೋಸಗಾರರೂ, ವಂಚಕರೂ, ವ್ಯಭಿಚಾರಿಗಳೆಂದು ತಿಳಿದುಕೊಂಡಿದ್ದೆ. "

" ಸಾಂಪ್ರತಕ್ಕೆ. "

" ನನ್ನ ಮೊದಲಿನ ಭಾವನೆ ಬಯಲಾಯಿತು. ಪುರುಷರಲ್ಲಿ ಕರುಣಾಳುಗಳು, ಸಹಾಯಕರು, ಹಾಗೂ ಪೋಷಕರಿರುವರೆಂದು ಈಗ ನನಗನಿಸುತ್ತಿರುವದು. ನೀವು ನನ್ನ ಸಹಾಯಕರಲ್ಲವೇ ? ನೀವು ನನ್ನ ಪೋಷಕರಲ್ಲವೇ. "

" ನಿನಗೆ ಸಹಾಯ ನೀಡಿದ್ದು, ನಿನ್ನನ್ನು ಪೋಷಣೆ ಮಾಡಿದ್ದು ನನ್ನ ಸ್ವಾರ್ಥ ದೃಷ್ಟಿಯಿಂದೇಕಿರಬಾರದು. "

"ಮನುಷ್ಯನ ಸ್ವಾರ್ಥವು ಪರಹಿತಕ್ಕಾದರೆ ಅದಕ್ಕೆ ನಾನು ಸ್ವಾರ್ಥ
ವೆಂದು ಕರೆಯುವದಿಲ್ಲ. ನಿಮ್ಮ ಸ್ವಾರ್ಥವೇ ನನ್ನ ಹಿತವು. ಪರರ ಹಿತ
ಕ್ಕಡ್ಡಿಯಾಗುವವೆಲ್ಲವೂ ಸ್ವಾರ್ಥವು. ಪರಹಿತಕ್ಕನುಕೂಲವಾಗುವದೆಲ್ಲವೂ
ಪರಮಾರ್ಥ, ಇದು ನನ್ನ ಭಾವನೆ."

"ನಾನು ಬಾಲವಿಧವೆ. ಲಗ್ನವೆಂಬುವದೇನೂ ಅರಿಯದ ವಯಸ್ಸಿ
ನಲ್ಲಿ ನಾನು ವಿಧವೆಯಾದದ್ದು. ಇಪ್ಪತ್ತನೇ ಶತಮಾನದಲ್ಲಿ ಇಂತಹ
ಬಾಲವಿವಾಹವನ್ನು ಕಂಡು ನಿಮಗಾಶ್ಚರ್ಯವೆನಿಸಬಹುದು. ನಾನು
ವಿಧವೆಯೆಂದು ಯೌವನವು ತನ್ನ ಬರವನ್ನು ಬಿಡಲಿಲ್ಲ. ಯೌವನದ
ಹೊಸ್ತಿಲದಲ್ಲಿ ಕಾಲಿಡುತ್ತಲೇ ತಬ್ಬಲಿಯಾದೆ. ತಮ್ಮ ಪಕ್ಕದಲ್ಲಿಟ್ಟುಕೊಂಡು
ನನ್ನನ್ನು ಸಾಕಿ ಸಲಹುವ ದಾಯಾದಿಗಳಾರೂ ಇದ್ದಿಲ್ಲ. ಗಂಡನ ಮನೆ
ಎಲ್ಲಿರುವದೋ ನನಗೆ ಗೊತ್ತಿಲ್ಲ. ನೆರೆಹೊರೆಯವರ ಎಲ್ಲ ಕೆಲಸಕ್ಕೆ
ನಾನು ಅನುವಾಗುತ್ತಿದ್ದೆ. ಅವರು ಅನ್ನವಿತ್ತರೆ ನನಗೆ ಊಟ, ಇಲ್ಲದಿ
ದ್ದರೆ ಉಪವಾಸ. ಒಬ್ಬ ಮುದುಕಿಯು ಮಾತ್ರ ನಾನು ಹಸಿದು ಬಳಲಿ
ದೆನೆಂದು ನೋಡುತ್ತಿತ್ತು. ನನ್ನ ಖೊಟ್ಟಿ ಹಣೇ ಬರಹಕ್ಕೆ ಆ ಮುದು
ಕಿಯೂ ತೀರಿಕೊಂಡಿತು. ಇರಲು ಕೂಡ ಆಶ್ರಯಸ್ಥಾನ ತಪ್ಪಿತು.
ಹಗಲಿನಲ್ಲಿ ಎಲ್ಲಿಯಾದರೂ ಕೆಲಸ ಮಾಡಿ ಹೊಟ್ಟೆ ಹರಿದುಕೊಂಡು ರಾತ್ರಿ
ಯಲ್ಲಿ ಪರಿಚಯಸ್ಥರ ಬಂಕದಲ್ಲಿ ಮಲಗಿಕೊಂಡು ಕಾಲಹರಣ ಮಾಡು
ತ್ತಿದ್ದೆ. ಜನರು ಮಾತ್ರ ಸುಂದರಿಯೆಂದು ಕರೆಯುತ್ತಿದ್ದರು."

ಎಂದು ಹೇಳುತ್ತ ಪ್ರೇಮನಂದಿನಿಯು ಬಾಗಿಲಹತ್ತಿರ ನಿಂತಿದ್ದಳು.

"ಮುಂಡೆಯಾದ ನನ್ನನ್ನು ಏನೂ ಕೆಲಸವಿಲ್ಲದೆ ಮಾತನಾಡಿಸು
ವದು ತಮ್ಮ ಪುರುಷಾರ್ಥವೆಂದು ಜನಗಳು ತಿಳಿದುಕೊಳ್ಳುತ್ತಿದ್ದರು.
ಯುವಕರು ಯೌವನದ ಸುಂಕಾರ ಮಾಡುತ್ತ ನನ್ನ ಬಳಿ ಸುಳಿಯುತ್ತಿ
ದ್ದರು. ಮಧ್ಯಮ ವಯಸ್ಸಿನವರು ಕಾಮುಕಟಾಕ್ಷವನ್ನು ನನ್ನ ಮೇಲೆ
ಬೀಸುತ್ತ ಬತ್ತಲಾರದ ಕಾಮದ ಝರಿಯೆಂದು ನನ್ನನ್ನು ಕರೆಯುತ್ತ
ನನ್ನ ಮುಂದೆ ಆಡಂಬರದಿಂದ ಸಾಗುತ್ತಿದ್ದರು. ಗೋರಿಯಲ್ಲಿ ಒಂದು
ಕಾಲಿಟ್ಟ ಮುದುಕರೂ ಕೂಡ ನನ್ನನ್ನು ಕಾಮುಕದೃಷ್ಟಿಯಿಂದ ಪರಿಹಾಸ್ಯ
ಮಾಡುವದು ಕಂಡು ಅಳಬೇಕೋ ನಗಬೇಕೋ ಎಂಬುದು ನನಗೆ ತಿಳಿ

ಯುದಾಯಿತು. ಅವರೆಲ್ಲರೂ ನನ್ನ ದೀನಸ್ಥಿತಿಯನ್ನು ಕಂಡು ಮರುಗಿ ನನ್ನನ್ನು ಮಾತನಾಡಿಸುವರೆಂದು ನಾನು ಮೊದಮೊದಲು ತಿಳಿದುಕೊಂಡಿದ್ದೆ. ಬರಬರುತ್ತ ಅವರ ಹಾವಭಾವಗಳು, ಕಾಮುನಪರಿಹಾಸ್ಯ ಮಾತುಗಳು, ಎಡಬಿಡದೆ ಬೆನ್ನತ್ತಿ ಬರುವದು, ಇವೆಲ್ಲವುಗಳು ಅವರ ಮನದಿಂಗಿತವನ್ನು ತೋರಿಸಿಕೊಟ್ಟವು. ಅವರಿಗೆದುರಾಗಿ ನಿಂತು ಉತ್ತರವನ್ನೀಯಬೇಕೆಂದರೆ ನಾನು ಅನಾಥ ವಿಧವೆ; ಅಭಾಗಿನಿ. ನನ್ನ ಜೀವನದ ಪಾಡಿಗೆ ಎಲ್ಲ ಜನರಿಗೆ ಕೈಯೊಡ್ಡಬೇಕಾಗುತ್ತಿತ್ತು. ನನ್ನಂತಹ ದುರ್ದೈವಿಗೆ ಸಮಾಜದಲ್ಲಿ ಎಲ್ಲಿಂದ ಆಶ್ರಯ ದೊರೆಯಬೇಕು ! ಸಿರಿವಂತರಿಗೆ, ಪುಂಡರಿಗೆ, ವಂಚಕರಿಗೆ— ಇವರೆಲ್ಲರಿಗೆ ಸಮಾಜ. ಸಮಾಜ ಘಾತಕರು ಹೆಂಗಸರಲ್ಲ; ಗಂಡಸರು. ಗಂಡಸರು ವ್ಯಭಿಚಾರಿಗಳೋ ಹೆಂಗಸರು ವ್ಯಭಿಚಾರಿಗಳೋ ನೀವೇ ಹೇಳಿರಿ " ಎಂದು ಪ್ರೇಮನಂದಿನಿಯು ಪದ್ಮನಾಭನಿಗೆ ಕೇಳಿದಳು.

" ನನ್ನದೊಂದು ಜಗತ್ತು; ನಿನ್ನದೊಂದು ಜಗತ್ತು. ನನ್ನ ಜೀವನದ ವೀಣೆಗೆ ತಂತಿಗಳೇ ಇರುವದಿಲ್ಲ. ನಿನ್ನ ಜೀವನದ ತಂಬೂರಿಗೆ ತಂತಿಗಳಿದ್ದು ಅವುಗಳನ್ನು ನುಡಿಸಲು ಬೆರಳುಗಳೇ ಇರುವದಿಲ್ಲ. ನಮ್ಮಿಬ್ಬರ ಜೀವನ ರಾಗದಲ್ಲಿ ಹೀಗಾಗಿ ಅಪಸ್ವರ " ಎಂದನು ಪದ್ಮನಾಭ.

" ಒಂದು ಸಲವಂತೂ ಒಬ್ಬನು ತಾನು ಮಿಗಿಲಾದ ಕವಿಯೆಂದು ಜಿಗಿಯುತ್ತ ನನ್ನೆದುರಿಗೆ ಬಂದು,

> ಕಾಮುದೊಡಲಿನ
> ಪ್ರೇಮುಮೂರ್ತಿಯೆ
> ಹೃದಯ ತಾಣವ
> ಮುಂಟು ನನ್ನಯ,

ಎಂದು ಕುಣಿಕುಣಿದು ಹಾಡಹತ್ತಿದನು. ನಮ್ಮದು ಚಿಕ್ಕ ಹಳ್ಳಿ. ಅವನು ಕುಣಿಯುವದನ್ನು ಕಂಡು ಎಲ್ಲರೂ ಮುಗುಮುರಿಯುತ್ತ ಹೋಗುತ್ತಿದ್ದರೇ ಹೊರತು ಅವನ ಅಶ್ಲೀಲತನಕ್ಕೆ ಅವನನ್ನು ಶಿಕ್ಷಿಸಲು ಯಾರೂ ಮುಂಬರಲಿಲ್ಲ. ಆತನು ನನ್ನ ಮಾರ್ಗವನ್ನು ಅಡ್ಡಕಟ್ಟಿಕೊಂಡು ನಿಂತುಬಿಟ್ಟನು. ಸಿಟ್ಟು ನೆತ್ತಿಗೇರಿತು. ಮೈ ಥರಗುಡಹತ್ತಿತು ಬುದ್ಧಿ

ಸ್ವಾಧೀನದಲ್ಲಿ ಉಳಿಯಲಿಲ್ಲ. ರೋಷದಿಂದ ಅವನಿಗೆ ಕಪಾಳ ಮೋಕ್ಷವನ್ನು ಮಾಡಿದೆನು. ಕೆನ್ನೆಗೆ ಬಲವಾದ ಪೆಟ್ಟು ಬಿದ್ದುದರಿಂದ ಆತ ಗಾಬರಿಯಾಗಿ ಕಪಿಯು ಕಪಿಯಾಗಿ ಓಡಹತ್ತಿದನು. ಕೆಳಗೆ ಬಿದ್ದ ಕಲ್ಲುಗಳನ್ನು ತೆಗೆದು ಕೊಂಡು ಬೀಸುತ್ತ ಅವನ ಬೆನ್ನಟ್ಟಿದೆ. ಎಲ್ಲರೂ ನೋಡಿ ಚಪ್ಪಾಳೆ ಹೊಡೆದು ನಗತಕ್ಕವರೇ. ಕೆಲವರಂತೂ ಮೋಜಿನ ಆಟವೆಂದು ಕೇಕೆ ಹಾಕಹತ್ತಿದರು. ಆ ಕಪಿಯು ನಮ್ಮೂರ ಶಾನಭಾಗನ ಮಗನು. ಶಾನಭಾಗ ನಮ್ಮ ಹಳ್ಳಿಯ ಮುಖ್ಯಸ್ಥ; ಎಲ್ಲರೂ ಅವನ ವಿರೋಧ ಕಟ್ಟಿಕೊಳ್ಳಲು ಹೆದರುತ್ತಿದ್ದರು. ಮೇಲಾಗಿ ನಮ್ಮ ಹಳ್ಳಿಯ ಕಾಂಗ್ರೆಸ ಪುಢಾರಿ. ಇದು ನಮ್ಮ ಸಮಾಜ. ”

ಎಂದು ಪ್ರೇಮನಂದಿನಿಯು ಹೇಳಿದಳು.

ಗೇಟಿನ ಹೊರಗೆ ಕಾರು ನಿಂತ ಸಪ್ಪಳವಾಯಿತು. ಪ್ರೇಮನಂದಿನಿಯು ಯಾರು ಬಂದಿರುವರೆಂದು ನೋಡಲು ಹೊರಗೆ ಬಂದಳು. ಕಾರಿನಿಂದಿಳಿಯುತ್ತ ‘ ಇದು ಪ್ರಾಧ್ಯಾಪಕ ಪದ್ಮನಾಭರ ಮನೆಯೋ, ಎಂದು ಕೇಳಿದನೊಬ್ಬನು.

‘ ಹೌದು; ಬನ್ನಿ ಎಂದು ಉತ್ತರವಿತ್ತು ಪ್ರೇಮನಂದಿನಿಯು ಒಳಗೆ ಹೋಗಿ ಪದ್ಮನಾಭನಿಗೆ ಯಾರೋ ಬಂದಿರುವರೆಂದು ಹೇಳಿದಳು. ಕಾರಿನಲ್ಲಿ ತನ್ನ ಭೆಟ್ಟಿಗೆ ಯಾರು ಬಂದಿರಬಹುದೆಂಬ ಕುತೂಹಲದಿಂದ ಆಗಂತುಕನನ್ನು ಬರಮಾಡಿಕೊಳ್ಳಲು ಪದ್ಮನಾಭ ತಮ್ಮ ಮನೆಯ ಗೇಟಿಗೆ ಬಂದನು.

“ ನಮಸ್ಕಾರ, ಬರಬೇಕು” ಎಂದು ಪದ್ಮನಾಭನು ಬರಮಾಡಿಕೊಂಡನು.

“ ಪದ್ಮೂ, ನಮಸ್ಕಾರ. ನನ್ನ ಪರಿಚಯ ಸಿಗಲಿಲ್ಲವೋ. ”

ಆತನ ಮೊಗವನ್ನು ಮಿಕಿಮಿಕಿ ನೋಡುತ್ತ ಪದ್ಮನಾಭನು ನಿಂತನು. ದನಿಯನ್ನು ಜೀವನದಲ್ಲಿ ಎಲ್ಲಿಯೋ ಕೇಳಿದ ಹಾಗೆ ಅನಿಸಹತ್ತಿತು. ಯಾರಿರಬಹುದೆಂದು ಆತನಿಗೆ ಹೊಳೆಯಲಿಲ್ಲ.

“ ದಯಮಾಡಿ ಕ್ಷಮಿಸಬೇಕು. ದನಿಯ ಪರಿಚಯವೇನೋ ಹತ್ತುವದು. ಆದರೆ ಯಾರೆಂಬುವದು ನನ್ನ ಸ್ಮರಣೆಗೆ ಬರಲೊಲ್ಲದು. ”

“ ವಿಜ್ಞಾನಿಗಳು ಜನರ ಪರಿಚಯವನ್ನೇ ಮರೆಯುವರು. ನಿನ್ನ

ಬಾಲ್ಯದ ಸ್ನೇಹಿತ ಪ್ರಮಥ. ”

ಪ್ರಮಥವೆಂಬ ಶಬ್ದ ಕೇಳಿದ ಕೂಡಲೇ ಆತನನ್ನು ಬಿಗಿಯಾಗಿ ಅಪ್ಪಿ ಕೊಂಡು ‘ ಪ್ರಮಥಾ; ನಿನ್ನನ್ನು ನೋಡದೆ ಬಹಳ ವರುಷಗಳಾದವು. ನಿನ್ನಲ್ಲಿಯ ಬದಲಾವಣೆಯನ್ನು ಕಂಡು ಪರಿಚಯ ಸಿಗದೆ ದಂಗು ಬಡಿದು ನಿಂತೆ’ ನೆಂದು ನುಡಿಯುತ್ತ ಆತನನ್ನು ತನ್ನ ಕೋಣೆಗೆ ಕರೆದುಕೊಂಡು ಹೋದನು.

ಪ್ರಮಥನು ಪದ್ಮನಾಭನ ಲಂಗೋಟಿಯ ಗೆಳೆಯನು. ಈರ್ವರೂ ಕೂಡಿ ಆಡಿದವರು; ಕೂಡಿ ಕಲಿತವರು. ಪ್ರಮಥನು ಬಾಲ್ಯದಿಂದಲೂ ರೋಗಿಗಳ ಆರೈಕೆಯಲ್ಲಿಯೂ; ಕ್ಷೇಮದಲ್ಲಿಯೂ ಆಸ್ಥೆಯುಳ್ಳವನು. ಡಾಕ್ಟರನಾಗಿ ರೋಗಿಗಳ ಸೇವೆ ಮಾಡಬೇಕೆಂದು ಆತನಿಗೆ ಚಿಕ್ಕ ವಯಸ್ಸಿನಲ್ಲಿಯೇ ಹಂಬಲವುಂಟಾಗಿತ್ತು. ಆತನ ತಂದೆ ತಾಯಿಗಳಾದರೂ ಆತನ ಹಂಬಲಕ್ಕೆ ಪುಟ ಕೊಟ್ಟು ಆತನನ್ನು ಡಾಕ್ಟರರನ್ನಾಗಿ ಮಾಡಿದರು. ಸರಕಾರೀ ನವಕರಿಯ ಬೆನ್ನು ಹತ್ತದೆ, ದುಡ್ಡಿನ ವ್ಯಾಮೋಹಕ್ಕೆ ಬಲಿ ಬೀಳದೆ ರೋಗಿಯ ಸೇವೆಯೇ ಈಶಸೇವೆ ಎಂದು ಗುರಿಯನ್ನಾಗಿಟ್ಟು ಕೊಂಡು ಧನ್ವಂತರಿ ಧಾಮದಲ್ಲಿ ಡಾಕ್ಟರನಾಗಿದ್ದನು. ಶಸ್ತ್ರಕ್ರಿಯೆಯಲ್ಲಿ ಆವನು ನಾಮಾಂಕಿತ; ರೋಗ ಚಿಕಿತ್ಸೆಯಲ್ಲಿಯಾದರೂ ಆತನು ನಿಷ್ಣಾತ, ಆದುದರಿಂದ ಧನ್ವಂತರಿ ಧಾಮಕ್ಕೆ ಭಾರತದ ಮೂಲೆ ಮೂಲೆಗಳಿಂದ ಆತನ ಹೆಸರು ಕೇಳುತ್ತ ರೋಗಿಗಳು ರೋಗನಿವಾರಣೆಗಾಗಿ ಧಾವಿಸುತ್ತಿದ್ದರು. ಪದ್ಮನಾಭನು ಎಷ್ಟೋ ಜನಗಳಿಂದ ಪ್ರಮಥನ ಗುಣಗಾನವನ್ನು ಕೇಳಿದ್ದ; ಸಂತೋಷ ಪಟ್ಟಿದ್ದ. ಅವರೀರ್ವರ ಜೀವನದ ಪ್ರವಾಹವು ಭಿನ್ನ ಭಿನ್ನ ದಿಶೆಗಳಲ್ಲಿ ಹರಿಯುತ್ತಿದ್ದರಿಂದ ಒಬ್ಬರೊಬ್ಬರನ್ನು ಭೆಟ್ಟಿಯಾಗದೆ ಎಷ್ಟೋ ವರುಷಗಳು ಸಂದಿ ಹೋಗಿದ್ದವು. ನೆನಪು ಕೂಡ ಅಳಿಸಿ ಹೋಗಿದ್ದರೂ ಹೋಗಿರಬಹುದು.

ಅಖಿಲ ಭಾರತೀಯ ವೈದ್ಯ ಸಂಸ್ಥೆಯವರು ಮಹಾನಗರದಲ್ಲಿದ್ದ ಮೆಡಿಕಲ ಕಾಲೇಜವನ್ನು ಸಂದರ್ಶಿಸಿ ಅಲ್ಲಿಯ ಪದವೀಧರರಿಗೆ ಅಖಿಲ ಭಾರತೀಯ ಮನ್ನಣೆಯನ್ನೀಯಬೇಕೋ ಬೇಡವೋ ಎಂಬುದನ್ನು ಕೂಲಂಕಶವಾಗಿ ವಿಮರ್ಶಿಸಿ ವರದಿಯನ್ನೊಪ್ಪಿಸಲು ಒಂದು ಸಮಿತಿಯನ್ನು ನೇಮಿಸಿದ್ದರು. ಆ ಸಮಿತಿಯಲ್ಲೋರ್ವ ಸದಸ್ಯನು ಪ್ರಮಥನು. ಸಂದರ್ಶನದ

ಕಾಲಕ್ಕೆ ಪದ್ಮನಾಭನು ಮಹಾನಗರದಲ್ಲಿಯೇ ಪ್ರಾಧ್ಯಾಪಕನಿರುವನೆಂದು ಹರಟೆಯಲ್ಲಿ ಯಾರೋ ಹೇಳಿದರು. ಅದನ್ನು ಕೇಳಿ ತನ್ನ ಬಾಲ್ಯದ ಗೆಳೆಯನನ್ನು ಭೆಟ್ಟಿಯಾಗಿ ಹೋಗಬೇಕೆಂದು ಪ್ರಯತ್ನಪಟ್ಟು ಪದ್ಮನಾಭನ ವಿಳಾಸವನ್ನು ತರಿಸಿಕೊಂಡು ತಾನೊಂದು ದಿನ ಉಳಿದು ಮರುದಿನ ಬರುವೆನೆಂದು ತನ್ನೊಳಿದ ಸದಸ್ಯರಿಗೆ ಹೇಳಿ ಸದ್ಮನಾಭನಿಗೆ ಭೆಟ್ಟಿಯಾಗಲು ಬಂದಿದ್ದನು.

ಜುಗುಲಕಿಶೋರಿ ಆಸ್ಪತ್ರೆಯಲ್ಲಿಯ ಅಧಿಕಾರಿಗಳು ತಮ್ಮ ಆಸ್ಪತ್ರೆಯನ್ನು ನೋಡಿಕೊಂಡು ಹೋಗಬೇಕೆಂದು ಒತ್ತಾಯಪಡಿಸಿದ್ದರಿಂದ ಪ್ರಮಥನಾದರೂ ನೋಡಿಕೊಂಡು ಹೋಗುವದು ತನ್ನ ಕರ್ತವ್ಯವೆಂದೇ ಭಾವಿಸಿ ಆಸ್ಪತ್ರೆಯನ್ನು ನೋಡಲು ಹೋಗಿದ್ದನು. ಆತ ಸಂದರ್ಶನಪಿತ್ತ ರೋಗಿಗಳೆಲ್ಲರೂ ವೇದವತಿಯನ್ನು ತುಂಬಾ ಹೊಗಳುವದನ್ನು ಕಂಡು ಬೆಪ್ಪಾಗಿ ನಿಂತನು. ರೋಗಿಗಳೆಲ್ಲರೂ ಅವಳಿಗೆ ' ಮಾ-ತಾಯಿ ' ಎಂದು ಕರೆಯುತ್ತಿದ್ದರು. ಆಸ್ಪತ್ರೆಯನ್ನು ನೋಡುತ್ತ ನೋಡುತ್ತ ವೇದವತಿಯು ಕುಳಿತುಕೊಳ್ಳುತ್ತಿದ್ದ ಕೋಣೆಯ ಬಾಗಿಲದ್ವಸಮೀಪದಲ್ಲಿ ಆತನು ಹೋಗುತ್ತಿದ್ದುದನ್ನು ಕಂಡು ಅಧಿಕಾರಿಗಳ ಹಿಂದಿದ್ದ ರಂಜನಿಯು ಮುಂದೋಡಿ ಬಂದು ಪ್ರಮಥನನ್ನು ಕೋಣೆಯಲ್ಲಿ ಕರೆದುಕೊಂಡು ಹೋದಳು. ಬಾಗಿಲಿನೆದುರಿಗಿನ ಗೋಡೆಯ ಮೇಲೆ ತೂಗು ಹಾಕಿದ್ದ ವೇದವತಿಯ ತೈಲಚಿತ್ರದ ಕಡೆಗೆ ಕೋಣೆಯಲ್ಲಿ ಕಾಲಿಡುತ್ತಲೆ ಪ್ರಮಥನ ದೃಷ್ಟಿಯು ಹರಿಯಿತು. ಆ ತೈಲಚಿತ್ರವನ್ನು ಹರಿದು ನುಂಗುವಂತೆ ಆತ ನೆಟ್ಟ ದೃಷ್ಟಿಯಿಂದ ನೋಡಹತ್ತಿದ. ರೋಗಿಗಳಿಂದ ಮಾ–ತಾಯಿಯೆಂದು ಕರೆಯಲ್ಪಡುತ್ತಿದ್ದವಳು ಈ ತೈಲ ಚಿತ್ರದಲ್ಲಿದ್ದವಳೇ ಅವಳೆಂದು ರಂಜನಿಯು ಪ್ರಮಥನಿಗೆ ಹೇಳಿದಳು. ಇವರು ಸುಮಾರು ಹದಿನೈದು ಇಪ್ಪತ್ತು ವರುಷಗಳ ಹಿಂದೆ ತಮ್ಮ ಧಾಮದಲ್ಲಿದ್ದಳೆಂದು ನನಗನಿಸುವದೆಂದು ಆತ ನುಡಿದನು.

"ಈ ಆಸ್ಪತ್ರೆಯಲ್ಲಿ ಅವಳು ದುಡಿಯಹತ್ತಿ ಬಹಳೇ ವರುಷಗಳಾದವು. ಅವಳು ಕೆಲವು ದಿನಗಳ ಹಿಂದೆ ಕಾಲು ಜಾರಿ ಬಿದ್ದು ಪೆಟ್ಟು ತಗಲಿ ಮೃತಪಟ್ಟಳೆಂದು" ರಂಜನಿಯು ಹೇಳಿದಳು.

ನಮ್ಮಲ್ಲಿದ್ದವಳೇ ಆದರೆ ಅವಳು ಬಡವರ ಕಾಮಧೇನುವೆಂದು ಉಸುರಿ

ಪ್ರಮಥನು ಹೊರಗೆ ಬಂದನು. ಅಲ್ಲಿಂದ ನೇರವಾಗಿ ಪದ್ಮನಾಭನನ್ನು ಕಾಣಲು ಅವನ ಮನೆಗೆ ಬಂದಿದ್ದನು.

"ನನ್ನ ಬಾಲ್ಯದ ಗೆಳೆಯನು ಬಂದು ಕಪಿಲಾಷಷ್ಟಿಯ ಯೋಗ ಮಾಡಿರುವನು. ಚಹ ತೆಗೆದುಕೊಂಡು ಬರುವಿಯಾ?" ಎಂದು ಕೋಣೆಯೊಳಗಿಂದಲೇ ಪ್ರೇಮನಂದಿನಿಗೆ ಕೇಳುವಂತೆ ಪದ್ಮನಾಭನು ಹೇಳಿದನು.

ಅವರೀರ್ವರು ತಮ್ಮ ಸುಖದುಃಖಗಳನ್ನು ಮಾತನಾಡುತ್ತ ಕುಳಿತುಕೊಂಡರು. ಆಯುಷ್ಯದಲ್ಲಿ ತನ್ನ ಜೀವನವು ಅಸ್ವಾರಸ್ಯಮಯವಾದದ್ದನ್ನು ತನ್ನ ಗೆಳೆಯನ ಮುಂದೆ ಅರುಹಬೇಕೆಂದು ಹರಿಯುತ್ತಿತ್ತು ಮನಸ್ಸು. ಆದರೆ ತನ್ನ ದುಃಖವನ್ನು ಅವನೆದುರಿಗೆ ತೋಡಿಕೊಂಡು ಭೆಟ್ಟಿಗೆ ಬಂದ ಗೆಳೆಯನ ಮನಸ್ಸನ್ನೇಕೆ ಕಹಿ ಮಾಡಬೇಕೆಂದು ಬಿಗಿ ಹಿಡಿದನು.

"ಪ್ರಮಥ, ಮನುಷ್ಯನ ಆಯುಷ್ಯ ಸುಸೂತ್ರವಾಗಿ ಮರಣದವರೆಗೆ ಸಾಗಬೇಕಾದರೆ ಬಹಳ ಕಠಿಣವೆಂದು ನನಗನಿಸುವದು."

"ಅದು ನಮ್ಮ ಮನಸ್ಸಿನ ಮೇಲಿರುವದು. ಆಯುಷ್ಯವನ್ನು ದುಃಖಮಯ ಮಾಡಿಕೊಳ್ಳುವದು ಮನುಷ್ಯನು ತನ್ನ ಕೃತಿಗಳಿಂದ. ಅವಿಚಾರಕ್ಕೆ, ಕ್ರೋಧಕ್ಕೆ, ಆಶೆಗಳ ಮೋಹಕ್ಕೆ ಬಲಿಬಿದ್ದು ಮಾಡುವ ಕೃತಿಗಳಿಂದ ತನ್ನ ಆಯುಷ್ಯದ ಹದಕೆಡಿಸಿಕೊಳ್ಳುವನು. ದುಃಖ ಯಾರಿಗೂ ತಪ್ಪಿದ್ದಲ್ಲ; ಪ್ರಾರಬ್ಧದಿಂದ ಬರುವ ದುಃಖ ಅಲ್ಪಪ್ರಮಾಣ; ನಮ್ಮ ಅವಿವೇಕ ಕೃತಿಗಳಿಂದಲೇ ಹೆಚ್ಚಾಗಿ ದುಃಖವನ್ನು ನಮ್ಮ ಮೇಲೆ ತಂದುಕೊಳ್ಳುವೆವು."

"ಅವಿವೇಕ ಕೃತಿಗಳನ್ನು ಮಾಡಲಿಕ್ಕೆ ಹಚ್ಚುವದು ಆತನ ಪ್ರಾರಬ್ಧ ಕರ್ಮ. ಕರ್ಮಕ್ಕೆ ಕೊನೆಯಿಲ್ಲ. ಧರ್ಮಕ್ಕೆ ನೆಲೆಯಿಲ್ಲ" ಎಂದು ಉಸಿರುಗರೆದು ಪದ್ಮನಾಭನು ಮಾತನಾಡಿದನು.

"ನಮ್ಮ ಆಯುಷ್ಯ ಮಾರ್ಪಾಟುಮಾಡುವದು ನಮ್ಮ ಕೈಯಲ್ಲಿಲ್ಲವೇ."

"ಅದು ಗೊತ್ತಿಲ್ಲ ನನಗೆ. ಯಾರಾದರೂ ಸಂಕಟದಲ್ಲಿ ಬಿದ್ದಾಗ ಇಲ್ಲವೆ ವಿಪತ್ತಿಗೆ ತುತ್ತಾದಾಗ ದುಃಖವನ್ನು ಅನುಭೋಗಿಸುತ್ತಿದ್ದರೆ ಅದು ಅವರ ಕರ್ಮವೆಂದು ನುಡಿಯುವದನ್ನು ಕೇಳಿರುವೆನು ಹಾಗೂ ಓದಿರುವೆನು"

"ಓದುವದು ಕೇಳುವದಕ್ಕಿಂತ ಅನುಭವವು ನೆಟ್ಟಗಲ್ಲವೇ."

" ಜೀವನದಲ್ಲಿ ನನಗಾದ ಅನುಭವ ನಿನಗಾಗಿರಲಿಕ್ಕಿಲ್ಲ. ನಿನ್ನ ಜೀವನ ದಲ್ಲಿ ಬಂದ ಅನುಭವ ನನಗೆ ಬಂದಿರಲಿಕ್ಕಿಲ್ಲ. ಪ್ರಕೃತಿಗಳು ಭಿನ್ನವಾದಂತೆ ಅನುಭವಗಳು ಭಿನ್ನವಾಗುವದಿಲ್ಲವೇ " ಎಂದು ಪದ್ಮನಾಭನು ಕೇಳಿದನು.

" ಅನುಭವಗಳು ಭಿನ್ನವಾಗುವವೆಂದು ತಿಳಿದುಕೊಳ್ಳುವೆವು. ಅನು ಭವಗಳು ಭಿನ್ನವೆಂದು ಭಾಸವಾದರೂ ನಿಜವಾಗಿ ಎಲ್ಲ ಅನುಭವಗಳ ರೂಪ ರೇಷೆ, ಸತ್ವಗಳೆಲ್ಲವೂ ಒಂದೇ. ಭಿನ್ನ ಭಿನ್ನ ವಸ್ತುಗಳಿಂದ ಮನಸ್ಸಿನ ಮೇಲೆ ಆಗುವ ಎಲ್ಲ ಪರಿಣಾಮುಗಳು ಒಂದೇ ಭಾವವನ್ನು ಹುಟ್ಟಿಸುತ್ತಿದ್ದರೆ ಅನು ಭವವು ಒಂದೇ ಆಗುವದಿಲ್ಲವೋ. ಒಬ್ಬನಿಗೆ ಸಿಂಹವನ್ನು ನೋಡಿ ಆಗುವ ಭಯುವೂ ಮತ್ತೊಬ್ಬನಿಗೆ ಸರ್ಪವನ್ನು ನೋಡಿ ಬರುವ ಭಯುವೂ ಮುಗ ದೊಬ್ಬನಿಗೆ ಪುಂಡರ ಕೈಯಲ್ಲಿ ಸಿಕ್ಕು ಹೊಡೆತವನ್ನು ತಿನ್ನುವದಕ್ಕಾಗುವ ಭಯುವೂ— ಎಲ್ಲವೂ ಒಂದೇ ಅಲ್ಲವೇ. "

ಎಂದು ಪ್ರಮಥನು ನುಡಿಯುತ್ತ ಪದ್ಮನಾಭನ ಮೊಗವನ್ನು ನೋಡಿ

" ಪದ್ಮಾ, ನೀನು ಬಹಳೇ ಸೋತಿರುವಿ. ನಿನ್ನಲ್ಲಿಯ ಉತ್ಸಾಹ ಬತ್ತಿ ಹೋಗಿರುವದು. ಮೈಬಣ್ಣ ಸುಟ್ಟು ಕಪ್ಪಾಗಿರುವದು. ನಿನ್ನ ಜೀವನದಲ್ಲಿ ಘಟಿಸಿದ ಅಂತಹ ಘಟನೆಗಳಾದರೂ ಏನು. "

ಎಂದು ಕೇಳಿದನು.

" ನನ್ನ ಆಯುಷ್ಯ ಒಂದು ರಾಮಾಯಣವೇ ಇರುವದು. ನನ್ನ ಮನದ ಲಂಕೆಯಲ್ಲಿ ರಾಮಾಯಣ ಕಾಲದ ಎಲ್ಲ ಅಸುರರು ಜನಿಸಿ ನನ್ನ ವೃತ್ತಿಯಲ್ಲಿ ನಲಿದಾಡುತ್ತಿರುವರು " ಎಂದು ಉಸಿರು ಬಿಡುತ್ತ ಪದ್ಮನಾ ಭನು ನುಡಿದನು.

" ನಿನಗೆ ಮಕ್ಕಳಿಲ್ಲವೇ ? ಹೆಂಡತಿಯಿಲ್ಲವೇ ? ಮರ್ಯಾದೆಯಿಲ್ಲವೇ ಹಣವಿಲ್ಲವೇ ? ಏನಿಲ್ಲ ನಿನಗೆ ? ಇಷ್ಟು ನಿರುತ್ಸಾಹನಾಗಿ ಮಾತನಾಡಲಿಕ್ಕೆ "

" ಎಲ್ಲವೂ ಇರುವವು; ಎಲ್ಲವೂ ಇರುವದಿಲ್ಲ. "

" ನಿನ್ನ ಲಗ್ನವಾಗಲಿಲ್ಲವೇ ? ಲಗ್ನವಾಗಿದ್ದರೆ ಹೆಂಡತಿಯು ನಿನ್ನನ್ನು ಬಿಟ್ಟು ಹೋಗಿರುವಳೋ ? ಮರ್ಯಾದೆ ಕಳೆದುಕೊಳ್ಳುವಂತಹ ಏನಾ ದರೂ ವಿಘಾತಕ ಕೃತಿಗಳನ್ನು ಮಾಡಿರುವಿಯೋ; ಹಣವನ್ನು ಎಲ್ಲಿಯಾ ದರೂ ಕಳೆದುಕೊಂಡಿರುವಿಯೋ. "

ಪ್ರಮಥನ ಮಾತು ಕೇಳಿ ವಿಚಾರಹೀನನಾಗಿ ದಿಕ್ಕುತೋಚದೆ ಗೆಳೆಯು ನನ್ನು ಎವೆಯಿಕ್ಕದೆ ನೋಡುತ್ತ ಕುಳಿತುಕೊಂಡನು. ದುಃಖಾನ್ವಿತನಾದ ಅವನ ಕಣ್ಣೊಳೊಳಗಿಂದೆರಡು ಕಂಬನಿಗಳುದುರಿರವು.

ಪ್ರೇಮನಂದಿನಿಯು ಕೋಣೆಯ ಬಾಗಿಲ ಮರೆಯಾಚೆಯಲ್ಲಿ ನಿಂತು ಮೆಲ್ಲಗೆ 'ಚಹ' ವಾಗಿರುವದೆಂದು ನುಡಿದಳು. ಅವಳ ದನಿಯನ್ನು ಕೇಳಿ ಉದರಿದೆರಡು ಹನಿಗಳನ್ನು ಅಲ್ಲಿಯೇ ಒರಿಸಿಕೊಂಡು ' ಕೋಣೆಯಲ್ಲಿ ಮತ್ತಾರೂ ಇಲ್ಲ; ಈತ ನನ್ನ ಬಾಲ್ಯದ ಗೆಳೆಯ'ನೆಂದು ಪದ್ಮನಾಭನು ನುಡಿದನು. 'ತರುವೆ' ಎಂದು ನುಡಿದು ಪ್ರೇಮನಂದಿನಿಯು ಅಡಿಗೆಯ ಮನೆಗೆ ಹೋಗಿ ಒಂದು ಬೆಳ್ಳಿಯ ತಟ್ಟೆಯಲ್ಲಿ ಉಪ್ಪಿಟ್ಟು.ಹಣ್ಣನಫಲಕಗಳು ಹಾಗೂ ಚಹವನ್ನಿಟ್ಟುಕೊಂಡು ಮೆಲ್ಲಗೆ ಕೋಣೆಯೊಳಗೆ ಬಂದಳು. ಕೇಶಕಲಾಪಗಳಲ್ಲಿಯ ಕೂದಲುಗಳು ಆಗೊಮ್ಮೆ ಈಗೊಮ್ಮೆ ಗಾಳಿಯಿಂದ ಸುಳಿಯುತ್ತಿದ್ದವು. ವಿಶಾಲ ಲಲಾಟದ ಮೇಲೆ ಕುಂಕುಮದ ಬೊಟ್ಟು ಇಲ್ಲದಿರುವದನ್ನು ನೋಡಿ ಪ್ರಮಥನು ಗೆಳೆಯ ಪದ್ಮನಾಭನಿಗೆ ಏನೋ ಕೇಳಬೇಕೆಂದು ಮಾಡಿದವನು ಏನೂ ತೋಚದೆ ಸುಮ್ಮನೆ ತಲೆತಗ್ಗಿಸಿಕೊಂಡು ಕುಳಿತನು.

ಪ್ರೇಮನಂದಿನಿಯು ಅವರೆದುರಿಗಿರುವ ಸಣ್ಣ ಮೇಜಿನ ಮೇಲೆ ತಂದ ಪದಾರ್ಥಗಳನ್ನು ಈರ್ವರಿಗೂ ಬೇರೆ ಬೇರೆಯಾಗಿಟ್ಟು, ತಿರುಗಿ ಹೊರಗೆ ಬಂದಳು. ಅವಳು ತಿರುಗಿ ಹೋದದ್ದನ್ನು ಕಂಡು ' ಪದ್ಮಾ ಇವಳಾರು? ಹೆಂಡತಿಯೇನೆಂದು ಕೇಳಬೇಕೆಂದರೆ ಹಣೆಯ ಮೇಲೆ ಕುಂಕುಮದ ಬೊಟ್ಟಿಲ್ಲ; ಮಗಳೇನೆಂದು ಅರಿಯಬೇಕಾದರೆ ವಯಸ್ಸಿನಿಂದ ಬಹಳೇ ದೊಡ್ಡವಳು; ' ಪ್ರಮಥನು ಕೇಳಿದನು.

ಅವನ ಮಾತುಗಳನ್ನು ಪ್ರೇಮನಂದಿನಿಯು ಹೊರಗಿನಿಂದಲೇ ಕೇಳಿದಳು.

" ಅವಳು ಅಡಿಗೆಯವಳು. "

" ನಿನ್ನ ಮನೆಯವರೆಲ್ಲಿ. "

" ನನ್ನ ಮನೆಯವಳು ಎಂದೋ ಸತ್ತುಹೋಗಿರುವಳು. "

" ಲಗ್ನವಾದದ್ದು ಕೇಳಿದ್ದೆ ನಾನು; ಸತ್ತದ್ದು ಕೇಳಿಲ್ಲ. ಹಡೆಯದೆ ಸತ್ತಳೋ. "

" ಲಗ್ನವಾದ ಮೂರು ವರುಷಗಳಲ್ಲಿಯೇ ಮರಣ ಹೊಂದಿದಳು.

" ಚಿಕ್ಕ ವಯಸ್ಸಿನಲ್ಲಿ ಹೆಂಡತಿಯನ್ನು ಕಳೆದುಕೊಂಡದ್ದರಿಂದ ಇನ್ನೊಂದು ಲಗ್ನ ಮಾಡಿಕೊಳ್ಳಬೇಕಾಗಿತ್ತು. "

" ಅದೂ ಮಾಡಿಕೊಂಡದ್ದಾಯಿತು."

" ಆದರೆ ಅವಳೆಲ್ಲಿ "

" ಅವಳೂ ಸತ್ತು ಹೋದಳು. "

" ಜೀವನದಲ್ಲಿ ನಿನಗೆ ದುಃಖ ಬಹಳವಾಗಿರುವದು. "

" ಇದು ನನ್ನ ಕರ್ಮದ ಫಲವಲ್ಲವೇ. "

" ನಿನ್ನಂತಹ ಧರ್ಮಿಗೆ ಇಂತಹದು ಬರಬಾರದಾಗಿತ್ತು. "

" ನಾನು ಧರ್ಮಿಯೋ ಅಧರ್ಮಿಯೋ ಎಂಬುದು ಯಾರಿಗೂ ಹೇಳಲು ಬರುವದಿಲ್ಲ. "

" ದೇವರಿಗಾದರೂ ಬರುವದಿಲ್ಲವೋ. "

" ದೇವರಿಗೆ ಧರ್ಮಾಧರ್ಮಗಳೇ ಗೊತ್ತಿರುವದಿಲ್ಲ. ಅಂದಮೇಲೆ ಆತನು ಹೇಳುವ ಬಗೆ ಹೇಗೆ ? "

" ನಿನ್ನ ದೃಷ್ಟಿಯಿಂದ ದೇವರಿಗೆ ಗೊತ್ತಿರಲಿಕ್ಕಿಲ್ಲ. "

" ನನ್ನ ದೃಷ್ಟಿಯಿಂದೇಕೆ ? ಎಲ್ಲರ ದೃಷ್ಟಿಯಲ್ಲಿಯೂ ಹೀಗೆ. "

ಬಾಗಿಲದ ಹೊರಗಿನ ಮರೆಯಾಚೆಯಲ್ಲ ಮಾತು ಕೇಳುತ್ತ ನಿಂತಿದ್ದ ಪ್ರೇಮನಂದಿನಿಯು ತುಸು ಮುಂದಕ್ಕೆ ಬಂದು 'ಚಹ' ಆರಿ ಹೋಗುವದು ತೆಗೆದುಕೊಂಡು ಹೋಗಿ ಹಿಂದುಗಡೆ ತರುವೆನೆಂದು ನುಡಿದಳು.

" ಬೇಡಮ್ಮಾ ತೆಗೆದುಕೊಳ್ಳುವೆವು " ಎಂದ ಪ್ರಮಥ.

" ಆರಿ ಹೋಗಿದೆ; ತೆಗೆದುಕೊಂಡು ಹೋಗು "

ಪದ್ಮನಾಭನ ಮಾತು ಕೇಳುತ್ತಲೆ ಪ್ರೇಮನಂದಿನಿಯು ಮೆಲ್ಲಗೆ ಕೋಣೆಯನ್ನು ಪ್ರವೇಶಿಸಿದಳು. ಪ್ರಮಥನು ತಿನ್ನುವವನ್ನು ಬಿಟ್ಟು ಅವಳನ್ನು ಮತ್ತೊಮ್ಮೆ ನೋಡಿದನು.

" ಬೇಡಮ್ಮ; ನನಗೆ ಆರಿದ್ದು ನಡೆಯುವದು. "

ಅವಳು ನಿರುಪಾಯಳಾಗಿ ಹಿಂತಿರುಗಿದಳು. ಅವಳ ಕಂದಿದ ಮೊಗವನ್ನು ನೋಡಿ ಅವಳನ್ನು ತನ್ನ ಜೀವನದಲ್ಲಿ ಎಲ್ಲಿಯೋ ಬಹಳ ವರುಷಗಳ

ಹಿಂದೆ ನೋಡಿದಂತೆ ಪ್ರಮಥನಿಗೆ ಭಾಸವಾಗಹತ್ತಿತು. ಅದು ಆತನಿಗೆ ಎಲ್ಲಿಂಬುವದು ಸ್ಪಷ್ಟವಾಗಿ ಹೊಳೆಯಲಿಲ್ಲ. ಅವಳಲ್ಲಿರುವ ಜೀವನ ಶಕ್ತಿ ಆತನನ್ನು ಕೃತಜ್ಞತೆಯಿಂದ ನೋಡುತ್ತಿರುವಂತೆ ಆತನಿಗೆ ಅನಿಸಹತ್ತಿತು.

"ಪ್ರಮಥ, ಮಾತನಾಡುತ್ತ ಮಾತನಾಡುತ್ತ ಏನೋ ಒಂದು ವಿಚಾರ ಮಾಡುತ್ತಿರುವಂತೆ ಕಾಣುವೆಯಲ್ಲ."

"ನನ್ನದೇನೂ ವಿಚಾರವಿಲ್ಲ. ನಾನು ನಿಮ್ಮಲ್ಲಿಗೆ ಬರುವ ಮುಂದೆ ಜುಗುಲು ಕಿಶೋರಿ ಆಸ್ಪತ್ರೆಯನ್ನು ನೋಡಿಕೊಂಡು ಹೋಗಬೇಕೆಂದು ಅಧಿಕಾರಿಗಳು ಒತ್ತಾಯ ಮಾಡಿದ್ದರಿಂದ ನಾನು ಸಂದರ್ಶಿಸಿ ಬರುವಾಗ್ಗೆ ಆ ಆಸ್ಪತ್ರೆಯ ಒಂದು ಕೋಣೆಯಲ್ಲಿ ವೇದವತಿಯೆಂಬವಳ ತೈಲಚಿತ್ರವನ್ನು ನೋಡಿದೆ. ಆ ಚಿತ್ರದಲ್ಲಿಯ ಮೂರ್ತಿ ತನ್ನ ಸ್ಮೃತಿ ಪಥದಲ್ಲಿ ಮೇಲಿಂದ ಮೇಲೆ ಬರುತ್ತಿರುವದು. ನಮ್ಮ ಧನ್ವಂತರಿ ಧಾಮದಲ್ಲಿ ಇವಳ ಹಾಗೆಯೇ ಒಬ್ಬ ದಾಯಿಯಿದ್ದಳು. ನಾನು ಧಾಮವನ್ನು ಸೇರುವದಕ್ಕಿಂತ ಒಂದೆರಡು ವರುಷ ಮೊದಲು ಆ ದಾಯಿಯು ಅಲ್ಲಿ ಸೇರಿದ್ದಳಂತೆ. ಅಲ್ಲಿ ನಾನು ಡಾಕ್ಟರನಾದ ಮೂರು ತಿಂಗಳಲ್ಲಿಯೇ ಅವಳು ನಮ್ಮ ಧನ್ವಂತರಿ ಧಾಮವನ್ನು ಬಿಟ್ಟು ಹೋದಳು. ನಮ್ಮಲ್ಲಿಯ ರೋಗಿಗಳೆಲ್ಲರು ಅವಳಿಗೆ ರೋಗಿಗಳ ಕಾಮಧೇನು ಎಂದು ಕರೆಯುತ್ತಿದ್ದರು. ನಾನಿನ್ನು ಚಿಕ್ಕವನು. ಜಗತ್ತಿನ ಅನುಭವ ಕಡಿಮೆ. ವೈದ್ಯಶಾಸ್ತ್ರದ ಗಂಧವನ್ನರಿಯದ ಅವಳಿಗೆ ಕಾಮಧೇನು ಎಂದು ಕರೆಯುವದನ್ನು ಕಂಡು ಮುಂಬೈ ವಿಶ್ವವಿದ್ಯಾಲಯದ ವೈದ್ಯಶಾಸ್ತ್ರದಲ್ಲಿಯೂ, ಶಸ್ತ್ರಕ್ರಿಯೆಯಲ್ಲಿಯೂ ಪ್ರಥಮ ಶ್ರೇಣಿ ಪಾಸಾಗಿರುವೆನೆಂಬ ಹೆಮ್ಮೆಯಿದ್ದ ನನಗೆ ಸಹಸವಾಗಲಿಲ್ಲ. ತಾತ್ಸಾರ ಹಾಗೂ ಉದಾಸೀನ ಭಾವದಿಂದಲೇ ನಾನು ಅವಳನ್ನು ಮೊದಲು ನೋಡುತ್ತಿದ್ದೆ: ದಿನಗಳು ಕಳೆದಂತೆ ಅವಳಲ್ಲಿಯ ಒಂಗೊಂದೇ ಗುಣಗಳು ಆಕರ್ಷಿಸಹತ್ತಿದವು. ಕಾರುಣ್ಯ ಹೃದಯದಿಂದ ರೋಗಿಗಳನ್ನು ಸಂತೈಸುವದನ್ನೂ ನಾನೊಮ್ಮೆ ಕಣ್ಣಾರೆ ಕಂಡು ದಂಗು ಬಡೆದು ನಿಂತೆನು. ಡಾಕ್ಟರರಲ್ಲಿ ಮೊದಲು ಬೇಕಾದ ಗುಣ ಅಂತಃಕರುಣವೆಂದು ನಾನು ಅವಳಿಂದ ಕಲಿತೆ."

"ಅವಳು ನಿಮ್ಮ ಆಸ್ಪತ್ರೆಯನ್ನೇಕೆ ಬಿಟ್ಟಳು" ಪದ್ಮನಾಭ ಕೇಳಿದ.

“ ಅವಳೇಕೆ ಬಿಟ್ಟಳೆಂಬ ಬಗ್ಗೆ ಹೆಚ್ಚಾಗಿ ನನಗೆ ಗೊತ್ತಿಲ್ಲ. ಧನ್ವಂತರಿ ಧಾಮದಲ್ಲಿದ್ದರೆ ಮುಂದೆ ತನ್ನ ಮಗನ ವಿದ್ಯಾಭ್ಯಾಸಕ್ಕೆ ತೊಂದರೆಯಾಗು ವದೆಂತಲೂ, ಆಪ್ತರಿಗೆ ಗೊತ್ತಾಗದಂತೆ ಎಲ್ಲಿಯಾದರೂ ಕಾಲಕಳೆದರಾಯಿ ತೆಂತಲೂ ಬಿಟ್ಟು ಹೋದಳೆಂದು ಜನರಾಡುತ್ತಿದ್ದದನ್ನು ನಾನು ಕೇಳಿರುವೆ. ಜನಗಳ ಮಾತಿನಲ್ಲಿ ಎಷ್ಟು ಸತ್ಯಾಂಶವಿರುವದೋ ನನಗೆ ಗೊತ್ತಿಲ್ಲ. ”

“ ಆಪ್ತರಿಗೆ ಆಕೆ ಆ ವೃತ್ತಿಯನ್ನು ಕೈಕೊಳ್ಳುವದು ಬೇಡಾಗಿರಬ ಹುದು; ಇಲ್ಲವೆ ತಂದೆ ತಾಯಿಗಳ ಮನದ ವಿರೋಧವಾಗಿ ಅವರು ಬೇಡೆಂ ದರೂ ಅವಳು ಆಸ್ಪತ್ರೆಯಲ್ಲಿ ದಾಯಿ ಆಗಿರಬಹುದು. ಅವಳು ಕಲಿತ ವಳೋ. ”

“ ಅವಳು ಸುಶಿಕ್ಷಿತಳಂತೆ ಕಂಡಳು. ಮಾತಿನಲ್ಲಿಯ ಚಾತುರ್ಯವು ಯಾರನ್ನಾದರೂ ಬೆಪ್ಪುಗೊಳಿಸುತ್ತಿತ್ತು. ಅವಳ ತರ್ಕಬದ್ಧ ಮಾತಿನ ಸರಣಿಯಲ್ಲಿ ಚಿಕ್ಕವಳಾದರೂ ಜ್ಞಾನ ತುಂಬಿದ ಅನುಭವವು ಹೊರಹೊಮ್ಮು ತ್ತಿತ್ತು. ”

“ ಇನ್ನಿಷ್ಟು ಚಹ ಬೇಕೋ ” ಎಂದು ಪದ್ಮನಾಭ ಕೇಳಿದ.

“ ಬೇಡ. ಸಾಕಾಯಿತು ” ಎಂದು ಕೈಯಲ್ಲಿಯ ಕಪ್ಪನ್ನು ಕೆಳಗಿ ಡುತ್ತ ಪ್ರಮಥನು ಮಾತನಾಡಹತ್ತಿದನು.

“ ಒಮ್ಮೆ ನಾನು ನನ್ನ ಕೋಣೆಯಲ್ಲಿ ಯಾವದೋ ಒಂದು ರೋಗಿಯ ರೋಗದ ವಿಷಯವಾಗಿ ನಮ್ಮಲ್ಲಿಯ ಇನ್ನೊಬ್ಬ ಡಾಕ್ಟರರ ಸಂಗಡ ಚರ್ಚಿ ಸುತ್ತ ಕುಳಿತುಕೊಂಡಿದ್ದೆ. ಸುಮಾರು ಸಂಜೆಯ ಏಳು ಗಂಟೆಯಾಗಿರ ಬಹುದು. ಆನನ್ನ ಸಹೋದ್ಯೋಗಿಯು ರೋಗದ ಕಾರಣಗಳನ್ನೂ ಅದಕ್ಕೆ ಬೇಕಾಗುವ ನಿಧಾನಗಳನ್ನೂ ಹೇಳುತ್ತ ನನ್ನೆದುರಿಗಿನ ಕುರ್ಚಿಯ ಮೇಲೆ ಕುಳಿತಿದ್ದನು. ಒಳ್ಳೇ ಅವಸರದಿಂದ ಧಾವಿಸುತ್ತ ಅವಳು ಕೋಣೆಯಲ್ಲಿ ಬಂದು ‘ ಡಾಕ್ಟರ ಏನು ಘಾತ ಮಾಡಿ ಬಿಟ್ಟಿರಲ್ಲ’ ಎಂದು ನನಗೆ ಅಂದಳು. ಅವಳ ಮಾತುಗಳನ್ನು ಕೇಳಿ ನನ್ನ ಜ್ಞಾನದ ಬಗ್ಗೆ ಹೆಮ್ಮೆಯಿದ್ದ ನನಗೆ ಒಬ್ಬ ಸಾಮಾನ್ಯ ದಾಯಿಯು ಹೀಗೆ ಮಾತನಾಡುವದೆಂದರೆ ಅವಮಾನದ ಪರಮಾವಧಿಯೆಂದು ತಿಳಿದು ಕಣ್ಣು ಕೆಂಪಗೆ ಮಾಡಿ ಅವಳನ್ನು ದುರು ದುರನೆ ನೋಡಹತ್ತಿದೆನು. ”

"ಡಾಕ್ಟರ, ಹಿಂದುಗಡೆಗೆ ನನ್ನ ಮೇಲೆ ಕೋಪ ಮಾಡಿರಿ. ನನ್ನನ್ನು ಧಾಮದಿಂದ ಹೊರಗೆ ಹಾಕಿದರೂ ಅಷ್ಟೇ; ಮೊದಲು ನನ್ನ ಸಂಗಡ ಆ ರೋಗಿಯ ಕಡೆಗೆ ಬನ್ನಿ. ನೀವು ಬೆಡ್ಡ ನಂಬರ ೮೪ ರಲ್ಲಿಯ ರೋಗಿಗೆ ಕರುಳಿನ ಹುಣ್ಣೆಂದು ಹೇಳಿ ಈ ರೋಗದಿಂದ ಬದುಕುವದು ಬಹಳೇ ಕಠಿಣ ವೆಂದೇಕೆ ಹೇಳಿದಿರಿ" ಎಂದು ನನಗೆ ಕೇಳಿದಳು.

"ಹೇಳಿದರೇನಾಯಿತು. ಇದ್ದದ್ದನ್ನು ನಾನು ಹೇಳಿದೆ. ರೋಗಿಗೆ ಪೊಳ್ಳು ಆಶ್ವಾಸನ ಕೊಡಲು ನಾನೊಪ್ಪುವದಿಲ್ಲ."

"ನೀವು ಆಶ್ವಾಸನ ಕೊಟ್ಟ ಎಲ್ಲ ರೋಗಿಗಳನ್ನು ಬದುಕಿಸುವೆನೆಂಬ ಶಕ್ತಿ ನಿಮ್ಮಲ್ಲಿರುವದೋ ? ಹಾಗಿದ್ದರೆ ನೀವೂ ಒಬ್ಬರು ದೇವರೇ ಆದಿರಿ."

ಅವಳ ಈ ಮಾತು ಕೇಳಿ ನಾನು ದಂಗು ಬಡಿದು ನಿಂತೆ. ನನ್ನ ಶಕ್ತಿಯ ಅರಿವು ನನಗಾಯಿತು. ಈಗ ಆಗಿರುವದಾದರೂ ಏನೆಂದು ನಾನು ಕೇಳಿದೆ.

"ಆ ರೋಗಿಯನ್ನು ನೋಡಲು ನಾನು ಈಗ ಹೋಗಿದ್ದೆ. ಆವನು ಧೈರ್ಯ ಕಳೆದುಕೊಂಡಿರುವನು. ಎದೆ ಒಡೆದು ಕೊಂಡಿರುವನು. ನಾಳೆ ಸಾಯುವವನಿಗೆ ಇಂದೇ ನೀವು ಸಾಯೆಂದು ಹೇಳಿದ ಹಾಗಾಯಿತು. ಆ ರೋಗಿಯ ಹೆಂಡತಿಯು ಗಂಡನ ಪರಿಸ್ಥಿತಿಯನ್ನು ಕಂಡು ಕಣ್ಣೀರು ಹಾಕುತ್ತ ಆತನ ಬದಿಯಲ್ಲಿಯೇ ದಿಕ್ಕು ತೋಚದೆ ಕುಳಿತುಕೊಂಡಿರುವಳು. ಅವಳಿಗೆ ಸಮಾಧಾನಪಡಿಸಿದೆ. ರೋಗಿಗೆ ಧೈರ್ಯ ಕೊಟ್ಟೆ. ರೋಗಿಗೆ ಡಾಕ್ಟರರು ಇನ್ನೂ ಹೊಸಬರು; ಅಷ್ಟು ಅನುಭವವಿಲ್ಲ; ಅಷ್ಟು ಜ್ಞಾನ ವಿಲ್ಲ; ತಪ್ಪು ಕಲ್ಪನೆಯಿಂದ ನಿನಗೆ ಕರುಳಿನ ಹುಣ್ಣಿನ ಬೇನೆಯೆಂದು ಹೇಳಿರುವರು. ನಿನಗೆ ಆ ರೋಗವೇ ಇಲ್ಲ. ನಿನಗೆ ಅಶಕ್ತತನದಿಂದ ಎದೆ ಯಲ್ಲಿ ಹುಗುಳುಗಳಾಗಿರುವವು. ನಿನ್ನ ಮೈಯಲ್ಲಿ ತ್ರಾಣ ಬಂದು ಪಚನ ವಾಗಹತ್ತಿದರೆ ಎದೆಯಲ್ಲಿಯ ಹುಗುಳುಗಳು ಮಾಯವಾಗುವವು. ಧೈರ್ಯ ಬಿಡಬೇಡೆಂದು ನಾನು ಹೇಳಿದೆ. ನಾನು ಡಾಕ್ಟರನಲ್ಲ; ನನ್ನ ಮಾತಿನ ಮೇಲೆ ಆತ ಹೇಗೆ ವಿಶ್ವಾಸವಿಡಬೇಕು."

ಎಂದು ನುಡಿದಳು.

ನನಗೆ ನನ್ನ ತಪ್ಪಿನ ಕಲ್ಪನೆಯು ಬಂದಿತು. ನಾನು ಅವಳ ಹಿಂದೆ

ಆ ರೋಗಿಯ ಕಡೆಗೆ ಧಾವಿಸಿದೆ. ತಾನು ಬದುಕುವದಿಲ್ಲವೆಂಬ ಭಾವನೆ ಯಿಂದ ಧೈರ್ಯವನ್ನು ಕಳೆದುಕೊಂಡಿದ್ದರಿಂದ ದೇಹದಿಂದ ಬೆವರಿನ ಪ್ರವಾಹವೇ ಹರಿಯಹತ್ತಿತು. ಅದನ್ನು ತಡೆಯುಗಟ್ಟದಿದ್ದರೆ ಕೆಲವು ನಿಮಿಷಗಳಲ್ಲಿಯೇ ಆತ ಅಸುನೀಗುವನೆಂದು ನನಗನಿಸಹತ್ತಿತು. ಆತ ಪ್ರಜ್ಞಾಹೀನನಾಗಿದ್ದಿಲ್ಲ.

"ಡಾಕ್ಟರರನ್ನು ಕರೆದುಕೊಂಡು ಬಂದಿರುವೆ. ಅವರು ಇನ್ನೊಮ್ಮೆ ನೆಟ್ಟಗೆ ತಪಾಸು ಮಾಡುವರು, ಹೆದರಬೇಡ" ಎಂದು ನುಡಿದಳು.

"ಡಾಕ್ಟರ ಬೆವರು ನಿಲ್ಲಲು ಒಂದು ಇಂಜಕ್ಶನ್ ಕೊಟ್ಟುಬಿಡಿ" ಎಂದು ಮೆಲ್ಲಗೆ ನನಗೆ ಹೇಳಿದಳು.

ಅವಳ ಮಾತುಗಳನ್ನು ಕೇಳಿ ಗೊಂಬೆಯಂತೆ ನಾನು ಅಲ್ಲಿಂದೆದ್ದು ನನ್ನ ಬ್ಯಾಗನ್ನು ತಂದು ಅವನಿಗೆ ಒಂದು ಇಂಜಕ್ಶನ್ ಕೊಟ್ಟೆ. ನಾಲ್ಕೈದು ನಿಮಿಷಗಳಲ್ಲಿ ವೇಗ ಕಡಿಮೆಯಾಯಿತು. ತಲೆಯಲ್ಲಿ ಆತನ ವಿಚಾರ ತಪ್ಪಿಸಲು ಇಂಜಕ್ಶನ್‌ವಿದ್ದರೆ ಕೊಡಬೇಕೆಂದು ನನಗೆ ಬಿನ್ನಹ ಮಾಡಿ ದಳು. ಅವನಿಗೆ ಧೈರ್ಯ ಕೊಡುತ್ತ ಮೈಮೇಲಿನ ಬೆವರನ್ನು ಒರಿಸುತ್ತ ಆತನ ಬದಿಯಲ್ಲಿಯೇ ಅವಳು ಕುಳಿತುಕೊಂಡಿದ್ದಳು. ಅವಳು ಮಾಡುವ ಸೇವೆ, ರೋಗಿಗಳಿಗೆ ಅವಳಾಡುವ ಮಾತುಗಳನ್ನು ಕಂಡು ಅವಳು ದಯೆಯ ಮೂರ್ತಿ ಕಾರುಣ್ಯನಿಧಿಯೆಂದು ನನಗನಿಸಹತ್ತಿತು. ನಾನು ಮತ್ತೊಮ್ಮೆ ರೋಗಿಯನ್ನು ಪರೀಕ್ಷೆ ಮಾಡಿದಂತೆ ಮಾಡಿ ನಾನು ನಿನಗೆ ಮೊದಲು ಹೇಳಿದ ಜಡ್ಡಾಗಿರುವದಿಲ್ಲ, ದಾಯಿಯು ಹೇಳಿದಂತೆ ನಿನ್ನ ಎದೆ ಯಲ್ಲಿ ಬಹಳೇ ಹುಗುಳುಗಳಾಗಿರುವವು, ಮೈಯಲ್ಲಿ ಶಕ್ತಿ ಬಂದರೆ ತಾವೇ ಹೋಗುವವು ಎಂದು ನಾನಿಷ್ಟು ಹೇಳಿದ ಕೂಡಲೇ ಆ ರೋಗಿಯ ಮುಖದ ಮೇಲೆ ನಂಬಿಗೆಯ ಕಳೆ ಹುಟ್ಟಿ ಕೃತಜ್ಞತೆಯಿಂದ ನನ್ನನ್ನು ನೋಡ ಹತ್ತಿದನು.

"ಈಗಲಾದರೂ ನಂಬಿಕೆ ಹುಟ್ಟಿತೋ, ಎಂದು ರೋಗಿಗೆ ಕೇಳಿ ದಳು."

ರೋಗಿಗೆ ಜಂಪು ಹಿಡಿಯಿತು. ಅವನ ಹತ್ತರ. ಇನ್ನೊಬ್ಬ ದಾಯಿಗೆ ಕುಳಿತುಕೊಳ್ಳಲು ಹೇಳಿ ಅವಳು ನನ್ನ ಸಂಗಡ ಹೊರಗೆ ಬಂದಳು.

" ಡಾಕ್ಟರ, ನೀವು ಅವನಿಗೆ ಧೈರ್ಯ ಕೊಟ್ಟು ಪ್ರಾಣವನ್ನು ಉಳಿಸಿದಿರಿ. ಬಹಳೇ ಉಪಕಾರ ಮಾಡಿದಿರಿ. ಹಿಂದು ಮುಂದೆ ಏನೂ ವಿಚಾರ ಮಾಡದೆ ನಿಮ್ಮ ಕಡೆಗೆ ಧಾವಿಸುತ್ತ ಬಂದು ನಿಮ್ಮ ಸಹದ್ಯೋಗಿಯ ಎದುರಿಗೆ ನಿಮಗೆ ಉದ್ವೇಗಕರ ಮಾತುಗಳನ್ನು ಆಡಿದ್ದಕ್ಕೆ ನನ್ನನ್ನು ಕ್ಷಮಿಸಬೇಕು. ನಾನು ನಿಮಗಿಂತಲೂ ಚಿಕ್ಕವಳು. ತಂಗಿಯು ಅಣ್ಣನ ಮೇಲಿನ ಸತ್ತೆಯಿಂದ ಮಾತನಾಡುವಳೆಂದು ತಿಳಿದು ನೀವು ನಾನು ಮಾತನಾಡಿದ್ದು ಮರೆತುಬಿಟ್ಟು ಕ್ಷಮಿಸಬೇಕು " ಎಂದಂದಳು.

" ನೀವು ನನ್ನನ್ನು ಕ್ಷಮಿಸಬೇಕು. ನೀವು ಚಿಕ್ಕವರಾದರೂ ಬುದ್ಧಿಯಿಂದ, ಅನುಭವದಿಂದ ನನಗಿಂತ ಎಷ್ಟೋ ಮುಂದೆ. ಇಂದು ನೀವು ನನಗೆ ಕಲಿಸಿದ ಪಾಠವನ್ನು ನಾನು ಆಯುಷ್ಯದಲ್ಲಿ ಎಂದೂ ಮರೆಯಲು ಶಕ್ಯವಿಲ್ಲ. ಏಳೆಂಟು ವರುಷ ಕಾಲೇಜದಲ್ಲಿ ಕಲಿತ ಹಾಗೂ ದೊರಕಿಸಿದ ಜ್ಞಾನಕ್ಕಿಂತ ಹೆಚ್ಚಿಗೆ ಜ್ಞಾನವನ್ನು ಇಂದು ನೀವು ನನಗೆ ದಯಪಾಲಿಸಿದಿರಿ. ನೀವು ನನ್ನ ಗುರುಗಳೆಂದು ತಿಳಿದುಕೊಳ್ಳುವೆನು.

ಅಣ್ಣನು ತಂಗಿಗೆ ಹೀಗೆ ಮಾತನಾಡಬಾರದೆಂದು ನುಡಿದು ಅವಳು ಮತ್ತೆ ಆ ರೋಗಿಯ ಕಡೆಗೆ ಹೋದಳು."

"ರೋಗಿಗಳಿಗೆ ಅವಳು ಮಾಡುವ ಸೇವೆಯನ್ನು ಕಂಡು ರೋಗಿಗಳು ಅವಳಿಗೆ ' ರೋಗಿಗಳ ಕಾಮಧೇನು ' ಎಂದು ಕರೆಯುವದು ಉಚಿತವಾಗಿಯೂ, ಸೂಕ್ತವಾಗಿಯೂ ಇರುವದೆಂದು ನನಗೆ ಅನಿಸಿತು. ಪದ್ಮಾ, ಇಂತಹ ಜನರು ಆಯುಷ್ಯದಲ್ಲಿ ದೊರಕುವದು ನಮಗೆ ದುರ್ಲಭವು."

" ಪ್ರಮಥ ಅವಳು ಹೇಗಿದ್ದಳು ? "

" ಅವಳ ವೇಷಭೂಷಣ ಒಂದು ಸನ್ಯಾಸಿನಿಯಂತೆ. ಶುಭ್ರ ಪತ್ತಲ ಕುಪ್ಪಸಗಳನ್ನು ತೊಡುತ್ತಿದ್ದಳು. ಅವಳನ್ನು ನೋಡಿದರೆ ಕಾಮಭಾವನೆ ಬಯಲಾಗಿ ಪೂಜ್ಯಭಾವನೆ ತಲೆದೋರುತ್ತಿತ್ತು. ಮಾತನಾಡುತ್ತಾಡುತ್ತ ಅವಳು ಮಾತ್ರ ಒಂದೆರೆಡು ನಿಮಿಷ ಸುಮ್ಮನೆ ಕಣ್ಣು ಮುಚ್ಚಿಕೊಂಡು ಕುಳಿತು ಮತ್ತೆ ತನ್ನ ಮೊದಲಿನ ಮಾತನ್ನು ಮುಂದೊರೆಸುತ್ತಿದ್ದಳು. ಅವಳ ಮನದಲ್ಲಿ ಏನೋ ಒಂದು ಕೊರೆಯುವ ಚಿಂತೆಯಿತ್ತೆಂದು ನನಗನಿಸುವದು. ನಮ್ಮ ಭಾಮದಲ್ಲಿ ಅವಳ ಆಯುಷ್ಯದ ಗುಟ್ಟನ್ನು ಯಾರೂ

ಅರಿಯಲಿಲ್ಲ. ಅವಳಾದರೂ ಯಾರ ಮುಂದಾದರೂ ಉಸರಲಿಲ್ಲ. ಇಂದು ನಾನು ನೋಡಿದ ತೈಲ ಚಿತ್ರವೇ ಅವಳದೆಂದು ನನಗನಿಸಲಿಕ್ಕೆ ಹತ್ತಿರು ವದು. ಆ ಚಿತ್ರದಲ್ಲಿದ್ದವಳ ಹೆಸರು ವೇದವತಿಯೆಂದು ಅಲ್ಲಿಯ ದಾಯಿ ಯೊಬ್ಬಳು ಹೇಳಿದಳು. ಅವಳು ನಮ್ಮ ಧಾಮವನ್ನು ಬಿಟ್ಟು ಹೋಗುವ ಮುಂದೆ ನನ್ನೆಡೆಗೆ ಬಂದು ಡಾಕ್ಟರರೇ ನಾನು ಹೋಗುವೆನು. ನಾನು ನಿಮಗೇನಾದರೂ ಮನನೋಯಿಸುವಂತೆ ಮಾತನಾಡಿದ್ದರೆ; ಯಾವದೇ ಕೃತಿಯನ್ನು ಮಾಡಿದ್ದರೆ ಅದನ್ನು ಮರೆತುಬಿಟ್ಟು ತಿಳಿಯಲಾರದ ಹುಚ್ಚ ತಂಗಿಯೆಂದು ತಿಳಿದು ತನ್ನನ್ನು ಕ್ಷಮಿಸಬೇಕೆಂದು ಹೇಳಿ ಒಂದು ನಿಮಿಷ ಕೂಡ ನಿಲ್ಲದೆ ಹೋಗಿಬಿಟ್ಟಳು. ಅವಳಿಗೆ ಮಾರುತ್ತರ ಕೊಡಬೇಕೆಂ ಬುದಕ್ಕೆ ನನಗೆ ಸಮಯವೇ ಉಳಿಯಲಿಲ್ಲ. ಅವಳು ನಮ್ಮನ್ನು ಬಿಟ್ಟು ಹೋದದ್ದು ಕಂಡು ನನ್ನ ಕಣ್ಣುಗಳು ಕಂಬನಿಗಳಿಂದ ತುಂಬಿದವು. ಪ್ರೀತಿಯ ತಂಗಿಯನ್ನು ಕಳೆದುಕೊಂಡರಾಗುವಷ್ಟು ದುಃಖ ನನಗಾಯಿತು. ಅವಳ ಗಂಡನು ಪುಣ್ಯಾತ್ಮ. ”

ಎಂದು ಪ್ರಮಥನು ನುಡಿದನು.

“ ನಿಮ್ಮಲ್ಲಿದ್ದವಳ ಹೆಸರೇನೆಂದು ಹೇಳಿದಿ ? ” ಪದ್ಮನಾಭ ಕೇಳಿದ.

“ ಚಿತ್ರವನ್ನು ನೋಡುವ ಕಾಲಕ್ಕೆ ನನಗೆ ನೆನಪಾಗಲಿಲ್ಲ. ಅವಳ ಹೆಸರು ವೇದವತಿಯೆಂದು ಈಗ ನೆನಪಾಯಿತು. ಅವಳು ಕಾಲುಜಾರಿ ಬಿದ್ದು ಪೆಟ್ಟು ತಗಲಿ ಮೃತಪಟ್ಟಳೆಂದು ಹೇಳಿದರು. ”

“ಯಾವನೋ ದುಷ್ಟನು ಅವಳ ಮೈಮೇಲೆ ಕೈಮಾಡಿ ಹೋದನೆಂದೂ ಆ ಹೊಡೆತದಿಂದ ಕಾಲು ಜಾರಿ ಬಿದ್ದು ಪೆಟ್ಟು ತಗಲಿತೆಂದೂ, ಪೆಟ್ಟಿನಿಂದ ಪ್ರಜ್ಞೆತಪ್ಪಿ ಮೃತಪಟ್ಟಳೆಂದೂ ಜನರು ಮಾತನಾಡುತ್ತಿರುವದನ್ನು ನಾನು ಕೇಳಿರುವೆ ” ಎಂದು ಮರೆಯಲ್ಲಿ ನಿಂತಿದ್ದ ಪ್ರೇಮನಂದಿನಿಯು ಮಾತನಾ ಡಿದಳು. ”

“ ಪೆಟ್ಟು ತಗಲಿ ಸತ್ತಿರಲಿಕ್ಕಿಲ್ಲ; ಹೊಡೆತವನ್ನು ನೋಡಿ ಅವಳಿಗೆ ತನ್ನ ಗತಿಸಿದ ಜೀವನವು ನೆನಪಾಗಿ ಎದೆ ಒಡೆದು ಸತ್ತಿರಬಹುದೆಂದು ನನ ಗನಿಸುವದು. ಮೇಲಾಗಿ ಹೆಂಗಸರು ಯಾವಾಗಲೂ ಅಳ್ಳೆದೆಯವರು ” ಎಂದು ಪದ್ಮನಾಭ ನುಡಿದು ಗಹಗಹಿಸಿ ನಕ್ಕುಬಿಟ್ಟನು.

ಪದ್ಮನಾಭನು ಏನೂ ಕಾರಣವಿಲ್ಲದೆ ನಕ್ಕದ್ದನ್ನು ಕಂಡು ಪ್ರಮಥನು;
"ಪದ್ಮಾ, ನಕ್ಕದ್ದೇಕೆ? ಇದರಲ್ಲಿ ನಿನಗೇನು ಮೋಜೆನಿಸಿತು" ಅಂದನು
" ನೀನು ವರ್ಣನೆಯನ್ನಿಷ್ಟು ಮಾಡುವವಳಿಗೆ ಈ ತರಹದ ಮರಣ ಬಂದಿರುವದನ್ನು ಕಂಡು ಕರ್ಮ-ಧರ್ಮಗಳೆರಡೂ ನೆನಪಾಗಿ ಜೀವನ ಚಿತ್ರದ ವಿಚಿತ್ರ ಗತಿಯನ್ನು ಕಂಡು ನನಗೆ ನಗೆ ಬಂದಿತಿಷ್ಟೇ ಹೊರತು ಮತ್ತೇನೂ ಇಲ್ಲ. ಒಮ್ಮೆ ಅವಳು ಜೀವನದ ಯಾತ್ರೆಯನ್ನು ಮುಗಿಸಿದಳು. ನಾನೂ ಮುಗಿಸಬೇಕು. "

"ಅವಳು ಜೀವನದ ಯಾತ್ರೆ ಮುಗಿಸಿದರೆ ನೀನೇಕೆ ಮುಗಿಸಬೇಕು?"

" ಹುಟ್ಟಿದವರು ಸಾಯಲೇ ಬೇಕೆಂದು ನಾನಂದೆ. ಇಂದು ಅವಳ ಯಾತ್ರೆ ಮುಗಿಯಿತು. ನಾಳೆ ನನ್ನ ಯಾತ್ರೆ ಮುಗಿಯಬಹುದು, ಅದರ ಮುಂದೆ ಮತ್ತೊಬ್ಬನದು ಮುಗಿಯಬಹುದು. ಈ ರೀತಿಯಲ್ಲಿ ನಾನಂದೆ" ಎಂದು ಹೇಳಿದನು ಪದ್ಮನಾಭನು.

ಪ್ರಮಥನು ಪದ್ಮನಾಭನ ಮಾತು ಕೇಳಿ ಅಷ್ಟು ಸಮಾಧಾನ ಹೊಂದದಿದ್ದರೂ ತಿರುಗಿ ಅವನಿಗುತ್ತರವನ್ನೀಯದೆ ಪದ್ಮನಾಭನ ಮನಸ್ಸು ಎಲ್ಲಿ-ಯೋ ಹರಿದುಹೋಗಿ ಅಸಮಂಜಸ ಉತ್ತರವನ್ನು ಕೊಟ್ಟಿರಬಹುದೆಂದು ತಿಳಿದುಕೊಂಡನು. ಬಹಳ ದಿನಗಳ ಮೇಲೆ ಬಂದ ಗೆಳೆಯನು ಯೋಗ ಕ್ಷೇಮವನ್ನು ಕೇಳಿದರೂ ಅದಕ್ಕೆ ಆತ್ಮೀಯಭಾವದಿಂದ ಉತ್ತರವನ್ನೀಯದೆ ಗಾಳಿಯಲ್ಲಿ ತೂರಿದ ಶಬ್ದಗಳಿಂದ ಉತ್ತರ ಕೊಡುವದನ್ನು ಕಂಡು ಬಹಳೇ ವಿಚಿತ್ರವೆನಿಸಿತು ಪ್ರಮಥನಿಗೆ. ಪದ್ಮನಾಭನು ತನ್ನ ಗೆಳೆಯನ ಮೊಗದ ಮೇಲೆ ತೇಲುತ್ತಿದ್ದ ಉದಾಸೀನ ಭಾವವನ್ನು ಕಂಡು,

" ಪ್ರಮಥ, ಒಮ್ಮೊಮ್ಮೆ ನನಗೆ ಕಾರಣಗಳಿಲ್ಲದೆ ನನ್ನ ಜೀವನದ ಹಿಂದಿನಘಟನೆಗಳು ಬೃಹದಾಕಾರ ಹೊಂದಿ ನನ್ನ ದೇಹದಲ್ಲಿ ಚಲಿಸುವ ಶಕ್ತಿಗೆ ಸಿಡಿಲು ತಾಕಿದಂತಾಗಿ ಬುದ್ಧಿ ಕುಂಠಿತವಾಗಿ ಸಂದರ್ಭಗಳಿಲ್ಲದೆ ಏನೇನೋ ಮಾತನಾಡುವೆನು. ಕಾರಣಗಳಿಲ್ಲದ ಮಾತುಗಳು ಅವು. ಜೀವನವು ಅಸಹ್ಯವಾಗಿ ಬೇಸರೆನಿಸಿ ಒಮ್ಮೊಮ್ಮೆಪ್ರಾಣಕೊಡಬೇಕೆಂದನಿಸುವದು " ಎಂದು ನುಡಿದನು.

" ಪ್ರಾಣ ಕೊಟ್ಟರೆ ಏನು ಮಾಡಿದಂತಾಗುವದು ? ಕೆಲವು ವರುಷ

ಗಳ ಹಿಂದೆ ಒಂದು ದಿನ ನಮ್ಮ ಧಾಮದಲ್ಲಿ ವಿಷ ಪ್ರಾಶನ ಮಾಡಿ ಪ್ರಾಣ ಕೊಡಬೇಕೆಂದಿದ್ದ ವಿಕೇಸಿ ವಿಧವೆಯ ಕೇಸು ವೇದವತಿಯು ನಮ್ಮ ಧಾಮವನ್ನು ಬಿಟ್ಟು ಹೋಗುವದರ ಎಂಟು ದಿನಗಳ ಪೂರ್ವದಲ್ಲಿ ಬಂದಿತ್ತು. ಆ ಕೇಸು ನಮ್ಮಲ್ಲಿ ಹೇಗೆ ಬಂದಿತು; ಯಾರು ತಂದರೆಂಬುವದು ನನಗೆ ಗೊತ್ತಾಗಲಿಲ್ಲ. ವೇದವತಿಯ ತುಂಬಾ ನೆರವಿನಿಂದ ನನಗೆ ಆ ವಿಧವೆಯ ಪ್ರಾಣವನ್ನುಳಿಸಲು ದೇವರು ಶಕ್ತಿಯನ್ನು ಕೊಟ್ಟನು. ಮರುದಿನ ಆ ವಿಧವೆಯು ನಾಲ್ಕು ತಿಂಗಳ ಗರ್ಭಿಣಿಯಿರುವಳೆಂದು ವೇದವತಿಯು ಹೇಳಿದಳು. ಗರ್ಭಪಾತ ಮಾಡಿಸಬೇಕೆಂದು ಆ ವಿಧವೆಯು ವೇದವತಿಗೆ ಬಹಳ ಹೇಳಿಕೊಂಡಿದ್ದಳಂತೆ ತೋರಿತು. ಗರ್ಭಪಾತ ಮಾಡಿಸಲು ನನ್ನ ಮನಸ್ಸು ಒಪ್ಪಲಿಲ್ಲ. ಮಾಡಿಸಿದರೆ ನಾನೊಂದು ಅನ್ಯಾಯ ಮಾಡುವೆನೆಂದು ಅನಿಸಿತು. ಗರ್ಭಪಾತ ಮಾಡಿಸಿದರೆ ಅನ್ಯಾಯವಾಗುವದಿಲ್ಲವೆಂದೂ ಆ ವಿಧವೆಯ ಪ್ರಾಣವನ್ನು ಉಳಿಸಿದಂತಾಗುವದೆಂದೂ ವೇದವತಿಯು ನನ್ನೊಡನೆ ವಾದಿಸಿದಳು. ಗಿಡದ ಗರ್ಭದಲ್ಲಿ ಬೀಜವು ಮೊಳೆತು ಸಸಿಯಾದರೆ ಗಿಡವು ಉರಳುವದೆಂದು ಗೊತ್ತಾದರೆ ಬೀಜವನ್ನು ಕಮರಿಸಬೇಕೋ ಬೆಳೆಯಗೊಡಬೇಕೋ ಎಂದು ನನಗೆ ಪ್ರಶ್ನೆ ಹಾಕಿದಳು. ನಾವು ಕಮರಿಸದೆ ಹಾಗೇ ಬಿಟ್ಟರೆ ಮರವು ಉರುಳುವದು; ಆದರಿಂದ ಬೀಜವು ತಾನೇ ನಾಶವಾಗುವದು. ಯಾವದೇ ಸಂದರ್ಭದಲ್ಲಿ ಬೀಜವು ನಾಶವಾಗತಕ್ಕದ್ದೇ. ಸಾಯಬೇಕೆಂದು ಅವಳಲ್ಲಿ ಬರುತ್ತಿರುವ ವಿಚಾರವನ್ನು ನಾಶಮಾಡಬೇಕಾದರೆ ಗರ್ಭಪಾತ ಮಾಡಿಸಬೇಕಾಗುವದು. ಇಲ್ಲದಿದ್ದರೆ ಅವಳು ಇಲ್ಲಿಂದ ಎಲ್ಲಿಯಾದರೂ ಹೋಗಿ ಪ್ರಾಣ ಕೊಡುವಳೆಂದು ನನಗೆ ಹೇಳಿದಳು. ಅವಳ ಹಿಂದಿನ ಜೀವನದ ವೃತ್ತಾಂತವನ್ನು ವೇದವತಿಯು ಅರಿತುಕೊಂಡಿದ್ದಳಂತೆ ನನಗೆ ತೋರಿತು. ಅವಳು ಮಾಡಿದ ತಪ್ಪಿಗೆ ಶಿಕ್ಷೆ ಅನುಭೋಗಿಸಬೇಕೆಂದು ನಾನು ಗಂಭೀರ ಮುದ್ರೆಯಿಂದ ಉತ್ತರ ಕೊಟ್ಟೆ.

"ಅವಳು ಮಾಡಿದ್ದು ತಪ್ಪೋ ಒಪ್ಪೋ ಎಂಬುದನ್ನು ನಿರ್ಣಯ ಮಾಡುವ ಅಧಿಕಾರವು ಸಮಾಜಕ್ಕೆ; ಶಿಕ್ಷಿಸುವ ಅಧಿಕಾರ ಸಮಾಜಕ್ಕೆ. ಇಲ್ಲಿ ನಾವು ಡಾಕ್ಟರರೆಂದು ವರ್ತಿಸಬೇಕಾಗುವದು. ಸಮಾಜದಲ್ಲಿಯ ಘಟಕನೆಂದು ವರ್ತಿಸಬಾರದು."

"ಸಮಾಜದಲ್ಲಿಯ ಘಟಕನಿಗೂ ಕೂಡ ಶಿಕ್ಷಿಸುವ ಅಧಿಕಾರವಿಲ್ಲ. ಸಂಕಟದಲ್ಲಿದ್ದವರಿಗೆ ಸಹಾಯ ಮಾಡದೆ ಅವರು ತೊಳಲುವದನ್ನು ನೋಡಿ ನಮಗೆ ಸಂಬಂಧವಿಲ್ಲೆಂದು ಉದಾಸೀನ ಭಾವನೆಯಿಂದ ನಾವು ಹೋದರೆ ಅಪರೋಕ್ಷವಾಗಿ ಶಿಕ್ಷೆ ಕೊಟ್ಟಂತೆ. ನಿಮ್ಮ ಹೊಟ್ಟೆಯಿಂದ ಹುಟ್ಟಿದ ಮಗಳಿಗೆ ಇಂತಹ ಸ್ಥಿತಿಯು ಪ್ರಾಪ್ತವಾಗಿದ್ದರೆ ನೀವು ಹೇಗೆ ನಡೆದುಕೊಳ್ಳುತ್ತಿದ್ದಿರಿ ಹಾಗೆ ಈ ವಿಧವೆಯ ಪರಿಸ್ಥಿತಿಯಲ್ಲಿ ನಡೆದುಕೊಳ್ಳಿ. ಪರರಿಗೆ ಧರ್ಮಸಿಂಧುವನ್ನು ಹೇಳತಕ್ಕವರು ಮಾನವ ಕುಲದ ವೈರಿಗಳಲ್ಲವೇ."

ಎಂದು ವೇದವತಿಯು ನನ್ನೊಡನೆ ವಾದಿಸಿದಳು.

"ನೀನೇನು ಮಾಡಿದೆ ಆಗ್ಗೆ" ಎಂದು ಚೇತರಿಸಿಕೊಂಡು ಪದ್ಮನಾಭ ಕೇಳಿದ.

ಕೋಣೆಯ ಹೊರಬಾಗಿಲದ ಮರೆಯಾಚೆಯಲ್ಲಿ ಪ್ರೇಮನಂದಿನಿಯು ಆಸ್ಥೆಯಿಂದ ಪ್ರಮಥನ ಮಾತುಗಳನ್ನು ಕೇಳುತ್ತ ನಿಂತಿದ್ದಳು.

"ನಿರುಪಾಯನಾಗಿ ಅವಳ ಗರ್ಭಪಾತ ಮಾಡಿಸಿದೆ. ಅವಳು ಯಾರೆಂಬುದು ಇಂದಿನವರೆಗೂ ನನಗೆ ನಿಗೂಢವಾಗಿಯೇ ಉಳಿದಿರುವದು. ಅವಳ ಬಗ್ಗೆ ವೇದವತಿಗೆ ಗೊತ್ತಿದ್ದರೂ ಇರಬಹುದು. ಆ ವಿಕೇಶಿ ವಿಧವೆ ನಮ್ಮಲ್ಲಿಂದ ಎಲ್ಲಿ ಹೋದಳೋ ಎಂಬುವದು ನನಗೆ ಗೊತ್ತಿಲ್ಲ. ಅದೊಂದು ಜೀವಿಯ ಭಗ್ನ ಜೀವನವೆಂದೆನಿಸಿತು."

ಎಂದು ಪ್ರಮಥನು ನುಡಿದನು.

"ಎಲ್ಲರೂ ಭಗ್ನಜೀವಿಗಳೇ. ಬ್ಯಾಹ್ಯಾಡಂಬರದಿಂದ ಅವರ ಆಂತರಿಕ ಭಗ್ನ ಜೀವನವು ನಮಗರಿಯಲಾಗದು. ಅಂತಹ ವ್ಯಕ್ತಿಗಳು ತಮ್ಮ ಹೃದಯದಲ್ಲಿಯೇ ಕುದ್ದು ಕುದ್ದು ಬೆಂದು ಹೋಗುವವು. ಇದಕ್ಕೆ ಬೇಕಾದರೆ ಕರ್ಮದ ಫಲವೆನ್ನು; ಧರ್ಮದ ದುರ್ವಿಪಾಕವೆನ್ನು; ಇಲ್ಲವೆ ಪ್ರಾರಬ್ಧದ ಫಲಶ್ರುತಿಯೆನ್ನು" ಪದ್ಮನಾಭನು ಅಂದನು.

"ಧರ್ಮ-ಕರ್ಮ–ಪ್ರಾರಬ್ಧಗಳೇನೋ ನನಗೆ ತಿಳಿಯದು" ನುಡಿದನು ಪ್ರಮಥ.

ಪ್ರೇಮನಂದಿನಿಯು ಅವರ ಮಾತುಗಳನ್ನು ಕೇಳುತ್ತ ಕೇಳುತ್ತ ಸ್ಮೃತಿ ತಪ್ಪಿ ನಿಂತಲ್ಲಿಯೇ ನೆಲಕ್ಕೆ ದೊಪ್ಪನೆ ಬಿದ್ದಳು. ಬಿದ್ದ ಸಪ್ಪಳವನ್ನು ಕೇಳಿ ಇರ್ವರೂ ಗಾಬರಿಯಾಗಿ ಕೋಣೆಯಿಂದ ಹೊರಗೆ ಧಾವಿಸಿದರು.

## ೭

ಮಂಡನ ಮಿಶ್ರನು ವೇದಾಧ್ಯಯನ ಪಾರಂಗತನು. ದ್ವೈತಾ-ದ್ವೈತ ವೇದಾಂತದಲ್ಲಿ ನಿಪುಣನು. ನ್ಯಾಯ ತರ್ಕ ಶಾಸ್ತ್ರಗಳಲ್ಲಿ ಪಂಡಿತನು. ವೈದಿಕ ವೃತ್ತಿಯನ್ನು ಮಾಡಿಕೊಂಡು ಕಾಲಹರಣ ಮಾಡುತ್ತಿದ್ದನು. ಅವನು ಆಂಗ್ಲವಿದ್ಯೆಯ ಗೋಜಿಗೇ ಹೋಗಲಿಲ್ಲ. ಮ್ಲೇಂಛರ ಭಾಷೆ ಕಲಿತರೆ ಭೂತಗಳ ಭಾಷೆ ಕಲಿತಂತೆಯೆಂದು ಆತನ ತಂದೆ ಅವನಿಗೆ ಪದೇ ಪದೇ ಹೇಳುತ್ತಿದ್ದನು. ಅವನ ತಂದೆಯು ಗೀರ್ವಾಣ ಭಾಷಾವಿಶಾರದ. ತಂದೆಯ ಗುರುತ್ವದಲ್ಲಿ ಆತನು ವಿದ್ವಾಂಸನಾಗಿದ್ದನು.

ವಂಶಾನುವಂಶ ಬಂದ ಪಾಂಡಿತ್ಯದ ಸಲುವಾಗಿ ಅವನ ಪೂರ್ವಜರಿಗೆ ಕೆಲವು ಭೂಮಿಗಳನ್ನು ಆಗಿನ ದಾನಿಗಳು ಉಂಬಳಿ ಹಾಕಿಕೊಟ್ಟಿದ್ದರು. ಆ ಭೂಮಿಗಳ ಮೇಲೆಯೇ ಅವರ ಚರಿತಾರ್ಥ ಸುಲಭವಾಗಿ ಸಾಗುವಂತಿತ್ತು. ಪರರ ಬಾಗಿಲಿಗೆ ಭಿಕ್ಷಾಂದೇಹಿ ಎಂದು ಹೋಗಿ ನಿಲ್ಲುವ ಪರಿಸ್ಥಿತಿಯಿದ್ದಿಲ್ಲ. ಮಂಡನ ಮಿಶ್ರನಿಗೆ ಅವನ ತಂದೆಯು ಸನಾತನ ಸಂಪ್ರದಾಯಸ್ಥರ ಮನೆತನದ ಅನುರೂಪ ಕನ್ಯೆಯನ್ನು ಹುಡುಕಿ ಲಗ್ನಮಾಡಿದ್ದನು. ಸೊಸೆಯು ಚಿಕ್ಕವಳಾದರೂ ಎಲ್ಲ ಭಾರವನ್ನು ಹೊತ್ತುಕೊಂಡು ಮನೆಯನ್ನು ಸಾಗಿಸಿಕೊಂಡು ಹೋಗುತ್ತಿದ್ದಳು. ತಂದೆಯ ವೃದ್ಧಾಪ್ಯದಲ್ಲಿ ಮಂಡನ ಮಿಶ್ರನು ಆತನ ಸೇವೆಯನ್ನು ಪುಂಡಲೀಕನಂತೆ ಮಾಡುತ್ತಿದ್ದನು.

ಆತನ ದಾಂಪತ್ಯ ಜೀವನ ಸುಖವಾಗಿ ಸಾಗಿತ್ತು. ಸಂಸ್ಕೃತ ಹಾಗೂ ವೇದಾಂತ ಕಲಿಯಬೇಕೆಂಬ ಹುಡುಗರಿಗೆ ಪಾಠ ಹೇಳಿ ಕೊಡುತ್ತಿದ್ದನು. ಅವರು ತಿಳಿದು ಏನಾದರೂ ಗುರುದಕ್ಷಿಣೆಯೆಂದು ಕೊಟ್ಟರೆ ತೆಗೆದುಕೊಳ್ಳುತ್ತಿದ್ದನು. ಸಂಸ್ಕೃತವನ್ನು ಕಲಿಯುವವರು ಬಹಳೇ ಕಡಿಮೆ, ಅದರಲ್ಲಿ ವೇದಾಂತವನ್ನು ಕಲಿಯಬೇಕೆನ್ನುವವರನ್ನು ಬಟ್ಟಿನಿಂದೆಣಿಸಬಹುದು. ಹೀಗೆ ಜೀವನವನ್ನು ಸಾಗಿಸುವಾಗ್ಗೆ ಅವರಿಗೆ ಒಂದು ಗಂಡುಮಗು ಹುಟ್ಟಿತು.

೧೯೪೨ ಆಗಸ್ಟನಲ್ಲಿ ತನ್ನ ಜೊತೆಗಾರರು ಚಳವಳಿಯಲ್ಲಿ ಸೇರಿದ್ದು ಕಂಡು ತಾನೂ ಸೇರಬೇಕೆಂದು ಮಂಡನ ಮಿಶ್ರನಿಗೆ ಅನಿಸಹತ್ತಿತು. ಮಾತೃಭೂಮಿಗೆ ತನ್ನಿಂದಾದಷ್ಟು ಅಳಲಿಯ ಸೇವೆಯನ್ನು ಸಲ್ಲಿಸಬೇಕೆಂದು ನಿರ್ಧಾರ ಮಾಡಿದನು. ಅವನ ಗೆಳೆಯರು ಕೆಲವರು ಮೊದಲೇ ಚಳವಳಿಯಲ್ಲಿ ಧುಮುಕಿದ್ದರು. ಆತನ ಪ್ರೀತಿಯ ಗೆಳೆಯನು ಚಳವಳಿಯಲ್ಲಿ ಶಿಕ್ಷೆಯಾಗಿ ಜೇಲಿಗೆ ಹೋದದ್ದು ಕಂಡು ಮನದಲ್ಲಿ ಬಹಳ ಮಿಡುಕಿದನು. ದೇಹದಲ್ಲಿ ಪ್ರಾಣವಿರುವವರೆಗೆ ದೇಶಸೇವೆ ಮಾಡಬೇಕೆಂದು ಆತನ ತಂದೆಯ ಎದುರಿಗೆ ಇತ್ತೀಚೆಗೆ ಮೇಲಿಂದ ಮೇಲೆ ಪ್ರಸ್ತಾಪ ತೆಗೆಯುತ್ತಿದ್ದ.

ಒಂದು ದಿನ ಆತನು ತಾನು ಚಳವಳಿಯಲ್ಲಿ ಸೇರುವೆನೆಂದೂ ಜನರ ಸೇವೆಯನ್ನು ಮಾಡಲು ಸಿದ್ದಾಪುರ ತಾಲೂಕಿಗೆ ಹೋಗುವೆನೆಂದೂ ತಂದೆಗೆ ಹೇಳಿದನು. ತಂದೆಯು ಮಗನ ಮಾತನ್ನು ನಂಬಲಿಲ್ಲ. ಆದರೂ ಮಗನ ಮಾತನ್ನು ಕೇಳಿ ತಂದೆಯು ಮುಂಕೆಬಡೆದು ಕುಳಿತನು.

" ಜನರ ಸೇವೆಯನ್ನು ಮಾಡಲಿಕ್ಕೆ ಚಳವಳಿಯಲ್ಲೇಕೆ ಸೇರಬೇಕು? ನಿನ್ನ ಸ್ವಭಾವಕ್ಕೆ ಅನುಗುಣವಾಗಿ ಜನರ ಸೇವೆಯನ್ನು ಮಾಡಲಿಕ್ಕೆ ಬರುವದಿಲ್ಲವೋ ? ವೈದಿಕರು ಜೇಲಿಗೆ ಹೋದರೆ ಅಪವಿತ್ರರಾಗುವರು " ಎಂದು ತಂದೆಯು ಮಗನಿಗೆ ಉಪದೇಶ ಮಾಡಿದನು.

" ನೀನು ಅಪವಿತ್ರನಾಗುವದಿದ್ದರೆ ನನ್ನ ಬೆಂಕಿಯನ್ನು ಹಿಡಿದ ಮೇಲೆ ನಿನ್ನ ಮನಬಂದಂತೆ ಮಾಡು " ಎಂದು ತಂದೆಯು ಸಿಟ್ಟಿನಿಂದ ಗದ್ದರಿಸಿದನು.

ತಂದೆಯ ಉಪದೇಶವು ಮಗನ ಮೇಲೆ ನಾಟಲಿಲ್ಲ. ಚಳವಳಿಯ ವಿಷಯಗಳನ್ನೇ ಆತ ತಂದೆಯ ಮುಂದೆ ಪ್ರಸ್ತಾಪಿಸಬಾರದೆಂದು ಮನದಲ್ಲಿ ನಿರ್ಧಾರ ಮಾಡಿದನು. ತನ್ನ ಉಪದೇಶವು ನಾಟಿರುವದೆಂದು ತಂದೆಯು ತಿಳಿದುಕೊಂಡು ಹರ್ಷದಲ್ಲಿದ್ದನು.

ಒಂದು ದಿನ ಮಟ ಮಟ ಮಧ್ಯಾಹ್ನದಲ್ಲಿ ತಾನು ನೆರೆಯೂರಿಗೆ ಹೋಗಿ ಎರಡು ದಿನಗಳಲ್ಲಿ ಬರುವೆನೆಂದು ಆತ ತಂದೆಗೆ ಹೇಳಿದನು.

" ಇಂತಹ ಉರಿಯುವ ಬಿಸಿಲಿನಲ್ಲಿ ಹಳ್ಳಿಗೆ ಹೋಗಬೇಡ. ಅಂತಹ ಮಹತ್ವದ ಕೆಲಸವಾದರೂ ಏನಿರುವದು? ತಲೆಯಲ್ಲಿ ಏನಾದರೊಂದು

ಹಾಕಿಕೊಂಡು ದಿನಾಲು ಒಂದಿಲ್ಲೊಂದು ನೆವ ಮುಂದೆ ಮಾಡುವಿ" ಎಂದು ಆತನ ತಂದೆ ನುಡಿದನು.

ತಂದೆಯ ಮಾತಿಗೆ ಮಾರುತ್ತರವನ್ನೀಯದೆ ಆತ ಕಲ್ಲುಕಂಬದಂತೆ ಸುಮ್ಮನೆ ಆತನೆದುರಿಗೆ ನಿಂತನು. ತಂದೆಯು ನಿರುಪಾಯನಾಗಿ,

" ಕೆಲಸ ಮುಗಿದ ಕೂಡಲೇ ಬಾ. ಮನೆಯಲ್ಲಿ ನಾನು ಮುದುಕ, ಚಿಕ್ಕಮಗು ಬೇರೆ, ಇವರನ್ನು ಸಂಭಾಳಿಸುವದು ನಿನ್ನ ಹೆಂಡತಿಗೆ ತ್ರಾಸ ವಾಗುವದು " ಎಂದು ನುಡಿದು ಬೀಳ್ಕೊಟ್ಟನು.

ಮಗನು ಸುಳ್ಳು ಬುರುಡೆಯನ್ನು ಉರುಳಿಸಿದ್ದು ತಂದೆಗೆ ಹೇಗೆ ಗೊತ್ತಾಗಬೇಕು. ತಾನು ಎಲ್ಲಿಗೆ ಬರಬೇಕೆಂಬುದನ್ನು ಮೊದಲೇ ಆತನು ಗೆಳೆಯರೊಂದಿಗೆ ಆಲೋಚನೆ ಮಾಡಿಕೊಂಡಿದ್ದ. ಹೆಂಡತಿಗೆ ಹೋಗಿ ಬರುವೆನೆಂದು ಹೇಳಿ ಮನೆಯಿಂದ ರಪಾಟಿ ಕಿತ್ತಿದನು. ಚಳವಳಿಯಲ್ಲಿ ಧುಮುಕಿದನು. ಹೆಂಡತಿಗೆ ಸುಳ್ಳು ಹೇಳಿದನು. ಮುದುಕ ತಂದೆ ಯನ್ನು ವಂಚಿಸಿದನು. ಮಾತೃಭೂಮಿಯ ಸೇವೆಗಾಗಿ ಕಂಕಣಬದ್ಧನಾಗಿ ಹೊರಟನು. ಚಳವಳಿಯನ್ನು ಮುಂದುವರಿಸಲು ಆತನು ಸಿದ್ದಾಪುರ ತಾಲೂಕಿನ ಒಂದು ಹಳ್ಳಿಗೆ ಹೋಗಿ ಮುಟ್ಟಿದನು.

ಇತ್ತ ತಂದೆಗೆ ಎರಡು ಮೂರು ದಿನಗಳಾದರೂ ಮಗನ ಸುಳುಪೇ ಹತ್ತಲಿಲ್ಲ. ಇಂದು ಬರಬಹುದು, ನಾಳೆ ಬರಬಹುದು, ಎಂದು ಚಾತ ಕಪಕ್ಷಿಯಂತೆ ದಾರೀ ನೋಡಿ ಬೇಸತ್ತು ಮನಸ್ಸು ತಲ್ಲಣಗೊಂಡಿತು. ಹೆಂಡ ತಿಯು ಗಂಡನ ಮಾರ್ಗ ನಿರೀಕ್ಷಣೆ ಮಾಡುತ್ತ ದಿನ ಹಾಕುತ್ತಿದ್ದಳು. ಒಂದು ದಿನ ಸಂಜೆಯ ಮುಂಚೆ ಆಕೆಯ ಮಗನು ಓಡುತ್ತ ಬಂದು ತೊದ ಲುನುಡಿಯಿಂದ ' ಅವ್ವಾ ಅಪ್ಪನು ಮದುಮಗನಾಗಿ ಇನ್ನೊಂದು ಲಗ್ನಕ್ಕೆ ಹೋಗಿರುವನೆಂದು ಜನರು ಮಾತನಾಡುತ್ತಿರುವರೆಂದು ನುಡಿ ದನು. ಬಾಲವಾಕ್ಯವು ವೇದವಾಕ್ಯವೆಂದು ಅವಳು ತಿಳಿದು ಮನಸ್ಸಿನಲ್ಲಿ ಕಸವಿಸಿಪಟ್ಟಳು. ಎಂಟು ದಿನಗಳಾದ ಮೇಲೆ ಆತನ ಗೆಳೆಯನೊಬ್ಬನು ಬಂದು ತನ್ನ ಹೆಸರು ಬದಲು ಮಾಡಿಕೊಂಡು ನಿಮ್ಮ ಮಗನು ಚಳವಳಿ ಯಲ್ಲಿ ಸೇರಿರುವನೆಂದು ಆತನ ತಂದೆಗೆ ಹೇಳಿದನು. ಬೇರೆ ಹೆಸರಿನಿಂದ

ಬೆಳೆದ ವೇದಾಂತಿಯು ಚಳವಳಿಯಲ್ಲಿ ಧುಮುಕಿದ ಮೇಲೆ ತನ್ನ ಹೆಸರಿಗೆ ಬೇರೆ ಬಣ್ಣ ಬಳೆದನು. ಚಳವಳಿಯಲ್ಲಿ ತನ್ನ ಪರಿಚಯ ಯಾರಿಗೂ ಹತ್ತ ಬಾರದೆಂದು ಆತನು ಮಂಡನಮಿಶ್ರನೆಂದು ನಾಮಧೇಯಯುಕ್ತನಾಗಿದ್ದನು. ಚಳವಳಿಯಲ್ಲಿ ಆತನ ಹೆಸರು ಕೇಳದವರು ಯಾರೂ ಇಲ್ಲ.

ಮಂಡನಮಿಶ್ರನು ನೋಡಲು ಚಲುವ; ಮೈಬಣ್ಣ ಕೆಂಪು; ಎತ್ತರ ನಿಲುವಿಕೆ. ಆ ತಾಲೂಕಿನ ಎಲ್ಲ ಹಳ್ಳಿಗರ ಬಾಯಿಯಲ್ಲಿ ಆತನು ಇರ ಹತ್ತಿದನು. ಕೆಲವು ಹಳ್ಳಿಗಳಲ್ಲಂತೂ ಮಂಡನಮಿಶ್ರನು ಊಟಕ್ಕೆ ಹೋಗ ದಿದ್ದ ಮನೆಗಳೇ ಉಳಿಯಲಿಲ್ಲ. ಪೋಲೀಸರ ಉಪಟಳವನ್ನು ತಪ್ಪಿಸಲಿಕ್ಕೆ ಗದ್ದೆಯಲ್ಲಿಯೋ ಇಲ್ಲವೆ ಹುಲ್ಲಿನ ಬಣವಿಯಲ್ಲಿಯೋ ಆತ ಮಲಗಿಕೊಳ್ಳುತ್ತಿದ್ದನು. ಆತನ ಗೆಳೆಯರು ಅಲ್ಲಿಯೇ ಸಮೀಪದ ಹಳ್ಳಿಗಳಲ್ಲಿ ಕೆಲಸ ಮಾಡುತ್ತಿದ್ದರು. ಮುಂದಿನ ಕಾರ್ಯದ ಬಗ್ಗೆ ಅವರೆಲ್ಲರೂ ಕೂಡಿ ಆಪ್ತಾಲೋಚನೆ ಮಾಡತಕ್ಕದ್ದು ರಾತ್ರಿಯಲ್ಲಿ. ಮುಂದಿನ ಕಾರ್ಯದ ರೂಪ ರೇಷೆಗಳನ್ನು ರಾತ್ರಿಯಲ್ಲಿಯೇ ನಿರ್ಧರಿಸಿಕೊಂಡು ತಮ್ಮ ತಮ್ಮ ಕೆಲಸಕ್ಕೆ ಹೋಗುತ್ತಿದ್ದರು. ಹಳ್ಳಿಯೊಳಗಿನ ಪ್ರತಿಯೊಂದು ಮನೆಯನ್ನು ಹೊಕ್ಕು ಪೋಲೀಸರು ಮಂಡನಮಿಶ್ರನ ಶೋಧ ನಡೆಸಿದ್ದರು. ಜಾಣಾಕ್ಷ ಮಂಡನಮಿಶ್ರನು ಅವರ ಕಣ್ಣಿಗೆ ಇಂಗು ಹಚ್ಚಿ ಪಾರಾಗದೆ ಬಿಡುತ್ತಿದ್ದಿಲ್ಲ. ಪೋಲೀಸರ ಎಲ್ಲ ಪ್ರಯತ್ನಗಳನ್ನು ವಿಫಲಗೊಳಿಸುತ್ತಿದ್ದನು.

ಮಂಡನಮಿಶ್ರನ ಕಾರ್ಯಕ್ಷೇತ್ರದ ಒಂದು ಹಳ್ಳಿಯಲ್ಲಿ ಅನಾಥ ಬಾಲವಿಧವೆಯಿದ್ದಳು. ಹಳ್ಳಿಗರು ಒಮ್ಮೊಮ್ಮೆ ಆತನಿಗೆ ಊಟವನ್ನು ಈ ಬಾಲವಿಧವೆ ಮಾಯಾದೇವಿಯ ಸಂಗಡ ಕಳುಹಿಸಿ ಕೊಡುತ್ತಿದ್ದರು. ಚಳವಳಿಗಾರರು ತಮ್ಮ ಕೆಲಸವನ್ನು ಮುಗಿಸಿಕೊಂಡು ಪೋಲೀಸರ ಕಣ್ಣಿಗೆ ಬೀಳಬಾರದೆಂದು ದರಿಯಲ್ಲಿ, ಕಂದಕದಲ್ಲಿ, ಇಲ್ಲವೆ ದಟ್ಟವಾದ ನಿರ್ಜನ ಅಡವಿಗಳಲ್ಲಿ ಅವಿತುಕೊಂಡು ಕುಳಿತುಕೊಳ್ಳುತ್ತಿದ್ದರು. ಚಳವಳಿಗಾರರು ಒತ್ತಟ್ಟಿಗೆ ಕೂಡಿಯೇ ಇರದೆ ಪ್ರತ್ಯೇಕವಾಗಿ ದಿಕ್ಕಿಗೊಬ್ಬರಂತೆ ಇರುತ್ತಿದ್ದರು.

ಹಳ್ಳಿಯಿಂದ ಹಳ್ಳಿಗೆ ಚಳವಳಿಯ ಪ್ರಚಾರ ಕಾರ್ಯಕ್ಕೆ ಹೋದಾಗ್ಗೆ ಒಮ್ಮೊಮ್ಮೆ ಎರಡು ದಿನಗಳಾದರೂ ಊಟ ದೊರೆಯದೆ ಲಂಘನ ಮಾಡ

ಬೇಕಾಗುತ್ತಿತ್ತು. ಒಂದು ಗೊತ್ತು ಪಡಿಸಿದ ಸ್ಥಳಕ್ಕೆ ಮಾಯಾದೇವಿಯು ದಿನಾಲು ಊಟವನ್ನು ಒಯ್ದು ಅವನಿದ್ದರೆ ಮಾತ್ರ ಕೊಟ್ಟು ಬರುತ್ತಿದ್ದಳು. ಅವನಿರದಿದ್ದರೆ ತುಸು ವೇಳೆ ಅವನ ಹಾದಿಯನ್ನು ಕಾಯ್ದು ಊಟವನ್ನು ಅವನು ಗೊತ್ತು ಪಡಿಸಿದ ಸ್ಥಳದಲ್ಲಿ ಬಚ್ಚಿಟ್ಟು ಬರುತ್ತಿದ್ದಳು. ದಿನಗಳು ಕಳೆದಂತೆ ಮಂಡನಮಿಶ್ರನಿಗೂ ಮಾಯೆಗೂ ದಟ್ಟ ಪರಿಚಯು ವಾಯಿತು. ಯೌವನದಲ್ಲಿ ಪುಟಿಯುವ ವಿಧವೆ ಮಾಯಾದೇವಿ. ಯೌವನದಲ್ಲಿ ಈಸುವ ಮಂಡನಮಿಶ್ರ, ಹೂ ಭೃಂಗವನ್ನು ಆಕರ್ಷಿಸುವಂತೆ, ಭೃಂಗವು ಕುಸುಮವನ್ನು ಸೆಳೆಯುವಂತೆ ಅವರೀರ್ವರ ಪರಿಚಯವು ಪರಸ್ಪರರನ್ನು ಸೆಳೆಯಹತ್ತಿತು. ಯೌವನದ ಪ್ರವಾಹಕ್ಕೆ ತನ್ನ ನಯಭಯ ತೀರಗಳನ್ನಾಗಿ ಮಾಡಿ ಆ ಮುಗ್ಧೆಯ ರತಿಮತಿಯು ಅವಳಿಗರಿಯದೆ ಪ್ರವಾಹದಲ್ಲಿ ಹರಿಯುತ್ತಿತ್ತು. ಆಕೆ ನಿರ್ಗತಿಕಳು, ಜೀವನದಲ್ಲಿಯ ಆಶೆ ಎಂದೋ ಕಮರಿ ಹೋಗಿತ್ತು. ಜೀವಧಾರಣ ಮಾಡಿಕೊಂಡಿದ್ದಳಷ್ಟೇ. ಅವಳನ್ನು ಮುಂದೆ ಕರೆದು ಅನುರಾಗದಿಂದ ನಾಲ್ಕು ಮಾತುಗಳನ್ನಾಡಿ ಸಂತೈಸುವ ಒಂದು ಜೀವವನ್ನಾದರೂ ಅವಳ ಜೀವನದ ಪದರಿನಲ್ಲಿ ದೇವರು ಹಾಕಿದಂತೆ ಕಾಣಲಿಲ್ಲ.

ಆ ನಿರ್ಗತಿಕಳ ಯೌವನದ ಚೆಲುವಿನ ರೂಪ ಡೊಂಕು ಬಾಲದ ನಾಯಿಗಳನ್ನು ಔತಣಕ್ಕೆ ಕರೆದಂತೆ. ಮಾಯಾದೇವಿಯ ರೂಪ ಲಾವಣ್ಯ ಮಂಡನಮಿಶ್ರನ ಮನಸ್ಸು ಸೆಳೆಯಿತು. ಅವರ ಪರಿಚಯ ಅನುರಾಗದಲ್ಲಿ ಪರಿಣಮಿಸಿತು.

ಒಂದು ದಿನ ರಾತ್ರಿ ಒಂಬತ್ತು ಗಂಟೆ. ಆಕಾಶವು ಮೋಡಗಳಿಂದ ಮುಚ್ಚಿ ಹೋಗಿತ್ತು. ಕತ್ತಲೆಯು ಜಗತ್ತನ್ನೇ ನುಂಗಿದಂತೆ ಕಾಣುತ್ತಿತ್ತು. ಇಂತಹ ಕತ್ತಲೆಯಲ್ಲಿ ಮಾಯಾದೇವಿಯು ಮಂಡನಮಿಶ್ರನಿಗೆ ಊಟವನ್ನು ತೆಗೆದುಕೊಂಡು ಬಂದಳು. ಆತನಾದರೂ ಊಟದ ದಾರಿಯನ್ನೇ ನೋಡುತ್ತ ಗದ್ದೆಯಲ್ಲಿಯ ಹುಲ್ಲು ಬಣವಿಯ ಮೇಲೆ ಆಕಾಶದಲ್ಲಿ ಪರಿವರ್ತನೆ ಹೊಂದುತ್ತಿರುವ ಮೋಡಗಳ ಆಕಾರ-ವಿಕಾರಗಳನ್ನು ನೋಡುತ್ತ ಮಲಗಿಕೊಂಡಿದ್ದನು. ಗಿರಿಗಳಂತೆ, ಕಂದರಗಳಂತೆ, ದೊಡ್ಡ ದೊಡ್ಡ ವಿಶಾಲವಾದ ಪಟ್ಟಣಗಳಂತೆ, ಈ ಅಕರಾಳ ವಿಕರಾಳ ರೂಪವನ್ನು ತಾಳಿ

ತಾಂಡವ ಮಾಡುತ್ತಿರುವ ಭೂಮಿಗಳಂತೆ ಮೋಡಗಳು ಪರಿವರ್ತನೆಯಾಗು ವದು ಕಂಡು ಸೋಜಿಗವೆನಿಸಿತು. ಆ ಕಾರ್ಮೋಡಗಳ ಅಂಚಿಯ ಶುಭ್ರದಲ್ಲಿ ಮಾಯಾದೇವಿಯು ಬಳುಕುತ್ತ ನಾಚುತ್ತ ಹೋಗುತ್ತಿರುವದನ್ನೂ ತಾನು ಮತ್ತೊಂದು ಮೋಡದಿಂದ ಹೊರಹೊರಟು ಅವಳ ಹಿಂದೆ ಓಡುತ್ತಿರುವದನ್ನೂ ಮುಂಡನಮಿಶ್ರನು ಕಂಡನು. ಓಡುತ್ತ ಓಡುತ್ತ ಹೋಗಿ ಅವಳನ್ನು ಹಿಡಿದುಕೊಂಡು ಮೋಡದಲ್ಲಿಯ ಒಂದು ಕಪ್ಪು ದೊಡ್ಡ ಸರೋವರಕ್ಕೆ ಹೋಗಿ ತಾನು ಆಕೆಯನ್ನು ಸರೋವರದಲ್ಲಿ ನೂಕಿದಂತೆಯೂ, ಮೊಸಳೆಯು ತನ್ನ ಕಾಲನ್ನು ಹಿಡಿದು ಕೆಳಗೆ ಜಗ್ಗುತ್ತಿರುವದು ಬಂದು ತನ್ನನ್ನು ಮೇಲಕ್ಕೆ ಜಗ್ಗಿಂದು ಆ ಕರೆದಂತೆಯೂ ಆತನಿಗೆ ಭಾಸವಾಯಿತು. ದಂಡೆಯ ಮೇಲಿನ ಇನ್ನೊಂದು ಮೊಸಳೆಯು ತನ್ನ ಕಾಲನ್ನು ಹಿಡಿಯಲು ಬರುತ್ತಿರುವದನ್ನು ಕಂಡು ಮಾಯಾದೇವಿಯನ್ನು ಸರೋವರದಲ್ಲಿಯ ನಕ್ರದ ಬಾಯಿಯಲ್ಲಿ ಬಿಟ್ಟು ಬದುಕುವ ಆಶೆಯಿಂದ ತಾನು ಓಡಿಹೋದಪನಂತೆ ಕಂಡಿತು. ಹೀಗೆ ಮೋಡಗಳಲ್ಲಿಯ ಚಿತ್ರ-ವಿಚಿತ್ರಗಳನ್ನು ನೋಡುತ್ತಿದ್ದಾಗ್ಗೆ ಯಾರೋ ಬಂದಂತೆ ಸಪ್ಪಳವಾ-ಯಿತು. ಎಲ್ಲ ಚಿತ್ರಗಳು ಮಾಯವಾದವು. ಊಟ ತಂದ ಮಾಯಾದೇವಿ ಎದುರಿಗೆ ನಿಂತಿದ್ದು ಕಂಡನು.

"ಇಷ್ಟು ಕಾಳ ರಾತ್ರಿಯಲ್ಲಿ ಬರಬಾರದಾಗಿತ್ತು. ಸಮೀಪದ ಗದ್ದೆಗಳಲ್ಲಿಯಾದರೂ ಜನರ ಸುಳಿವೇ ಇರುವದಿಲ್ಲ. ಹಾದಿಯಲ್ಲಿ ಹುಳಹುಪ್ಪಡಿಗಳ ಹರಿದಾಟ, ಕಾಡು ಮೃಗಗಳ ಹೆದರಿಕೆ" ಎಂದು ಮುಂಡನಮಿಶ್ರನು ನುಡಿದನು.

ಅವನ ಮಾತುಗಳನ್ನು ಕೇಳಿ ಅವಳೇನೂ ಉತ್ತರ ಕೊಡಲಿಲ್ಲ. ಮುಂಡನಮಿಶ್ರನು ಅವಳ ಕೈಯಲ್ಲಿಯ ಡಬ್ಬಿಯನ್ನು ತೆಗೆದುಕೊಂಡು,

"ಡಬ್ಬಿಯನ್ನು ನಾಳೆ ಮುಂಜಾವಿನಲ್ಲಿ ತೆಗೆದುಕೊಂಡು ಹೋಗು. ಇಷ್ಟು ರಾತ್ರಿಯಲ್ಲಿ ನೀನು ತಿರುಗಿ ಹೋಗುವದು ಬೇಡ" ಎಂದು ಹೇಳಿದನು.

ಮಾಯಾದೇವಿ ಇಂದು ದುಡಿದು ದುಡಿದು ಸಣ್ಣಾಗಿ ಹೋಗಿದ್ದಳು. ಯಾವಾಗ್ಗೆ ನೆಲ ಕಾಣುವೆನೋ ಎಂದು ಅನಿಸಿತ್ತು. ಕತ್ತಲೆಯಲ್ಲಿ ಹೇಗೋ

ಎಡುವುತ್ತ ಮುಗ್ಗರಿಸುತ್ತ ಬಂದಿದ್ದಳು. ಅವಳಿಗಾದರೂ ಅಷ್ಟೇಬೇಕಾಗಿತ್ತು. ಕತ್ತಲೆಯಲ್ಲಿಯೇ ಲಗುಬಗೆಯಿಂದ ಊಟವನ್ನು ಮುಗಿಸಿದನು. ಅಲ್ಲಿಯೇ ಹುಲ್ಲಿನ ಮೇಲೆ ಅಡ್ಡಾಗಿದ್ದ ಮಾಯಾದೇವಿ ಆತನ ಊಟ ಮುಗಿಯುವ ಷ್ಟರಲ್ಲಿಯೇ ಗಾಢ ನಿದ್ರೆ ಹೋದಳು. ಅವಳು ನಿದ್ರೆ ಹೋದದ್ದು ಕಂಡು ' ಪಾಪ ! ಹುಡುಗಿ ! ಕಷ್ಟಜೀವಿ ' ಎಂದು ಮನದಲ್ಲಿ ಅಂದುಕೊಂಡನು. ಅಷ್ಟರಲ್ಲಿಯೇ ಮಳೆಯ ಹನಿಗಳುದುರಹತ್ತಿದವು. ಸಮೀಪದ ಹಳ್ಳಿಯೆಂದರೆ ಅಲ್ಲಿಂದ ಎರಡು ಮೈಲು. ಅಷ್ಟು ದೂರ ಅವಳನ್ನು ಹೇಗೆ ಕರೆದು ಕೊಂಡು ಹೋಗಬೇಕೆಂಬ ವಿಚಾರವನ್ನು ಮಾಡಿ ಕೈಬಿಟ್ಟು ಬಿಟ್ಟನು.

ಮಳೆಯ ಹನಿಗಳು ಟಪಟಪನೆ ಬೀಳಹತ್ತಿದವು. ಬಣವಿಯಲ್ಲಿಯ ಹುಲ್ಲನ್ನು ತೆಗೆದು ಇಬ್ಬರಿಗೂ ಬರುವ ಹಾಗೆ ಒಂದು ಹೊದರನ್ನು ಮಾಡಿ ಮಾಯಾದೇವಿಯನ್ನು ಎಬ್ಬಿಸಿದನು. ದಣಿದ ನಿದ್ರೆ; ಬಹಳೇ ಗಾಢವಾಗಿ ಹತ್ತಿತ್ತು. ಮಿಂಚಿತು. ಬೆಳಕಿನಲ್ಲಿ ಆ ಬಾಲವಿಧವೆಯ ತಲೆಯನ್ನು ಮುಂಡನ ಮಾಡಿದ್ದು ನೋಡಿ ಹೃದಯ ಕರಗಿ ನೀರಾಯಿತು. ಇದಕ್ಕೂ ಮೊದಲು ಅವಳನ್ನು ಎಷ್ಟೋ ಸಾರೆ ನೋಡಿದ್ದ. ಬಾಲವಿಧವೆ. ನಿರ್ಗತಿಕಳು ಎಂಬುದಿಷ್ಟೇ ಗೊತ್ತು. ಅವಳನ್ನು ಮೈ ತಟ್ಟಿ ಎಬ್ಬಿಸಿದ. ಅವಳಿಗೆ ಎಚ್ಚರವೇ ಆಗಲಿಲ್ಲ. ಅಲ್ಲಿಯೇ ಬಿಟ್ಟರೆ ಅವಳು ತೋಯಿಸಿಕೊಳ್ಳುವಳೆಂಬ ಹೆದರಿಕೆ ಆತನಿಗೆ. ಎಬ್ಬಿಸಲು ಅವಳ ಮೈಯನ್ನು ಮತ್ತೆ ತಟ್ಟಿತಟ್ಟಿ ಅಲ್ಲಾಡಿಸಿದನು. ಅರೆನಿದ್ರೆಯಲ್ಲಿಯೇ ಕಣ್ಣು ತೆರೆದು ನೋಡಿ ಮುಚ್ಚಿದಳು.

ಮಳೆಯು ಸುರಿಯಹತ್ತಿತು. ಅವಳು ಎಚ್ಚತ್ತಳು. ಅವಳನ್ನು ಕರೆದುಕೊಂಡು ಹೋಗಿ ಬಣವಿಯ ಹೊದರಿನಲ್ಲಿ ಮಲಗಿಸಿದನು. ತಾನು ಅಲ್ಲಿಯೇ ಸಮೀಪದಲ್ಲಿ ಮಲಗಿಕೊಂಡು ಇಬ್ಬರ ಮೇಲೆಯೂ ಮಳೆಯು ತಟ್ಟದಂತೆ ಹುಲ್ಲು ಹೊಚ್ಚಿ ಬಿಟ್ಟನು. ಮುಂಡನಮಿಶ್ರನಿಗೆ ನಿದ್ರೆ ಬರಲಿಲ್ಲ. ಅವಳು ನಿದ್ರೆಯಲ್ಲಿ ಅವನ ತೋಳಿನ ಮೇಲೆ ತಲೆಯನ್ನಿಟ್ಟಳು.

ಮುಂಡನಮಿಶ್ರನು ಮುಂಡೆಯಲ್ಲಿ ಮಿಶ್ರನಾದನು.

* * * *

ಆ ಘಟನೆ ಪ್ರೇಮದಲ್ಲಿ ಪರಿವರ್ತನೆಯಾಯಿತು. ಆ ವಿಧವೆಗೆ ಮದುವೆಯ ಆಶ್ವಾಸನ ಕೊಟ್ಟನು. ಆ ಮುಗ್ಧೆ ವೇದಾಂತಿಗಳ ಅಂತ ವಿಲ್ಲದ ಮಾತಿನಲ್ಲಿ ನಂಬಿಕೆಯಿಟ್ಟು ನಲಿದಾಡಿ ಜೀವಕ್ಕೆ ಸುಖ ಹಚ್ಚಿ ಕೊಂಡಳು. ಜೀವನದಲ್ಲಿ ಬದುಕಿ ಬಾಳಬೇಕೆಂಬ ಆಶೆ ಪ್ರಬಲವಾಗಿ ಬೆಳೆದು ಅವಳ ಕಣ್ಣುಗಳಲ್ಲಿಯೂ, ಮೊಗದಲ್ಲಿಯೂ, ಕಾಂತಿಯನ್ನು ತಂದುಕೊಟ್ಟಿತು. ಈ ಆಶೆ ಅವಳ ಜೀವನಕ್ಕೆ ಪುಟ ಕೊಟ್ಟಿತು. ಮಾಯಾ ದೇವಿ ಯಾಕೋ ದಷ್ಟಪುಷ್ಟಳಾಗಿರುವಳೆಂದು ಅವಳ ಹಳ್ಳಿಯ ಜನರು ಆಡಿ ಕೊಳ್ಳಹತ್ತಿದರು. ಮಂಡನಮಿಶ್ರನು ತನ್ನ ಗಂಡನಾಗುವನೆಂದು ದಿನಾಲು ಅವಳು ವಿಚಾರವಾಹಿನಿಯಲ್ಲಿ ತೇಲುತ್ತಿದ್ದಳು. ಈ ಚಳವಳಿಯು ಮುಗಿದ ಕೂಡಲೆ ನಿನ್ನನ್ನು ಲಗ್ನವಾಗುವೆನೆಂದು ಮೇಲಿಂದಮೇಲೆ ಮಂಡನ ಮಿಶ್ರನು ಮಾಯಾದೇವಿಗೆ ಹೇಳುತ್ತಿದ್ದನು.

ಆರು ತಿಂಗಳಾದರೂ ಮಂಡನಮಿಶ್ರನು ಮನೆಯನ್ನು ಕಾಣಲಿಲ್ಲ. ಮನೆಯನ್ನು ಮರೆತ; ಚಳವಳಿಯನ್ನು ಮರೆತ. ಆದರೆ ಮಾಯೆಯಲ್ಲಿ ಮಾತ್ರ ಬೆರೆತ.

ಇತ್ತ ಆತನ ಹೆಂಡತಿಯೂ, ವೃದ್ಧಾಪ್ಯವನ್ನು ಕಂಡ ತಂದೆಯೂ ಮಿಡುಕುತ್ತ ಜೀವನವನ್ನು ಸಾಗಿಸುತ್ತಿದ್ದರು. ಮನೆಯಲ್ಲಿ ತಂದು ಹಾಕುವವರು, ಅವರ ಯೋಗಕ್ಷೇಮವನ್ನು ಕೇಳುವವರು ಯಾರೂ ಇಲ್ಲ. ತಂದೆಯು ಚಳವಳಿಗಾರರ ಮೇಲ ವಪಟ್ಕಾರ ಮಾಡಹತ್ತಿದನು. ಹೆಂಡ ತಿಯು ಗಂಡನ ಬರವನ್ನು ಜಾತಕಪಕ್ಷಿಯಂತೆ ನಿರೀಕ್ಷಿಸುತ್ತಿದ್ದಳು. ತಂದೆಯು ಚಳವಳಿಗಾರರನ್ನು ಕಂಡು ಮಗನ ವಿಷಯವಾಗಿ ವಿಚಾರ ಮಾಡಿದನು. ಆದರೆ ಅವನಿಗೆ ಮಗನ ಒಗ್ಗೆ ಹೆಚ್ಚಿನ ಸಂಗತಿಯೇನೂ ದೊರೆಯಲಿಲ್ಲ.

ಚಳವಳಿಯು ಎಂದು ಮುಗಿಯುವದೆಂದು ಮಾಯಾದೇವಿಯು ಮಂಡನಮಿಶ್ರನಿಗೆ ಮೇಲಿಂದ ಮೇಲೆ ಕೇಳುತ್ತಿದ್ದಳು. ಆತನೇ ತನ್ನ ಸಕಲ ದೈವವೆಂದು ತಿಳಿದುಕೊಂಡ ಅವಳಿಗೆ ಆತನು ಏನು ಹೇಳಿದರೂ ನಂಬುವಳು. ಹೀಗೆ ದಿನಗಳು ಉರುಳಹತ್ತಿದವು. ಆ ತಾಲೂಕಿನಲ್ಲಿ ೫-೬ ಮನೆಗಳಿಗೆ ಒಂದು ಹಳ್ಳಿ. ಸುತ್ತಲಿನ ಹಳ್ಳಿಗಳಲ್ಲಿ ಮಂಡನಮಿಶ್ರನ

ಹಾಗೂ ಮಾಯಾದೇವಿಯ ಸುದ್ದಿಯು ಬೀದಿಯಲ್ಲಿಯ ಹರಟೆಯ ಮಾತಾಯಿತು. ಅವಳೆದುರಿಗೆ ಯಾರೂ ಮಾತನಾಡಲಾರರು. ಆದರೆ ಅವಳ ಹಿಂದೆ ಟೀಕೆಯ ಬಾಣಗಳನ್ನು ಬಿಟ್ಟು ನಕ್ಕು ಆನಂದ ಪಡುತ್ತಿದ್ದರು.

ಒಮ್ಮೆ ಎರಡು ದಿನಗಳಾದರೂ ಮಾಯೆಗೆ ಮಂಡನಮಿಶ್ರನ ಭೆಟ್ಟಿಯಾಗಲಿಲ್ಲ. ಅವಳು ಹಳ್ಳಿಹಳ್ಳಿಗೆ ಹೋಗಿ ಆತನನ್ನು ಹುಡುಕಿ ಬೇಜಾರ ಪಟ್ಟಳು. ಆಕೆಗೆ ಹೇಳದೆ ಮಂಡನಮಿಶ್ರನು ತನ್ನ ಊರಿಗೆ ಹೊರಟು ಬಂದಿದ್ದನು. ಆತನು ಊರಿಗೆ ಹೋದದ್ದು ಆತನ ಎಲ್ಲ ಸಂಗಡಿಗರಿಗೆ ಗೊತ್ತಿತ್ತು; ಅದನ್ನು ಅವರು ಯಾರ ಮುಂದೆಯೂ ಹೇಳಿರಲಿಲ್ಲ. ಅವರೆಲ್ಲರಿಗೂ ಪೋಲೀಸರ ಹೆದರಿಕೆ. ಯಾವ ಕಾಲಕ್ಕೆ ಅವರು ತಮ್ಮ ಸುಳವನ್ನು ಗೊತ್ತು ಹಿಡಿದು ಬಂಧಿಸುವರೋ ಎಂದು ಚಳವಳಿಗಾರರು ತಮ್ಮ ಚಟುವಟಿಕೆಗಳನ್ನು ಅತಿ ಗೌಪ್ಯದಿಂದ ನಡೆಯಿಸುತ್ತಿದ್ದರು.

ತಂದೆಯು ಮಗನನ್ನು ನೋಡಿ ಆನಂದ ಪಟ್ಟನು. ಹೆಂಡತಿಯು ಗಂಡನು ತಿರುಗಿ ಬಂದನೆಂದು ದೇವರಿಗೆ ಕೈಮುಗಿದು ನಂದಾದೀಪವನ್ನಿಟ್ಟಳು. ಊರ ಹನುಮಪ್ಪನಿಗೆ ಕ್ಷೀರಾಭಿಷೇಕವನ್ನು ಮಾಡಿಸಿ ಕರಿಗಡಬು ಹೆತ್ತುಪ್ಪ ನೈವೇದ್ಯವನ್ನು ಕೊಡಿಸಿದಳು. ಅವನು ಮನೆಯಲ್ಲಿ ಒಂದೆರಡು ದಿನಗಳನ್ನು ಕಳೆದನು. ಪೋಲೀಸರು ತನ್ನನ್ನು ಎಲ್ಲಿ ಬಂಧಿಸುವರೋ ಎಂಬ ಸಂಶಯದಿಂದ ಆತ ಹಗಲಿನಲ್ಲಿ ಕನಕಪ್ಪಡಿಯಂತೆ ಮನೆಯನ್ನು ಸೇರಿ ರಾತ್ರಿಯಲ್ಲಿ ಹೊರಬೀಳುತ್ತಿದ್ದನು. ಪೋಲೀಸರು ಮೇಲಿಂದ ಮೇಲೆ ತಂದೆಯನ್ನು ಕರೆಯಿಸಿ ಮಗನ ವಿಷಯವಾಗಿ ಕೇಳುತ್ತಿದ್ದರು. ಆತನೇ ಗೊಳೋ ಎಂದು ಅಳುತ್ತಿರುವದನ್ನು ಕಂಡು ಕನಿಕರಪಟ್ಟು ಆತನೊಡನೆ ಮಗನ ಬಗ್ಗೆ ಹೆಚ್ಚಾಗಿ ಚಿಕಿತ್ಸೆ ಮಾಡದೆ ಪೋಲೀಸರು ಬಿಟ್ಟುಬಿಡುತ್ತಿದ್ದರು.

ಅಲ್ಲಿಯ ಚಳವಳಿಗಾರರಿಗೆ ಹಣದ ಕೊರತೆಯಿದ್ದುದರಿಂದ ತಾನು ಇಲ್ಲಿಂದ ಹಣ ತೆಗೆದುಕೊಂಡು ಹೋಗಿ ಅವರಿಗೆ ಮುಟ್ಟಿಸಿ ಬರಬೇಕಾಗಿದೆಯೆಂದು ತಂದೆಗೆ ಗುಳಿಗೆ ಕೊಟ್ಟನು. ಹಣವನ್ನು ಮುಟ್ಟಿಸಿ ಎರಡು ದಿನಗಳಲ್ಲಿ ತಪ್ಪದೆ ಹಿಂತಿರುಗುವೆನೆಂದು ಮಂಡನಮಿಶ್ರನು ತಂದೆಗೂ ಹೆಂಡತಿಗೂ ಹೇಳಿ ಸಮಾಧಾನ ಪಡಿಸಿದನು. ತಂದೆ ಧೈರ್ಯಬಿಟ್ಟನು. ಹೆಂಡತಿಯು ಕಾಲನ್ನು ಕಳೆದುಕೊಂಡಳು. ಆತನ ತಲೆಯಲ್ಲಿ ಮಾಯಾ

ದೇವಿಯೋ, ಮಾಯಾದೇವಿ. ಚಳವಳಿಯು ಸಾಂಪ್ರತಕ್ಕೆ ಒಂದು ನೆವ ವಾಗಿತ್ತು.

ಮಂಡನಮಿಶ್ರನು ತಿರುಗಿ ತನ್ನ ಕಾರ್ಯಕ್ಷೇತ್ರದ ಹಳ್ಳಿಗೆ ಅಂಗವಸ್ತ್ರಳನ್ನು ನೋಡಲು ಬಂದನು. ಅತ್ತಿತ್ತ ಚಳವಳಿಯ ಚಟುವಟಿಕೆಗಳನ್ನು ಮಾಡಿದಂತೆ ತೋರಿಸಿದನು. ಜನರು ಇವನು ದೇಶಪ್ರೇಮದಿಂದ ಚಳವಳಿಯಲ್ಲಿ ಪೂರ್ಣವಾಗಿ ಧುಮುಕಿರುವನೆಂದು ತಿಳಿದುಕೊಂಡರು. ಆತನು ಅಂಗವಸ್ತ್ರ ಮಾಯಾದೇವಿಯ ತನ್ನ ಪ್ರೇಮದ ಸಲುವಾಗಿ ತಿರುಗಿ ಬಂದಿರುವನೆಂದು ಜನರಿಗೆ ಗೊತ್ತಾಗಲಿಲ್ಲ.

ಒಂದು ದಿನ ರಾತ್ರಿ ಗದ್ದೆಯ ಹತ್ತರದಲ್ಲಿದ್ದ ಮಾವಿನ ತೋಪಿನಲ್ಲಿ ಮಂಡನಮಿಶ್ರನು ಮಾಯಾದೇವಿಯನ್ನು ಭೆಟ್ಟಿಯಾದನು. ನೀಲಾಂಬರದಲ್ಲಿ ಚಂದ್ರನು ಅವರಿಬ್ಬರನ್ನು ನೋಡಿ ನಗುತ್ತ ಹೊರಟಿದ್ದನು. ರಾಸಕೇಳಿಯನ್ನು ಮಾಯಾದೇವಿಗೆ ಬಣ್ಣಿಸಿ ಹೇಳುತ್ತ ಮತ್ತನಾಗಿ ಮಂಡನಮಿಶ್ರನು ರತಿಯ ರಸವನ್ನು ಕುಡಿದನು. ಲಗ್ನವಾಗುವೆನೆಂದು ಅವಳಿಗೆ ವಚನ ಕೊಟ್ಟು ಮಾಯಾದೇವಿಯನ್ನು ಗಾಳಿಪಟಮಾಡಿ ಆನಂದದಲ್ಲಿ ಹಾರಿಸಿಬಿಟ್ಟನು. ವಚನದಲ್ಲಿ ತನ್ನ ದರಿದ್ರತನವನ್ನು ತೋರಿಸಲಿಲ್ಲ. ಆತನ ವಚನದ ಮಾತು ಕೇಳಿ ಕಿವಿಯಲ್ಲಿ ಗಾಳಿಹೊಕ್ಕ ಕರುವಿನಂತೆ ಆನಂದದಿಂದ ಕುಣಿದಾಡಿದಳು.

ಹೀಗೆ ಒಂದು ವಾರ ಕಳೆಯಿತು. ಒಂದು ದಿನ ಮಂಡನಮಿಶ್ರನು ತನ್ನ ವೇಷವನ್ನು ಬದಲುಮಾಡಿಕೊಂಡು ಬರುತ್ತಿದ್ದಾಗ ಜವಾನರು ಆತನನ್ನು ಬಂಧಿಸಿದರು. ಆತನ ಬಂಧನದ ಸುದ್ದಿ ಎಲ್ಲ ಕಡೆಗೂ ಹಬ್ಬಿತು. ಆತನ ಬಂಧನ ಸುದ್ದಿಯನ್ನು ಕೇಳಿ ಮಾಯಾದೇವಿಯು ನೆಲದಲ್ಲಿ ಕುಸಿಬಿದ್ದಳು. ಅವಳಿಗೆ ಧೈರ್ಯ ಕೊಡುವವರು ಯಾರೂ ಇಲ್ಲ. ಮಂಡನಮಿಶ್ರನನ್ನು ಬಂಧಿಸಿ ಶಿದ್ದಾಪುರಕ್ಕೆ ತೆಗೆದುಕೊಂಡು ಹೋಗಿದ್ದರು. ಹಾಗೇ ದುಃಖಿಸುತ್ತ ಕಚೇರಿಗೆ ಬಂದು ಪ್ರಯಾಸಪಟ್ಟು ಅವಳು ಮಂಡನಮಿಶ್ರನನ್ನು ಭೆಟ್ಟಿಯಾದಳು.

ಬಂಧನದಿಂದ ಮಂಡನಮಿಶ್ರನು ದೇಶಭಕ್ತನಾದನು. ಅಹನನ್ನು ಭೆಟ್ಟಿಯಾಗಲು ಜನರು ನಾ ಮುಂದೆ ನೀ ಮುಂದೆ ಎಂದು ಬರಹತ್ತಿದರು.

ಮುಗ್ಧ ಮಾಯಾದೇವಿ ಕಣ್ಣೀರು ಹಾಕುತ್ತ ಮಂಡನಮಿಶ್ರನ ಬಂಧನದ ಕೋಣೆಯ ಎದುರಿಗೆ ತಾಸೆರಡು ತಾಸು ನಿಂತಳು. ಮಂಡನಮಿಶ್ರನು ಕೋಣೆಯ ಸಲಾಕೆಯೊಳಗಿಂದ ಮಾಯಾದೇವಿಯನ್ನು ಕಂಡು ಅವಳನ್ನು ಕರೆದುಕೊಂಡು ಬರಲು ಒಬ್ಬ ಜವಾನನಿಗೆ ಹೇಳಿದನು. ಹಿಂದೊಮ್ಮೆ ಮುಂದೊಮ್ಮೆ ನೋಡುತ್ತ ಅಂಜಿದ ಜಿಗರೆಯಂತೆ ಸುತ್ತಲೂ ನೋಡುತ್ತ ಮಂಡನಮಿಶ್ರನ ಕೋಣೆಯ ಬಳಿಗೆ ಬಂದು ಸಲಾಕೆಯ ಹೊರಗೆ ಮೋಗ ತಗ್ಗಿಸಿಕೊಂಡು ನಿಂತಳು. ಮಂಡನಮಿಶ್ರನ ಮೊಗವನ್ನು ನೋಡಿ ದುಃಖವು ಒತ್ತರಿಸಿ ಬಂದಿತು. ಧೈರ್ಯವನ್ನು ತೆಗೆದುಕೊಂಡು ಮಾಯಾದೇವಿಯು,

"ನೀವು ನನ್ನ ಜೀವನದ ಊರುಗೋಲು. ನೀವು ಹೋದರೆ ನನಗೆ ಕುರುಡನ ಕೈಯಲ್ಲಿಯ ಕೋಲು ಹೋದಂತೆ. ನನ್ನ ಜೀವನದ ಆಶೆ ನೀವು. ಜಗತ್ತನ್ನು ಅರಿಯದ ನನಗೆ ಬದುಕಿ ಬಾಳಬೇಕೆಂಬುದನ್ನು ಕಲಿಸಿದಿರಿ. ನೀವು ನನ್ನ ಜೀವನಾಧಾರವೆಂದು ತಿಳಿದುಕೊಂಡಿರುವೆನು. ನೀವು ನನ್ನ ಕೈ ಮಾತ್ರ ಬಿಡಬಾರದು. ನಾನು ಎರಡು-ಮೂರು ತಿಂಗಳ ಗರ್ಭಿಣಿಯಿರುವಂತೆ ಕಾಣುವದು."

ಎಂದು ದೀನಸ್ವರದಿಂದ ನುಡಿದಳು.

"ಚಿಂತಿಸಬೇಡ. ಜೇಲಿನಿಂದ ತಿರುಗಿ ಬಂದಕೂಡಲೇ ನಿನ್ನನ್ನು ಕರೆದುಕೊಂಡು ನಮ್ಮೂರಿಗೆ ಹೋಗುವೆನು. ನಾನು ಬರುವವರೆಗೆ ಹೇಗಾದರೂ ಕಾಲಹಾಕು" ಎಂದು ಮಂಡನಮಿಶ್ರನು ಮಾಯಾದೇವಿಗೆ ಹೇಳಿದನು.

ಗರ್ಭಿಣಿಯಾಗಿರುವೆನೆಂದು ಹೇಳಿದ ಮಾಯಾದೇವಿಯ ಮಾತುಕೇಳಿ ಆಕಾಶ ಕಳಚಿ ಬಿದ್ದವರಂತೆ ಮಂಡನಮಿಶ್ರನು ಗಾಬರಿಯಾದನು. ಇವಳು ತನ್ನ ಕೊರಳಿಗೆಲ್ಲಿ ಬೀಳುವಳೋ ಎಂದು ಹೆದರಿದನು. ವಿದ್ವಾಂಸನಾದರೂ ವಿಧ್ವಂಸನಾಗದೆ ಬಿಡಲಿಲ್ಲ ಮಂಡನಮಿಶ್ರ. ಮಂಡನಮಿಶ್ರನ ಹಿತವಚನವನ್ನು ಕೇಳಿ ಮಾಯಾದೇವಿ ಆನಂದಪಟ್ಟು ಹಿಂತಿರುಗಿದಳು. ಜೇಲಿನಿಂದ ಬಿಟ್ಟ ಕೂಡಲೇ ತನಗೆ ಭೆಟ್ಟಿಯಾಗಬೇಕೆಂದು ಮಂಡನಮಿಶ್ರನಿಗೆ ಮಾಯಾದೇವಿ ಹೇಳಿಕೊಂಡಳು.

ಅಷ್ಟರಲ್ಲಿ ಪೋಲೀಸರ ವ್ಯಾನು ಬಂದಿತು. ಮಂಡನಮಿಶ್ರನನ್ನು ಕರೆದುಕೊಂಡು ಹೋಯಿತು. ಒಳಗೆ ಕುಳಿತ ಮಂಡನಮಿಶ್ರನು ಜಯ ಜಯಕಾರ ಮಾಡಿದನು. ಜಯಜಯಕಾರವನ್ನು ಕೇಳಿ ಬೀದಿಯಲ್ಲಿಯ ನಾಯಿಗಳು ಮಂಡನಮಿಶ್ರನ ದೇಶಭಕ್ತಿಯನ್ನು ಕಂಡು ವ್ಯಾನಿನ ಬೆನ್ನು ಹತ್ತಿ ಬೊಗಳಹತ್ತಿದವು.

ಮಂಡನಮಿಶ್ರನು ಹೋದನು; ಮಾಯಾದೇವಿ ಹಿಂತಿರುಗಿದಳು.

* * * *

ಮಂಡನಮಿಶ್ರನಿಗೆ ಐದು ತಿಂಗಳ ಶಿಕ್ಷೆಯಾಯಿತು. ಇತ್ತ ಹಳ್ಳಿಯಲ್ಲಿ ಮಾಯಾದೇವಿಯನ್ನು ಕೇಳುವವರು ಯಾರೂ ಇಲ್ಲ. ಅವಳನ್ನು ನೋಡಿದರೆ ಎಲ್ಲರೂ ಮೂಗು ಮುರಿದು ಹೋಗುವವರೇ ಹೊರತು ಮುಂದೆ ಕರೆದು ಮಾತನಾಡಿಸುವವರು ಯಾರೂ ಇಲ್ಲ. ಅಲ್ಲಿಯ ಜೀವನವು ಸಹಿಸದಾಯಿತು. ತನ್ನ ಬಗ್ಗೆ ಒಂದು ತರಹದ ತಿರಸ್ಕಾರ ಭಾವನೆ ಹುಟ್ಟಿರುವದೆಂದು ಅವಳಿಗೆ ಅರಿವಾಗಹತ್ತಿತು.

ಮಂಡನಮಿಶ್ರನು ಜೇಲಿಗೆ ಹೋಗಿರುವನೆಂದು ಕೇಳಿ ಆತನ ತಂದೆ ಮಗನು ವೈದಿಕ ಧರ್ಮವನ್ನು ತ್ಯಜಿಸಿ ಮ್ಲೇಂಛರ ಅನ್ನ ಉಂಡು ಜಾತಿ ಭ್ರಷ್ಟನಾದನೆಂದೂ ತನ್ನ ಮನೆತನಕ್ಕೆ ಕಪ್ಪು ಬಳಿದನೆಂದೂ ಕೊರಗಹತ್ತಿದನು. ಇಂತಹ ಜಾತಿಭ್ರಷ್ಟ ಮಗನಿರುವದಕ್ಕಿಂತ ಅಪುತ್ರನಾಗಿದ್ದರೆ ಲೇಸೆಂದು ಆತನ ತಂದೆಯು ಮಿಡಕಹತ್ತಿದನು. ಮಂಡನಮಿಶ್ರನು ಉತ್ತರ ಕನ್ನಡದ ಯಾವದೋ ಒಂದು ಹಳ್ಳಿಯಲ್ಲಿಯ ವಿಧವೆಯನ್ನು ಅಂಗವಸ್ತ್ರವನ್ನಾಗಿ ಮಾಡಿಕೊಂಡಿರುವನೆಂದು ಆತನ ಹೆಂಡತಿಗೆ ಯಾರೊ ಹೇಳಿದರು. ಗಂಡನ ಇಂತಹ ಕೃತಿಯನ್ನು ಕೇಳಿ ಅವಳಿಗೆ ಅಸಹ್ಯ ವೇದನೆಯಾಯಿತು. ತಂದೆಯು ಕೊರಗಿ ಕೊರಗಿ ಪ್ರಾಣಬಿಟ್ಟನು.

ಗಂಡನು ಬರುವ ಹಾದಿಯನ್ನೇ ನೋಡುತ್ತ ಹೆಂಡತಿಯು ಹೇಗೋ ಕಾಲಕ್ಷೇಪ ಮಾಡುತ್ತಿದ್ದಳು. ಆ ವಿಧವೆ ಅನಾಥಳೆಂದು ಯಾರೊ ಮಂಡನ ಮಿಶ್ರನ ಹೆಂಡತಿಗೆ ಹೇಳಿದ್ದರು. ಗಂಡನ ಬುದ್ಧಿಗೇಡಿತನಕ್ಕೆ ಆ ವಿಧವೆ ಸಮಾಜಕ್ಕೆ ಎರವಾಗಿ ಏಕೆ ಕಷ್ಟಪಡಬೇಕೆಂದು, ಅವಳನ್ನು ಗಂಡ ಬರುವ

ವರೆಗೆ ಕರೆತಂದು ಮನೆಯಲ್ಲಿಟ್ಟುಕೊಂಡರಾಯಿತೆಂದು ಮಾಡಿ ಗಂಡನ ಪರಿಚಯದ ಚಳವಳಿಗಾರರಿಂದ ಆ ವಿಧವೆಯನ್ನು ಹುಡುಕಿಸಿದಳು. ಅವಳ ಹೆಸರುದೆಸೆ ಏನೂ ಗೊತ್ತಿಲ್ಲ. ಅವಳನ್ನು ಹುಡುಕುವ ಬಗೆ ಹೇಗೆ. ಪರಿಚಯಸ್ಥರು ಹುಡುಕಿದೆವು; ಸಿಗಲಿಲ್ಲವೆಂದು ಹೇಳಿಬಿಟ್ಟರು.

ದಿನಗಳು ಕಳೆದವು. ಮಂಡನಮಿಶ್ರನ ಕಾರಾಗ್ರಹದ ಅವಧಿಯು ಮುಗಿದು ಅವನನ್ನು ಜೇಲಿನಿಂದ ಹೊರಗೆ ಬಿಟ್ಟರು. ದೇಶಭಕ್ತನಾದ ಮಂಡನಮಿಶ್ರನ ಜಯಜಯಕಾರ ಮಾಡುತ್ತ ಅವನನ್ನು ಮೆರೆಸುತ್ತ ಜನಗಳು ಕರೆದುಕೊಂಡು ಬಂದರು. ದೇಶಸೇವೆಯೇ ಈಶಸೇವೆ, ಜನತೆಯ ಸೇವೆಯೇ ಜನಾರ್ಧನನ ಸೇವೆ ಎಂಬೀ ಮೊದಲಾದ ತತ್ವಗಳ ಸುರಿಮಳೆ ಮಾಡುತ್ತ ಕೂಡಿದ್ದ ಸಭೆಯಲ್ಲಿ ಭಾಷಣ ಮಾಡಿದನು. ಭಾಷಣ ಮಾಡುತ್ತಿದ್ದರೂ ತಲೆಯಲ್ಲಿ ಮಾಯಾದೇವಿಯ ಚಕ್ರವೇ ಭರದಿಂದ ತಿರುಗುತ್ತಿತ್ತು. ಅವಳನ್ನು ಭೆಟ್ಟಿಯಾಗಬೇಕೆಂಬ ಆತುರ ಅವನಲ್ಲಿ ಬಹಳವಾಗಹತ್ತಿತು. ‘ ನೀ ಬಿಟ್ಟರೂ ಮಾಯೆ ಬಿಡದು ’ ಎಂಬ ಮಾತನ್ನು ಭಾಷಣದಲ್ಲಿ ಅಸಂಬದ್ಧವಾಗಿ ನುಡಿದನು. ಅದರ ಅರ್ಥ ಸಭಿಕರಿಗೆ ಗೊತ್ತಾಗಲಿಲ್ಲ. ಇದು ದೇಶಭಕ್ತರ ತತ್ವದ ಹೊಸ ಸೂತ್ರವಿರಬಹುದೆಂದು ಕೆಲವರು ಅಂದುಕೊಂಡರು.

ಅವರೆಲ್ಲರ ಕೈಯಿಂದ ಯಾವಾಗ್ಗೆ ಪಾರಾಗಿ ಹೋಗುವೆನೆಂದು ಮಂಡನಮಿಶ್ರನಿಗೆ ಅನಿಸಹತ್ತಿತು. ಲಗುಬಗೆಯಿಂದ ಸತ್ಕಾರ ಸಭೆಯ ಸಮಾರೋಪಣ ಮಾಡಿಕೊಂಡು ಕುಸ್ತಿಯಲ್ಲಿ ಗೆದ್ದ ಜಟ್ಟಿಯಂತೆ ಕೊರಳಲ್ಲಿ ಹೂವಿನ ಮಾಲೆಗಳನ್ನು ಹಾಕಿಕೊಂಡು ಊರಿಗೆ ಹೊರಡಲು ಮೋಟಾರದಲ್ಲಿ ಒಮ್ಮೆ ಬಂದು ಕುಳಿತನು. ಮೋಟಾರದಲ್ಲಿ ಕುಳಿತ ಮೇಲೆ ಮೊದಲು ತಾನು ಮಾಯಾದೇವಿಯ ಹಳ್ಳಿಗೆ ಹೋಗಬೇಕೋ ಇಲ್ಲವೆ ತನ್ನ ಊರಿಗೆ ಹೋಗಬೇಕೋ ಎಂದು ವಿಚಾರ ಮಾಡಹತ್ತಿದನು. ತನ್ನದಲ್ಲವೆಂಬ ವಸ್ತುವಿನ ಮೇಲೆ ಮನುಷ್ಯನ ಆಶೆ ಹೆಚ್ಚು. ಈ ಆಶೆಯು ಬೆನ್ನಟ್ಟುವದೇ ಮಾರಕ. ತನ್ನ ಹೂಬತ್ತಿ ಜುಟ್ಟದ ಮೇಲೆ ಎಡಗೈಯನ್ನು ಆಡಿಸುತ್ತ ಮೋಟರದಿಂದ ಕೆಳಗಿಳಿದು ತನ್ನ ಕಾರ್ಯಕ್ಷೇತ್ರಕ್ಕೆ ಮೊದಲು

ಭೆಟ್ಟಿಕೊಟ್ಟು ಹೋಗುವದು ಆದ್ಯ ಕರ್ತವ್ಯವೆಂದು ಕಳುಹಲಿಕ್ಕೆ ಬಂದವರಿಗೆ ಹೇಳಿ ಘಟ್ಟದ ಕೆಳಗಿನ ಹಳ್ಳಿಗೆ ಹೊರಟನು.

ಸಂಜೆಯು ಆರು ಗಂಟೆಗೆ ಮಂಡನಮಿಶ್ರನು ಮಾಯಾದೇವಿಯು ಹಳ್ಳಿಗೆ ಬಂದು ಮುಟ್ಟಿದನು. ಊರಲ್ಲಿಯ ಶಾನಭಾಗನು ಇವರನ್ನು ಬರ ಮಾಡಿಕೊಂಡು ಕ್ಷೇಮಸಮಾಚಾರವನ್ನು ಕೇಳಿದನು. ಅವರಿಗೆ ಅಲ್ಪೋಪಹಾರ ಕೊಟ್ಟು ಊರ ಮುಂದಿನ ದುರ್ಗಿಯ ಗುಡಿಯ ಮುಂದೆ ಸಭೆಯನ್ನು ಕರೆದು ಮಂಡನಮಿಶ್ರನನ್ನು ಸತ್ಕರಿಸಬೇಕೆಂದು ಮಾಡಿದನು. ಸಭೆಯನ್ನು ಕರೆದರೆ ಪೋಲೀಸರು ಬಂದು ಎಲ್ಲರನ್ನೂ ಹಿಡಿದುಕೊಂಡು ಹೋಗುವರೆಂದು ಮಂಡನಮಿಶ್ರನು ಶಾನಭಾಗರಿಗೆ ಹೇಳಿ ಸಭೆ ಕರೆಯುವದನ್ನು ಬಿಡಿಸಿದನು. ದೇಶಭಕ್ತರೇ ಹೇಳಿದ ಮೇಲೆ ಆತನು ಸುಮ್ಮನಾದನು. ತನ್ನ ಮನೆಯಲ್ಲಿಯೇ ಅನೌಪಚಾರಿಕ ಸಭೆಯನ್ನು ಕರೆದನು.

“ ಹಳ್ಳಿಯಲ್ಲಿಯ ಹತ್ತೆಂಟು ಜನರು ಬಂದಿದ್ದರು. ”

“ ದೇಶದ ಸಲುವಾಗಿ ನಾವು ದುಡಿಯಬೇಕು; ಮಡಿಯಬೇಕು. ಸಮಾಜದಲ್ಲಿಯ ಕುಂದು ಕೊರತೆಗಳನ್ನು ಹೋಗಲಾಡಿಸಲು ಕಂಕಣಬದ್ಧರಾಗಿ ನಿಲ್ಲಬೇಕು; ಬಾಲವಿಧವೆಯರ ಉದ್ಧಾರ ಮಾಡಬೇಕು. ದೀನ ದಲಿತರನ್ನು ಸಂರಕ್ಷಿಸಬೇಕು ” ಎಂದು ಮಂಡನಮಿಶ್ರನು ಅವರೆಲ್ಲರಿಗೆ ಉಪದೇಶ ಮಾಡಿದನು.

ಅಲ್ಲಿ ಬಂದವರಲ್ಲಿ ಮಾಯಾದೇವಿ ಕಾಣಿಸಲಿಲ್ಲ. ಅವಸರದಿಂದ ಅಲ್ಲಿಯ ಕಾರ್ಯವನ್ನು ಮುಗಿಸಿದನು. ತಾನು ಮುಂದಿನ ಹಳ್ಳಿಗೆ ಹೋಗಿ ತನ್ನ ಸಂಗಡಿಗರನ್ನು ಭೆಟ್ಟಿಯಾಗಿ ಬರುವೆನೆಂದು ಅವರೆಲ್ಲರಿಗೆ ಹೇಳಿ ಅಪ್ಪಣೆಯನ್ನು ಪಡೆದು ಹೊರಟನು ಮಂಡನಮಿಶ್ರನು.

ತುಸು ದಾರಿ ಹೋಗುವದರೊಳಗಾಗಿಯೇ ಎದುರಿಗೆ ಮಾಯಾದೇವಿ ತಲೆಯಮೇಲೊಂದು ದೊಡ್ಡ ಗಂಟನ್ನು ಹೊತ್ತುಕೊಂಡು ಬರುವದನ್ನು ನೋಡಿದನು. ಅವಳ ಕರುಣಾಸ್ಪದ ಸ್ಥಿತಿಯನ್ನು ಕಂಡು ಮಂಡನಮಿಶ್ರನ ಹೃದಯ ಕರಗಿ ನೀರಾಗಿ ಆತನ ಕಣ್ಣುಗಳಿಂದ ಒಂದೆರಡು ಹನಿಗಳು ಉದುರಿದವು. ತನ್ನ ಅದೃಷ್ಟವನ್ನೇ ಹಳಿಯುತ್ತ ಮಾಯಾದೇವಿಯು ದಣಿದ

ಕಾಲುಗಳನ್ನು ಎಳೆಯುತ್ತ ನಡೆದಿದ್ದಳು. ಮಂಡನಮಿಶ್ರನ ಬರವನ್ನು ಅವಳು ಎಣಿಕೆಹಾಕಿದ್ದಿಲ್ಲ. "

" ಮಾಯಾದೇವಿ " ಎಂದು ಆತ ಕೂಗಿದನು.

ದನಿಯು ಗುರುತನ್ನು ಹಿಡಿದು ಗಾಬರಿಯಾಗಿ ನೋಡಿ ಅವಳು ಅವನೆದುರಿಗೆ ನಿಂತಳು. ಬೆಳದಿಂಗಳಲ್ಲಿ ಆತನನ್ನು ದಿಟ್ಟಿಸಿ ನೋಡಿ ಉದಾಸೀನ ಭಾವದಿಂದ ಉಸುಗುಗರೆದು ತಲೆ ತಗ್ಗಿಸಿಕೊಂಡು ನಿಂತಳು. ಮಂಡನಮಿಶ್ರನಾದರೂ ಅವಳನ್ನು ನುಂಗುವಂತೆ ನೋಡಿದನು. ಅವಳ ಹೊಟ್ಟೆಯು ಬಹಳೇ ಮುಂದು ಬಂದಿತ್ತು.

" ಇದೇನು ಹೊಟ್ಟೆ " ಎಂದು ಕೇಳಿದನು.

" ಇದು ನಿಮ್ಮ ಕೂಸು. ಹೊತ್ತು ಸಂರಕ್ಷಣೆ ಮಾಡುತ್ತೇನೆ. ಜನರು ನನ್ನನ್ನು ಹೀಯಾಳಿಸುವರು; ವ್ಯಭಿಚಾರಿಣಿಯೆಂದು ಬೈಯುವರು. ನನಗೆ ಅಪಮಾನ ಮಾಡುವರು. ಕೆಲವರಂತೂ ಮೈಮೇಲೆ ಏರಿ ಹೊಡಿಯಲು ಬರುವರು. ನಾಯಿಯ ಜನ್ಮಕ್ಕಿಂತ ನನ್ನ ಜನ್ಮ ಕಡೆಯಾಗಿರುವದು. ಎಲ್ಲವನ್ನು ಸಹಿಸತಕ್ಕದ್ದು ನನ್ನ ಹೊಟ್ಟೆಯಲ್ಲಿಯ ಕೂಸಿನ ಸಲುವಾಗಿ. ನೀವು ನನ್ನ ಲಗ್ನವನ್ನು ಮಾಡಿಕೊಳ್ಳುವಿರೆಂದು ಹೇಳಿದ್ದರ ಸಲುವಾಗಿ "

ಎಂದು ಮಾಯಾದೇವಿ ತಲೆಯಮೇಲಿನ ಗಂಟನ್ನು ಕೆಳಗಿರಿಸಿ ಮಂಡನಮಿಶ್ರನಿಗೆ ಹೇಳಿದಳು.

" ಈಗ ಹೊರಟಿದ್ದು ಎಲ್ಲಿ ? "

" ಎಲ್ಲಿ ಆಶ್ರಯ ದೊರೆಯುವದೋ ಅಲ್ಲಿಗೆ. "

" ತಲೆಯಮೇಲಿದ್ದ ಗಂಟಿನಲ್ಲಿ ಏನಿರುವದು ? "

" ಇದು ಜೀವನದ ಗಂಟು. "

" ಮೊದಲು ಈ ಗಂಟು ಇರಲಿಲ್ಲವಲ್ಲ. "

" ಈ ಜೀವನದ ಗಂಟು ನಿಮ್ಮಿಂದ ಪ್ರಾರಂಭವಾಗಿರುವದು. "

" ಮುಕ್ತಾಯ ? "

" ನಿಮ್ಮಿಂದಲೇ ಮುಕ್ತಾಯವಾಗಬೇಕು. "

ಆಕೆಯ ಮಾತು ಮಂಡನಮಿಶ್ರನಿಗೆ ಏನೂ ತಿಳಿಯಲಿಲ್ಲ. ಅವಳ ಮೊಗವನ್ನು ಬೆಪ್ಪನೆ ನೋಡುತ್ತ ನಿಂತನು.

ಮಾಯಾದೇವಿಯು ತಾನು ಗರ್ಭಿಣಿಯಾಗಿರುವೆನೆಂದು ಹಿಂದಕ್ಕೆ ಹೇಳಿದ ಮಾತಿಗೆ ಮಂಡನಮಿಶ್ರನು ಅಷ್ಟು ಅಕ್ಷ್ಯ ಕೊಡದೆ ಬಿಟ್ಟಿದ್ದನು. ಇಂದು ಅವಳ ತುಂಬಿದ ಹೊಟ್ಟೆಯನ್ನು ಕಂಡು ಅವಳನ್ನು ಮುಟ್ಟಲು ಹಿಂಜರಿದನು. ತಾನು ಮಾಡಿದ ಪಾಪವ ಅರಿವಾಯಿತು. ತನ್ನ ಕೃತಿಯು ಪರಿಣಾಮ, ಮುಂಬರುವ ಆಪಾದನೆ, ಸಮಾಜದ ನಿಂದೆ—ಇವೆಲ್ಲವುಗಳು ಕಣ್ಣು ಮುಂದೆ ನಿಂತು ಕುಣಿಯುಹತ್ತಿದವು. ಪ್ರೇಮದ ಮುದ್ದೆಯಾಗಿದ್ದ ಮಾಯಾದೇವಿ ಇಂದು ಮಂಡನಮಿಶ್ರನಿಗೆ ಜೀವನದ ಮಾಯೆಯಂತೆ ತೋರಹತ್ತಿದಳು. ಧೈರ್ಯವನ್ನು ಕಳೆದುಕೊಂಡ ಅವಳನ್ನು ಕರೆದು ಕೊಂಡು ಹೋಗಬೇಕೋ ಬಿಟ್ಟು ಹೋಗಬೇಕೋ ಎಂಬ ನಿರ್ಣಯದಲ್ಲಿ ಮನಸ್ಸು ಹೊಯ್ದಾಡಹತ್ತಿತು.

ಮಾನವನು ತನ್ನ ಸ್ವಾರ್ಥಕ್ಕೆ ಪರರನ್ನು ಬಲಿಕೊಡಲು ಹಿಂಜರಿಯು ವದಿಲ್ಲ.

" ಏನು ವಿಚಾರ ಮಾಡುತ್ತಿರುವಿರಿ ? ಜೇಲು ನೆನಪಾಯಿತೋ. "

" ಜೇಲು ನೆನಪಾಗಿಲ್ಲ. "

" ಹಾಗಾದರೆ. "

" ಯಾವದಾದರೂ ಒಂದು ಹಳ್ಳಿಯನ್ನು ಸೇರುವಾ. ಇಲ್ಲವಾದರೆ ಅಡವಿಯಲ್ಲಿ ಎಲ್ಲಿಯಾದರೂ ಆಶ್ರಯ ನೋಡಿಕೊಂಡು ರಾತ್ರಿಯನ್ನು ಕಳೆ ಯಬೇಕಾಗುವದು. "

" ನಿಮ್ಮಿಚ್ಛೆ. "

" ಅಲ್ಲಿ ಒಂದು ದೀಪ ಕಾಣುತ್ತಿರುವದು. ನಾನು ಹೋಗಿ ನೋಡಿ ಕೊಂಡು ಬರುವೆ. ಅಲ್ಲಿಯವರೆಗೆ ನೀನು ಇಲ್ಲಿಯೇ ಬದಿಯ ದಿಬ್ಬದ ಮೇಲೆ ಕುಳಿತುಕೋ. "

ಬದಿಯ ದಿಬ್ಬದ ಮೇಲೆ ಹೋಗಿ ಮಾಯಾದೇವಿಯು ಮುಂಬದಿಯಲ್ಲಿ ಗಂಟನ್ನಿಟ್ಟುಕೊಂಡು ಮಂಡನಮಿಶ್ರನ ಹಾದಿಯನ್ನು ನೋಡುತ್ತ ಕುಳಿತು ಕೊಂಡಳು.

" ತಡಮಾಡಬೇಡಿರಿ. ನೀವು ಬರುವವರೆಗೆ ಇಲ್ಲಿಯೇ ಇರುವೆನು."

ಮಂಡನಮಿಶ್ರನು ಓಡಿದನು. ಮಾಯೆಯನ್ನು ತನ್ನ ಮಾಯೆಯ ಜಾಲದಲ್ಲಿ ಸಿಲುಕಿಸಿ ಹೋದನು. ಕಬ್ಬಿನ ರಸವನ್ನು ಸವೆದು ಸಿಪ್ಪೆಯನ್ನು ಒಗೆಯುವಂತೆ ಮಾಯೆಯನ್ನು ಅಡವಿಯಲ್ಲಿ ಚೆಲ್ಲಿಕೊಟ್ಟು ಹೋದನು.

# ೭

" ರಾತ್ರಿಯಲ್ಲೇಕೆ ಚೀರಿದೆ ?

" ನಾನು ಚೀರಿಲ್ಲ. "

" ನೀನು ಚೀರಿದ ಧ್ವನಿ ಕೇಳಿ ಕೋಣೆಯಿಂದ ಎಚ್ಚತ್ತು ಬಂದು ನಿನ್ನನ್ನು ಎಬ್ಬಿಸಿದೆ. ನೀನು ಎದ್ದು ಕುಳಿತು ಏನೂ ಇಲ್ಲವೆಂದು ಉತ್ತರ ಕೊಟ್ಟು ಮತ್ತೆ ಮಲಗಿಕೊಂಡಿ. ನಿದ್ರೆಯಲ್ಲಿ ಉತ್ತರ ಕೊಟ್ಟಂತೆ ಕಂಡಿತು. "

" ನಾನು ಉತ್ತರ ಕೊಟ್ಟದ್ದೇ ನೆನಪಿಲ್ಲ. "

" ನೀನು ಹಾಗೇಕೆ ಮಾಡಿದಿ ? ನಿದ್ದೆಯಲ್ಲಿ ಹೆದರಿದಿಯೋ ಏನಾಯಿತು ? "

" ಏನೂ ಆಗಲಿಲ್ಲ. "

" ಅಂದಮೇಲೆ ಚೀರಿದಿಯೇಕೆ ? "

" ಏನೋ ಒಂದು ಕನಸು ಕಂಡೆ. "

" ಕನಸಿನಲ್ಲಿ ಏನಾದರೊಂದು ಕಂಡು ಹೆದರಿದಿಯೋ. "

" ಜೀವನದಲ್ಲಿ ಆದದ್ದು ಬೇರೆ ಬಗೆಯಿಂದ ಕನಸಿನಲ್ಲಿ ಕಂಡೆ. "

" ಅಂತಹ ಕನಸಾದರೂ ಯಾವದು ? ಇಷ್ಟು ಹೆದರಿ ಚೀರಬೇಕಾದರೆ. "

" ಜನರು ಕಾಣದ್ದು ಶಿವ ಕಾಣುವನು. ಶಿವ ಕಂಡದ್ದು ಒಮ್ಮೊಮ್ಮೆ ಮನಸ್ಸು ಕಾಣುವದು. "

" ನಿನ್ನ ಮನಸ್ಸು ಕಂಡದ್ದಾದರೂ ಏನು " ಎಂದು ಪದ್ಮನಾಭನು ಚಹ ಕುಡಿದ ಕಪ್ಪನ್ನು ತನ್ನೆದುರಿಗಿನ ಮೇಜಿನ ಮೇಲಿಡುತ್ತ ಪ್ರೇಮನಂದಿನಿಗೆ ಕೇಳಿದನು.

ಪ್ರೇಮನಂದಿನಿಯು ಮಾರುತ್ತರ ಕೊಡದೆ ಸುಮ್ಮನೆ ಆತನೆದುರಿಗೆ ಕೋಣೆಯಲ್ಲಿ ತಲೆಯನ್ನು ತಗ್ಗಿಸಿಕೊಂಡು ನಿಂತಳು. ಅವಳ ದೈನ್ಯಾವಸ್ಥೆಯನ್ನು ಕಂಡು ತನ್ನಿಂದ ಸಾಧ್ಯವಿದ್ದಷ್ಟು ಧೈರ್ಯ ಕೊಡಬೇಕೆಂದು ಮತ್ತೊಮ್ಮೆ,

" ಕನಸಿನಲ್ಲಿ ಕಂಡದ್ದನ್ನು ಹೇಳದಿದ್ದರೆ ಮನಸ್ಸಿನ ಭಾರವಾದರೂ ಹೇಗೆ ಇಳಿಯಬೇಕು " ಎಂದು ಕೇಳಿದನು.

" ಹೇಳಿದರೆ ಭಾರ ಕಡಿಮೆಯಾಗುವದೆಂದು ನನಗನಿಸುವದಿಲ್ಲ. "

" ಹೇಳಿದರೆ ಹೆಚ್ಚಿಗೆ ಮಾತ್ರ ಆಗುವದಿಲ್ಲ. "

" ಅದು ನನಗೆ ಹೇಳಲಿಕ್ಕೆ ಬರಲಾರದು. "

" ಇಂದು ಮಾತ್ರ ನಿಮ್ಮ ಮೋಗ ಸಪ್ಪಗೆ ಆಗಿರುವದು. "

ಪ್ರೇಮನಂದಿನಿಯು ಕರುಣಾಪೂರ್ಣ ದೃಷ್ಟಿಯಿಂದ ಪದ್ಮನಾಭನನ್ನು ನೋಡಿ ಮಾತನಾಡದೆ ಸುಮ್ಮನೆ ನಿಂತುಬಿಟ್ಟಳು.

" ನಂದಿನೀ ಅದನ್ನು ನನ್ನ ಮುಂದೆ ಹೇಳದಿದ್ದರೆ ನೀನು ಹೇಳುವದಾದರೂ ಯಾರ ಮುಂದೆ. ಈ ನಗರದಲ್ಲಿ ನಿನ್ನವರು ಯಾರಾದರೂ ಇರುವರೋ ? "

" ನಾನು ಪರದೇಶಿ, ನಿರ್ಗತಿಕಳು, ಎಂದು ಮೊದಲೇ ತಮಗೆ ಹೇಳಿರುವೆನು. ನಿಮ್ಮ ಹೊರತು ಬೇರೆಯುವರು ನನಗೆ ಯಾರೂ ಇಲ್ಲ. "

" ಅಂದ ಮೇಲೇಕೆ ಹೇಳಬಾರದು ? "

ಪ್ರೇಮನಂದಿನಿಯು ನಿರುಪಾಯಳಾದಳು.

" ಒಂದು ಅತಿ ದೊಡ್ಡ ನದಿ. ದೂರದಲ್ಲಿ ಅದು ಆಕಾಶದಿಂದ ಭೂಮಿಗೆ ಬೀಳುತ್ತಿರುವದು ನನಗೆ ಮುಸುಕಾಗಿ ಕಾಣಿಸುತ್ತಿತ್ತು. ತುಂಬಿ ಸೂಸಿ ಗಂಭೀರವಾಗಿ ಹರಿಯುತ್ತಿರುವ ಪ್ರವಾಹವನ್ನು ನೋಡುತ್ತ ಅದರ ತೀರದ ಮೇಲೆ ನಿಂತಿದ್ದೆ. ಪ್ರವಾಹದ ಆಚೆಯ ದಂಡೆ ಅಗೋಚರ. ಎಷ್ಟೋ ಜನರು ಪ್ರವಾಹದಲ್ಲಿ ತೇಲಿ ಹೋಗುತ್ತಿದ್ದರು, ಮತ್ತೆಷ್ಟೋ ಜನರು ದೋಣಿಗಳಲ್ಲಿ ಕುಳಿತು ರಭಸದಿಂದ ಹರಿಯುತ್ತಿರುವ ಪ್ರವಾಹವನ್ನು ಹುಟ್ಟುಕಡಿಯುತ್ತ ಮತ್ತೊಂದು ಅಗೋಚರ ದಂಡೆಯ ಕಡೆಗೆ ಹೋಗುತ್ತಿದ್ದಂತೆ ಕಾಣುತ್ತಿತ್ತು. ಕೆಲವು ದೋಣಿಗಳು ನೀರು ತುಂಬಿ ಮುಣುಗುತ್ತಿದ್ದವು. ದೋಣಿಯೊಳಗಿಂದ ಜೀವದಾಶೆಗೆ ಪ್ರವಾಹದಲ್ಲಿ ಜಿಗಿದು ಕೆಲವರು ಮುಳುಗುವದನ್ನು ನೋಡುತ್ತಿದ್ದೆ. ಕೆಲವು ಜನರಿಗೆ ಪ್ರವಾಹದಾಚೆಗೆ ನನ್ನನ್ನು ದೋಣಿಯಲ್ಲಿ ಕರೆದುಕೊಂಡು ಹೋಗಿರೆಂದು ಅಂಗಲಾಚಿ ಹೇಳಿಕೊಳ್ಳುತ್ತಿದ್ದೆ. ನಾನು ಬೇಡಿಕೊಳ್ಳುವದನ್ನು ಕಂಡು

ಕೆಲವರು ಜೀವನದ ಹುಚ್ಚಿನಿಂದು ನೆನ್ನ ದೋರೆಗೆ ಬಟ್ಟು ತಿವಿದು ಹೋಗುತ್ತಿದ್ದರು. ಮತ್ತೆ ಕೆಲವರು ಈ ಅಪಶಕುನೀ ಮುಂದೆಯು ದೋರೆಯನ್ನು ನೋಡಿದರೆ ನಾವು ಪ್ರವಾಹವನ್ನು ಸುರಕ್ಷಿತವಾಗಿ ದಾಟದೆ ನೀರಿನಲ್ಲಿಯ ಮೊಸಳೆಯು ಇಲ್ಲವೆ ತಿಮಿಂಗಲದ ಪಾಲಾಗುವೆವೆಂದು ತಿರಸ್ಕಾರ ಭಾವದಿಂದ ಮಾತನಾಡುತ್ತ ಹೋಗುತ್ತಿದ್ದರು. ಎಲ್ಲರೂ ಪ್ರವಾಹದಲ್ಲಿ ಮುಳುಗುತ್ತ ತೇಲುತ್ತ, ನೀರನ್ನು ಗುಟುಕರಿಸುತ್ತ ಹೋಗುವದನ್ನು ನೋಡಿ ನನಗೆ ನಗೆಯೂ, ಅಳುವೂ ಬರುತ್ತಿದ್ದವು. ನಿಂತು ನಿಂತು ಬೇಸತ್ತೆ.

ಬದಿಯಲ್ಲಿಯೇ ಒಂದು ಉಪವನವಿತ್ತು. ಅಲ್ಲಿಯಾದರೂ ಕೆಲವು ವೇಳೆ ಕುಳಿತು ಬಂದರಾಯಿತೆಂದು ಅಲ್ಲಿಗೆ ಹೊರಟೆನು. ನೋಡಲು ಉಪವನ ಬಹಳೇ ರಮ್ಯ ಹಾಗೂ ಸುಂದರ. ಎಷ್ಟೋ ಜನರು ವಿಶ್ರಮಿಸಲು ಅಲ್ಲಿ ಕುಳಿತುಕೊಂಡಿದ್ದರು. ನಾನು ಹೋಗಿ ಅಲ್ಲಿದ್ದ ಒಂದು ಎತ್ತರವಾದ ಕಲ್ಲು ಹಾಸಿಗೆಯ ಮೇಲೆ ಉಸ್ಸೆಂದು ಕುಳಿತುಕೊಂಡೆ. ನನ್ನ ಬದಿಯಲ್ಲಿಯೇ ಒಬ್ಬಳು ೬–೭ ವರುಷದ ಓರ್ವ ಬಾಲಿಕೆಯನ್ನು ಕರೆದುಕೊಂಡು ಕುಳಿತಿದ್ದಳು. ಹುಡುಗಿಯು ನೋಡಲು ಬಲು ಮುದ್ದಾಗಿತ್ತು. ಓರಣವಾಗಿ ಧರಿಸಿದ ಆಧುನಿಕ ಉಡಿಗೆ ತೊಡಿಗೆಗಳು ಹುಡುಗಿಯ ಚೆಲುವಿಕೆಗೆ ಹೆಚ್ಚು ಪುಟವನ್ನು ಕೊಡುತ್ತಿದ್ದವು. ಆ ಮುದ್ದಾದ ಹುಡುಗಿಯನ್ನು ನೋಡಿದ ಕೂಡಲೇ ನಾನು ಅದನ್ನು ಕರೆದುಕೊಂಡು ಮುದ್ದು ಕೊಡಬೇಕೆಂದು ಅನಿಸಹತ್ತಿತು. ಅದು ಸಿರಿವಂತರ ಹುಡುಗಿಯಂತೆ ಕಂಡಿತು. ಆ ಹುಡಿಗೆಯನ್ನೇ ದಿಟ್ಟಿಸಿ ನೋಡುತ್ತ ಕುಳಿತುಕೊಂಡೆ. ಎಷ್ಟು ನೋಡಿದರೂ ಮನಸ್ಸು ತಣಿಯಲಿಲ್ಲ.

"ಮಗು ನಿನ್ನ ಹೆಸರೇನು" ಎಂದು ಕೇಳಿದೆ.

"ನನ್ನ ಹೆಸರು!" ಎಂದು ಆಶ್ಚರ್ಯದಿಂದ ಕೇಳಿತು.

"ಹೌದು, ನಿನ್ನ ಹೆಸರು."

"ನನ್ನ ಅಮ್ಮನನ್ನು ಕೇಳಿ ಬರುತ್ತೇನೆ."

"ನಿನ್ನ ಹೆಸರು ನಿನಗೆ ಗೊತ್ತಿಲ್ಲವೇ?" ಎಂದು ಕೇಳಿದೆ.

"ನನ್ನ ಹೆಸರು ನನಗೆ ಗೊತ್ತಿಲ್ಲ. ಹೆಸರಿಲ್ಲದ ಹುಡುಗಿ ನಾನು."

" ಅಂದರೆ... " ಎಂದು ಕೇಳಿದೆ.

" ಅಂದರೆ ಗಿಂದರೆ ನನಗೆ ಗೊತ್ತಿಲ್ಲ " ಎಂದು ಉತ್ತರ ಕೊಟ್ಟಿತು.

" ಜಾಣ ಹುಡಿಗಿಗೆ ಹೆಸರು ಗೊತ್ತಿಲ್ಲವೆಂದರೆ ನನಗೆ ನಗೆಯು ಬರುವದು. "

" ನಕ್ಕು ತೋರಿಸು, ಅಂದರೆ ಹೆಸರು ಹೇಳುವೆನು.

ನಾನು ನಕ್ಕು ತೋರಿಸಿದೆ.

" ಇನ್ನು ಮೇಲಾದರೂ ಹೇಳು. "

" ನನ್ನ ಹೆಸರು ಹೆಸರು ಕಾಯಿ, ತಿಂದರೆ ಪುಟ್ಟೀಕಾಯಿ, ಹೆಚ್ಚಿದರೆ ಸವತೀಕಾಯಿ, ಮುಟ್ಟಿದರೆ ಬದನೇಕಾಯಿ, ತಿಳಿಯಿತೋ " ಎಂದು ಹುಡುಗಿಯು ಹೇಳಿತು.

ನನಗೆ ಗೊತ್ತಾಗಲಿಲ್ಲವೆಂದು ನುಡಿದೆ.

" ನಿನಗೆ ಕಡೆಯವರೆಗೆ ಗೊತ್ತಾಗುವದಿಲ್ಲ. "

ನಾನು ಹುಡುಗಿಯನ್ನೆತ್ತಿಕೊಳ್ಳಬೇಕೆಂದು ಮಾಡಿದೆ. ನನ್ನ ಬದಿಯಲ್ಲಿಂದೆದ್ದು ಉದ್ಯಾನದಲ್ಲಿ ಓಡಾಡಹತ್ತಿತು. ನಾನು ಕೂಡ ಎದ್ದು ಅದರ ಬೆನ್ನು ಹತ್ತಿದೆ. ನಾನು ಬೆನ್ನುಹತ್ತಿದಂತೆ ಅದು ಹಾಗೇ ಮುಂದೋಡಹತ್ತಿತು. ಮುಂದೆ ಕೆಲವು ನಿಮಿಷಗಳ ಮೇಲೆ ಬೆನ್ನು ಹತ್ತುವದು ಬಿಟ್ಟು ಹಾಗೇ ನಿಂತುಕೊಂಡೆ. ನಾನು ನಿಂತದ್ದು ಕಂಡು ಅಲ್ಲಿ ಆಡುತ್ತಿದ್ದ ಹುಡುಗಿಯು ಸಂಗಡ ಆಡಹತ್ತಿತು. ನಾನು ಮೆಲ್ಲಗೆ ಹೋಗಿ ಹುಡುಗಿಯನ್ನೆತ್ತಿಕೊಂಡು ಮುದ್ದಾಡಿದೆ. ನನ್ನ ಹೃದಯದಲ್ಲಿ ಆಗ್ಗೆ ಏನೋ ಒಂದು ತರಹದ ಪ್ರೇಮ ಉಕ್ಕಿ ಬಂದಿತು. ನನಗೆ ಆ ಕಾಲಕ್ಕೆ ಆದ ಆನಂದ ಹೇಳಲಿಕ್ಕೆ ಬರುವಹಾಗಿಲ್ಲ. ನನ್ನ ಜನ್ಮದಲ್ಲಿ ಅಂತಹ ಆನಂದ ನಾನು ಕಂಡಿದ್ದಿಲ್ಲ. ನಾನು ಜಗತ್ತನ್ನೇ ಮರೆತು ಲಟಲಟನೆ ಹುಡುಗಿಯನ್ನು ಮುದ್ದಾಡಿದೆ. ಕಳೆದುಕೊಂಡ ಕರವು ಆಕಳಕ್ಕೆ ಸಿಕ್ಕಂತೆ ನನಗೆ ಅನಿಸಿತು. ನನ್ನ ಕೆನ್ನೆಗೆ ಬಲವಾಗಿ ಕಡಿದು ಜೋರಿನಿಂದ ಕೆಳಗಿಳಿದು ನನ್ನ ಕಡೆಗೆ ' ಥೂ ' ಎಂದು ಉಗುಳಿ ತನ್ನ ದಾಯಿಯ ಕಡೆಗೆ ಓಡಹತ್ತಿತು. ನಾನು ಮತ್ತೆ ಹಿಂದೆ ಬರುತ್ತಿರುವದನ್ನು ಕಂಡು ಕೆಳಗೆ

ಬಿದ್ದ ಕಲ್ಲುಗಳನ್ನು ಆರಿಸಿಕೊಂಡು ನನ್ನ ಮೇಲೆ ತೂರಹತ್ತಿತು. ಕಲ್ಲುಗಳನ್ನು ತಪ್ಪಿಸಿಕೊಳ್ಳುತ್ತ ಹಾಗೆಯೇ ಹುಡುಗಿಯ ಹತ್ತಿರ ಹೋಗಿ ಇನ್ನೊಮ್ಮೆ ಹಿಡಿದು ಮುದ್ದು ಕೊಡಬೇಕೆಂದು ಹೊರಟೆ. ನಾನು ಹೀಗೆ ಮಾಡುತ್ತಿರುವದನ್ನು ಕಂಡು ದಾಯಿಯು ಎದ್ದು ಮುಂದಕ್ಕೆ ಬರಹತ್ತಿದಳು. ಹುಡುಗಿಯು ನೇರವಾಗಿ ಎಸೆದ ಒಂದು ಚೂಪಾದ ಕಲ್ಲು ನನ್ನ ಹಣೆಗೆ ಬಡಿದು ಬಿಟ್ಟಿತು. ಹಣೆಯಿಂದ ರಕ್ತ ಪುಟಿಯಹತ್ತಿತು. ಸೋರುತ್ತಿದ್ದ ರಕ್ತದ ಕಡೆಗೆ ನನ್ನ ಲಕ್ಷ ಹರಿಯದೆ ಹುಡುಗಿಯನ್ನು ಹಿಡಿದಡವಬೇಕೆಂದು ಓಡುತ್ತ ಬನ್ನುಹತ್ತಿದೆ. ನಾನು ಓಡಿದಂತೆ ನನ್ನನ್ನು ತಪ್ಪಿಸುತ್ತ ನದಿಯ ಪ್ರವಾಹದ ಕಡೆಗೆ ಜೋರಾಗಿ ಓಡಹತ್ತಿತು. ನಾನು ಗಾಬರಿಯಾದೆ. ನಾನು ಎಡವಿ ಬಿದ್ದದರಿಂದ ಹುಡುಗಿಯು ಓಡಿ ಹೋಗಿ ಪ್ರವಾಹದ ದಂಡೆಯ ಮೇಲೆ ನಿಂತಿತು. ನಾನು ಬರುವದನ್ನು ಕಂಡು.

'ನನ್ನ ಬೆನ್ನು ಹತ್ತುವಿಯಾ ಹುಚ್ಚೀ'

ಎಂದು ನುಡಿದದ್ದೇ ಪ್ರವಾಹದಲ್ಲಿ ಜಿಗಿಯಿತು. ಗಾಬರಿಯಾಗಿ ಚಿಟ್ಟನೆ ಚೀರಿದೆ" ಎಂದು ಪ್ರೇಮನಂದಿನಿಯು ಹೇಳಿದಳು.

"ನಮ್ಮ ಮನಸ್ಸಿನಲ್ಲಿಯ ಭಾವನೆಯ ತರಂಗಗಳಿಂದ ಇಂತಹ ಕನಸುಗಳನ್ನು ಕಾಣುವೆವು. ಅವಕ್ಕೆ ಆದಿಯೂ ಇಲ್ಲ, ಅಂತವೂ ಇಲ್ಲ. ನಾವು ಕನಸಿನಲ್ಲಿ ಕಂಡದ್ದು ಎಲ್ಲವೂ ಮಿಥ್ಯೆಯೆಂದು ಕೆಲವರು ಅನ್ನುವರು"

ಎಂದು ಪದ್ಮನಾಭನು ನುಡಿದನು.

"ನೀವು ಅದಕ್ಕೆ ಏನೇ ಅನ್ನಬಹುದು. ಆದರೆ ನಾನು ಮಾತ್ರ ಎಂದೂ ಕನಸನ್ನು ಮರೆಯುವಂತಿಲ್ಲ. ನಾನು ನೀವು ಕುಳಿತು ಮಾತನಾಡುವದರಿಂದ ಆಗುವ ಅನುಭವವು ಎಷ್ಟು ಸತ್ಯವೋ ಅಷ್ಟೇ ಸತ್ಯ. ಆಗ್ಗೆ ನನಗಾದ ಅನುಭವವೂ ಅಂಥದೇ. ಜೋರಿನಿಂದ ಹೊರಸೂಸುತ್ತಿರುವ ಪ್ರವಾಹದಲ್ಲಿ ತೇಲುತ್ತ ಹೋಗುತ್ತಿದ್ದರೂ ನನ್ನನ್ನು ಮುಟ್ಟಲಿಕ್ಕೆ ಬಾ ಎಂದು ನನ್ನ ಕಡೆಗೆ ಕೈ ಮಾಡಿ ಕೂಗುತ್ತಿತ್ತು. ಆ ಹುಡುಗಿಯನ್ನು ನೀರಲ್ಲಿ ನೂಕಿದವಳು ನಾನೆಂದು ಕ್ಷಣಕ್ಷಣಕ್ಕೆ ನನಗೆ ಅನಿಸಹತ್ತಿ ಸಾವಿರ ಚೇಳು ಕಡಿದಷ್ಟು ವೇದನೆ ಹೊಟ್ಟೆಯಲ್ಲಿ ಆಗಹತ್ತುವದು. ಅದು ಕನಸಿನಲ್ಲಿ ಕಂಡದ್ದು, ಅದರಲ್ಲಿ ವಿಶೇಷ ಇರುವದಿಲ್ಲವೆಂದು ಎಷ್ಟೋ ಸಲ

ತಿಂದುಕೊಂಡು ಸಮಾಧಾನ ತೆಗೆದುಕೊಂಡರೂ ಆ ವಿಚಾರ ನನ್ನಲ್ಲಿ ತಲೆಯೆತ್ತುವದನ್ನು ಬಿಡಲೊಲ್ಲದು."

ಎಂದು ಪ್ರೇಮನಂದಿನಿಯು ಸಣ್ಣಮೊಗ ಮಾಡಿಕೊಂಡು ನುಡಿದಳು.

"ಕನಸನ್ನು ಮರೆಯದಿದ್ದರೆ ಜೀವನದಲ್ಲಿಯ ದುಃಖವನ್ನು ನಾವು ಹೇಗೆ ಮರೆಯುವೆವು."

"ಜೀವನದಲ್ಲಿಯ ದುಃಖವನ್ನು ಮರೆತೇ ನಾನು ಇಲ್ಲಿಯವರೆಗೆ ಜೀವಿಸಿದ್ದು. ಆದರೆ ಕನಸನ್ನು ಮಾತ್ರ ನಾನು ಮರೆತರೂ ಕನಸು ನನ್ನನ್ನು ಮರೆಯಲೊಲ್ಲದು."

"ಏನಾದರೊಂದು ಕೆಲಸದಲ್ಲಿ ತೊಡಗು, ನೀನು ಮರೆಯುವಿ" ಎಂದು ಪದ್ಮನಾಭನು ಪ್ರೇಮನಂದಿನಿಗೆ ಸಮಾಧಾನವನ್ನು ಹೇಳಿದನು.

ಬಲಗಡೆಯ ಹಣೆಯ ಮೇಲೆ ಒಂದು ಪೈಸಾದಷ್ಟಿದ್ದ ಕಚ್ಚಿನ ಗುರುತನ್ನು ತೋರಿಸುತ್ತ,

'ಜೀವನದಲ್ಲಿ ಒಮ್ಮೆ ಮಾತೃವಾತ್ಸಲ್ಯಕ್ಕೆ ಒಳಪಟ್ಟು ಒಂದು ಹುಡುಗಿಯನ್ನು ಮೈದಡವಿ ಮುದ್ದಿಡುವಾಗ್ಗೆ ಅದು ನನ್ನನು ಕೊಸರಿಕೊಂಡು ಹೋಗಿ ನನ್ನ ಹಣೆಗೆ ಚೂಪಾದ ಕಲ್ಲನ್ನು ಒಗೆದಿದ್ದರ ಗುರುತು ಇದು. ಅದೇ ಹುಡಿಗೆಯೇ ಇಂದು ಕನಸಿನಲ್ಲಿ ಬಂದದ್ದು. ಅದೇ ಹುಡುಗೆಯೇ ಇಂದು ಹೊಳೆಯಲ್ಲಿ ಧುಮುಕಿದ್ದು, ಇದನ್ನು ನಾನು ಹೇಗೆ ಮರೆಯಬೇಕು" ಎಂದು ಪ್ರೇಮನಂದಿನಿಯು ನುಡಿದಳು.

"ಪ್ರತಿಯೊಬ್ಬನ ಜೀವನದಲ್ಲಿ ಏನಾದರೊಂದು ಡೊಂಕು ಇರುವದು. ಡೊಂಕು ಇರದೆ ಪ್ರವಾಹವಿಲ್ಲ, ಡೊಂಕು ಇರದೆ ಜೀವನವಿಲ್ಲ. ಇರಲಿ ಮರೆತುಬಿಡು, ನನಗೆ ಇನ್ನೊಂದು ಕಪ್ಪು ಚಹ ಮಾಡುವಿಯಾ" ಎಂದು ಪದ್ಮನಾಭನು ಅಂದನು.

ಪ್ರೇಮನಂದಿನಿಯು ಕಣ್ಣೊರಸಿಕೊಳ್ಳುತ್ತ ಒಳಗೆ ಚಹವನ್ನು ತಯಾರಿಸಲು ಹೋದಳು.

ಪದ್ಮನಾಭನು ಕನಸಿನ ಬಗ್ಗೆ ವಿಚಾರ ಮಾಡುತ್ತ ಕುಳಿತುಕೊಂಡನು. ಕನಸಿನಲ್ಲಿ ಕಂಡು ಅನುಭೋಗಿಸುವದು ಜೀವನಕ್ಕೆ ಸತ್ಯವೋ ಅಸತ್ಯವೋ ಎಂಬ ಸಮಸ್ಯೆಯನ್ನು ಉತ್ತರಿಸಲು ತಲೆಯನ್ನು ಕೆದರಿಕೊಳ್ಳಹತ್ತಿದನು.

ತನಗೆ ಬಗೆಹರಿಯಲಾರದ ವಿಷಯುವೆಂದು ಅರಿತುಕೊಂಡು ಬದಿಯಲ್ಲಿ ಬಿದ್ದ ಯಾವದೋ ಒಂದು ಪುಸ್ತಕವನ್ನು ತೆಗೆದುಕೊಂಡು ಪಾನು ತಿರುವುತ್ತ ಕುಳಿತುಕೊಂಡನು. ಅವನ ಮನಸ್ಸು ಪುಸ್ತಕದ ಕಡೆಗೆ ಇದ್ದಿಲ್ಲ. ಮನಸ್ಸಿನಲ್ಲಿ ಕುಣಿಯುತ್ತಿತ್ತು ಕನಸಿನ ವಿಷಯ. ಹೀಗೆ ಪಾನುಗಳನ್ನು ತಿರುವುತ್ತ ಕುಳಿತುಕೊಂಡ ಕಾಲಕ್ಕೆ ಒಬ್ಬ ಆಗಂತುಕನು ಕೋಣೆಯಲ್ಲಿ ಬಂದು ನಿಂತನು. ಬಂದವನು ಯಾರೆಂದೂ ಕೂಡ ಕೇಳಲಿಲ್ಲ. ಮುಖವೆತ್ತಿ ಬಂದವನನ್ನು ನೋಡಿ "ಬನ್ನಿ ಕುಳಿತುಕೊಳ್ಳಿ" ಎಂದು ಹೇಳದವನು ಎಷ್ಟೋ ನಿಮಿಷಗಳಾದರೂ ಎದುರಿಗೆ ಕುಳಿತ ವ್ಯಕ್ತಿಯನ್ನು ಮಾತನಾಡಿಸದೆ ಹಾಗೇ ಪುಸ್ತಕದಲ್ಲಿ ಮಗ್ನನಾಗಿ ಕುಳಿತಿದ್ದ. ಎದುರಿಗೆ ಕುಳಿತ ವ್ಯಕ್ತಿ ಪದ್ಮನಾಭನ ಈ ಸ್ಥಿತಿಯನ್ನು ಕಂಡು ತಾನು ಇಲ್ಲಿ ಹೀಗೆ ಕುಳಿತುಕೊಳ್ಳುವದು ಒಳಿತಲ್ಲವೆಂದು ಮನದಲ್ಲಿ ವಿಚಾರಮಾಡಹತ್ತಿದನು. ಪದ್ಮನಾಭನ ಮೊಗವನ್ನೇ ಎವೆಬಡಿಯದೆ ನೋಡುತ್ತ ಕುಳಿತುಕೊಂಡನು. ಆತನ ಲಕ್ಷ್ಯವನ್ನು ತನ್ನ ಕಡೆಗೆ ಎಳೆಯಬೇಕೆಂದು ಎರಡು ಮೂರುಸಲ ಪ್ರಯತ್ನ ಮಾಡಿ ವಿಫಲಗೊಂಡನು.

"ಪ್ರಾಧ್ಯಾಪಕರೇ, ನಾನು ಹೋಗಿ ಬರುವೆನು. ನಿಮಗೆ ಹೇಳದೆ ಬಂದದ್ದಕ್ಕೆ ಮೊದಲು ನನ್ನನ್ನು ಕ್ಷಮಿಸಬೇಕು. ನಿಮಗೆ ಬಿಡುವಿದ್ದ ಸಮಯ ತಿಳಿಸಿದರೆ ಇನ್ನೊಮ್ಮೆ ಬಂದು ಭೆಟ್ಟಿಯಾಗುವೆನು."

ಎಂದು ಕೊನೆಗೊಮ್ಮೆ ಗಟ್ಟಿಯಾಗಿ ನುಡಿದನು.

ಆತನ ಗಟ್ಟಿಯಾದ ಮಾತುಗಳನ್ನು ಕೇಳಿ ಪದ್ಮನಾಭನು ನಿದ್ರೆಯಿಂದ ಎಚ್ಚತ್ತವನಂತೆ ಗಾಬರಿಯಾಗಿ ಕೈಯಲ್ಲಿಯ ಪುಸ್ತಕವನ್ನು ಕೆಳಗಿಟ್ಟು,

"ಕ್ಷಮಿಸಬೇಕು; ತಾವು ಕುಳಿತುಕೊಂಡದ್ದೇ ಮರೆತುಬಿಟ್ಟಿದ್ದೆ." ಎಂದು ನುಡಿದನು.

"ತಾವು ಕುಳಿತುಕೊಂಡ ರೀತಿ; ತಾವು ನಡುನಡುವೆ ಮಾತನಾಡುತ್ತಿದ್ದ ಶಬ್ದಗಳನ್ನು ಕೇಳಿದರೆ, ತಾವು ಹೊರಗಿನ ಜಗತ್ತನ್ನು ಮರೆತು ಯಾವದೋ ಒಂದು ಗುಂಗಿನಲ್ಲಿರುವಂತೆ ತೋರುವದು."

"ಹಾಗೇನೂ ಅಲ್ಲ; ನಾನೊಂದು ಪುಸ್ತಕದಲ್ಲಿಯ ಹುಳ. ಹುಳಕ್ಕೆ ಬುದ್ಧಿ ಇರುವದಿಲ್ಲ; ವಿಚಾರ ಶಕ್ತಿಯಂತೂ ಕೇಳಬೇಡಿರಿ. ಅದಕ್ಕೆ

ಪಾನಂಗಳನ್ನು ಕಡಿದು ತಿನ್ನುವದಿಷ್ಟೇ ಗೊತ್ತು. ಪುಸ್ತಕದಲ್ಲಿಯ ಶಬ್ದ ಗಳಲ್ಲಿ ಅಡಗಿಕೊಂಡ ಅರ್ಥ ಆ ಪಾನು ತಿನ್ನುವ ಹುಳಕ್ಕೆ ಗೊತ್ತಾಗು ವದೇ ? ನಾನು ಶಬ್ದ ತಿನ್ನುವ ಹುಳ. ಶಬ್ದಗಳಲ್ಲಿ ಅಡಕವಾಗಿದ್ದ ಅರ್ಥ ವನ್ನು ಅರಿತು ತಿಂದು ಹೇಗೆ ಜೀರ್ಣಿಸಬೇಕೆಂದು ವಿಚಾರ ಮಾಡುತ್ತ ಕುಳಿತುಕೊಂಡಿದ್ದೆ. ವಿಚಾರ ಮಾಡಿದಷ್ಟು ಅದು ನನ್ನ ಕೈಮೀರಿ ಹೋಗು ತ್ತಿರುವದು. ತಮ್ಮ ಕಡೆಗೆ ಲಕ್ಷ ಕೊಡದೆ ಬಹಳ ವೇಳೆ ಕೂಡ್ರಿಸಿದ್ದಕ್ಕೆ ಕ್ಷಮಿಸಬೇಕು " ಎಂದು ಪದ್ಮನಾಭನು ನುಡಿದನು.

" ಬುದ್ಧಿ ಜೀವಿಗಳ ಜೀವನವೇ ಹೀಗೆ. ತನ್ಮಯಸ್ವಭಾವ ಅವರದು" ಅಂದನು.

" ನಾನು ಬುದ್ಧಿ ಜೀವಿಯಲ್ಲ; ಕತ್ತೆಯಂತೆ ಜೀವನವನ್ನು ಸಾಗಿಸು ವವರಿಂದ ನನಗೆ ಕತ್ತೆಜೀವಿಯೆಂದು ಕರೆದರೂ ಸೈ. "

" ಕತ್ತೆ ಜೀವಿಯೆಂದರೆ ನನಗೆ ತಿಳಿಯಲಿಲ್ಲ. "

" ಒಕ್ಕಸ ಸೋಪ ಹಚ್ಚಿ ಮೈಯನ್ನು ಗಂಗಾಜಲದಿಂದ ಸ್ವಚ್ಛ ಮಾಡಿ ದರೂ ಕ್ಷಣಾರ್ಧದಲ್ಲಿ ಮತ್ತೆ ಕತ್ತೆ ಹೊಲಸಿನಲ್ಲಿ ಉರುಳಾಡಿ ಮೈಯನ್ನು ಬೂದಿಬುಕ್ಕವನ್ನಾಗಿ ಮಾಡಿಕೊಂಡು ಹಾಳು ಗೋಡೆಯನ್ನೇ ಆಶ್ರಯಕ್ಕೆ ಹುಡುಕುತ್ತ ಹೋಗುವದು. ಇದರಂತೆಯೇ ನನ್ನ ಸ್ಥಿತಿ. ಇರಲಿ, ತಮ್ಮ ಪರಿಚಯವನ್ನು ಮಾಡಿಕೊಳ್ಳಬಹುದೋ ? "

ಎಂದು ಪದ್ಮನಾಭ ಕೇಳಿದನು.

" ನಾನು ಇದೇ ನಗರದಲ್ಲಿ ಇರತಕ್ಕವನು. ನನ್ನ ಹೆಸರು ಗಿರಿಧಾರಿ. ಇಲ್ಲಿಯ Lion's club ( ಲಾಯನ್ಸ ಕ್ಲಬ್ )ನ ಸಂಚಾಲಕ. ತಾವು ರಸಾಯನ ಶಾಸ್ತ್ರದಲ್ಲಿಷ್ಟೇ ಪಂಡಿತರಿರದೆ ಈಗಿನ ಮನ್ವಂತರದಲ್ಲಿ ಅವಶ್ಯ ವಿದ್ದ ಎಲ್ಲ ವಿದ್ಯೆಗಳಲ್ಲಿ ತಮ್ಮ ಅಗಾಧ ಪಾಂಡಿತ್ಯವಿರುವದೆಂದು ಜನಗಳು ಹೊಗಳುವದನ್ನು ನಾನು ಕೇಳಿರುವೆನು. ಈ ನಗರದಲ್ಲಿಯ ಜನರಿಗೆ ತಮ್ಮ ಪಾಂಡಿತ್ಯದ ಪರಿಚಯವಾಗಬೇಕೆಂದೂ ಜ್ಞಾನದ ಲಾಭ ದೊರೆಯ ಬೇಕೆಂದೂ ನಮ್ಮ ಕ್ಲಬ್ಬಿನ ಪರವಾಗಿ ತಮ್ಮದೊಂದು ಉಪನ್ಯಾಸವಿಡ ಬೇಕೆಂದು ತಮ್ಮನ್ನು ಕೇಳಲು ಬಂದಿರುವೆನು. "

" ತಮ್ಮ ಪರಿಚಯದಿಂದ ನನಗೆ ತುಂಬಾ ಆನಂದವಾಯಿತು. ನಾನು

ತಾವು ಅನ್ನುವಂತಹ ಪಂಡಿತನಲ್ಲ; ಅರಣ್ಯ ಪಂಡಿತ; ದೀಡ ಪಂಡಿತ. ನನ್ನಲ್ಲಿ ಪಾಂಡಿತ್ಯವಿರುವದೆಂದು ನೀವು ತಿಳಿದುಕೊಂಡಿದ್ದರೆ ಶುದ್ಧ ತಪ್ಪು. ನಾನೊಬ್ಬ ಜೀವನದಲ್ಲಿಯು ಮುಠ್ಠಾಳ. ಹಾಗೂ ಈಗಿನ ಮನ್ವಂತರದ ಅವಶ್ಯ ವಿದ್ಯೆಗಳು ಯಾವುವೆಂಬುದೇ ನನಗೆ ಗೊತ್ತು ಇಲ್ಲ" ಎಂದು ಪದ್ಮನಾಭನು ಅಂದನು.

"ತಾವು ಯಾವದೇ ವಿಷಯದಮೇಲೆ ಸುಲಲಿತವಾಗಿ ಮಾತನಾಡುವದೇ ಈ ಮನ್ವಂತರದ ಅವಶ್ಯವಿದ್ಯೆಯಾಗುವದು" ಅಂದನು ಗಿರಿಧಾರಿ.

"ಒಳಿತು, ಏನಾದರೂ ಹೇಳಬೇಕೆಂದರೆ ನನ್ನಲ್ಲಿ ವಿದ್ಯೆಯು ಸಾರವೇ ಇಲ್ಲ. ನಿಮ್ಮ ಮಾತಿನ ಅರ್ಥವನ್ನೂ ತಿಳಿಯದ ಮೂಢನು ನಾನು. ಪುಸ್ತಕಗಳ ಪಾನುಗಳನ್ನು ಚಿಕ್ಕ ಬಾಲಕರಂತೆ ತಿರುವಿ ಹಾಕಿರಬಹುದು. ಚಿಕ್ಕ ಬಾಲಕರು ತಿರುವಿ ಹಾಕಿದ ಪಾನುಗಳಲ್ಲಿಯ ಚಿತ್ರಗಳನ್ನಾದರೂ ಕಂಡು ಆನಂದ ಪಡುವರು. ನನ್ನಲ್ಲಿ ಆನಂದದ ಲವಲೇಶವೇ ಇಲ್ಲ. ನಾನು ಪಂಡಿತನೆಂದು ಹೊಗಳಿ ಕೋಳಿಯ ಕಾಲಿಗೆ ಗೆಜ್ಜೆಯನ್ನು ಕಟ್ಟಿದಂತೆ ಮಾಡಿದಿರಿ. ಗೆಜ್ಜೆಯನ್ನು ಕಟ್ಟಿದರೂ ತಿಪ್ಪೆಯಲ್ಲಿಯ ಕಾಳುಗಳನ್ನು ಕೋಳಿಯು ಆರಿಸದೇ ಬಿಡುವದೇ? ಅದರಂತೆ ನನ್ನ ಸ್ಥಿತಿ."

"ಹೀಗೆ ನುಡಿಯುತಕ್ಕದ್ದು ತಮ್ಮ ಸೌಜನ್ಯವೇ ಸರಿ. ತಾವು ಒಂದು ಉಪನ್ಯಾಸವನ್ನು ಕೊಟ್ಟರೆ ನೆಟ್ಟಗೆಂದು ತಮಗಿಷ್ಟು ನಾನು ಹೇಳಿಕೊಳ್ಳುವೆನು."

"ನನ್ನ ಉಪನ್ಯಾಸ ಬೇಡ."

"ತಾವು ಒಂದು ದಿನ ಸವಡು ಮಾಡಿಕೊಂಡು 'ಫೇರಾವೋ' ಎಂಬ ವಿಷಯದ ಮೇಲೆ ಉಪನ್ಯಾಸ ಕೊಟ್ಟರೆ ನೆಟ್ಟಗೆಂದು ಹೇಳಿಕೊಳ್ಳುವೆನು" ಎಂದು ಗಿರಿಧಾರಿ ನುಡಿದನು.

"ದಿನಾಲು ನಾವು 'ಫೇರಾವೊ' ದ ಸಂಗತಿ ವರ್ತಮಾನಪತ್ರದಲ್ಲಿ ಓದುತ್ತಿರುವೆವು. ಅದರ ಮೇಲೆ ಉಪನ್ಯಾಸ ಕೊಡುವದರಲ್ಲಿ ಏನು ತಾತ್ಪರ್ಯ?"

"ವರ್ತಮಾನ ಪತ್ರ ಓದುವವರಿಗೆ ಅದು ಗೊತ್ತು. ಓದದವರಿಗೆ ಹೇಗೆ ಗೊತ್ತಾಗಬೇಕು. ಕೆಲವರಿಗಂತೂ ಓದಿದರೂ ಗೊತ್ತಾಗುವದಿಲ್ಲ.

ಘೇರಾವೋ ಇದು ಇತ್ತೀಚಿನದೋ ಪುರಾತನದ್ದೋ ಎಂಬುದು ಕೂಡ ನನಗೆ ಗೊತ್ತಿಲ್ಲ. ಇದರ ಬಗ್ಗೆ ನಾನು ಕೇಳುತ್ತಿರುವದು ಮೊನ್ನೆ ಮೊನ್ನೆ ಬಂಗಾಲ ದಲ್ಲಿ ಘಟಿಸಿದ ಪ್ರಸಂಗಗಳ ಮೇಲಿಂದ. ಅದಕ್ಕೂ ಮೊದಲು ನಾನು ಇದರ ಬಗ್ಗೆ ಕೇಳಿರುವದಿಲ್ಲ. ಹಾಗೂ ಓದಿರುವದಿಲ್ಲ."

ಗಿರಿಧಾರಿಯ ಮಾತು ಕೇಳಿ ಪದ್ಮನಾಭನು ಕೈಯಲ್ಲಿಯ ಪುಸ್ತಕ ವನ್ನು ಕೆಳಗಿಟ್ಟು ತಲೆಯನ್ನು ತಿಕ್ಕಿಕೊಳ್ಳುತ್ತ ಸುಮ್ಮನೆ ಕುಳಿತುಕೊಂ ಡನು. ಪದ್ಮನಾಭನ ಮೊಗವನ್ನು ಗಿರಿಧಾರಿ ಆತುರದಿಂದ ನೋಡಹತ್ತಿ ದನು.

"ಘೇರಾವೋ ಮಾಡುವ ಸ್ವಭಾವ ಮಾನವನಲ್ಲಿ ಮೊದಲಿನಿಂದಲೂ ಇದ್ದದ್ದೇ. ಇದು ಇತ್ತೀಚಿನದಲ್ಲ. 'ನಿನ್ನ ಮನೆಯ ಮುಂದೆ ಧರಣೀ ಕುಳಿತುಕೊಳ್ಳುತ್ತೇನೆ; ನಿನ್ನ ತಲೆಬಾಗಿಲಕ್ಕೆ ನನ್ನ ತಲೆಯನ್ನು ಜಜ್ಜಿ ಪ್ರಾಣ ಬಿಡುತ್ತೇನೆ; ನಿನ್ನನ್ನು ಹೊರಗೆ ಬಿಡುವದಿಲ್ಲ' ಎಂಬೀ ಮಾತುಗಳಲ್ಲಿ ಘೇರಾವೋ ಅರ್ಥ ಅಡಕವಾಗಿರುವದಿಲ್ಲವೋ? ಅದರಲ್ಲಿಯ ಮುಖ್ಯ ಉದ್ದೇಶ ಒತ್ತಾಯ ಹಾಕುವದು. ಅದಕ್ಕೆ ದಿಗ್ಬಂಧನವೆಂದೆನ್ನಬಹುದು. ಸದುದ್ದೇಶವಿರಲಿ ಅಥವಾ ಇಲ್ಲದಿರಲಿ ಅದನ್ನು ಸಾಧಿಸುವ ಗುರಿಯನ್ನಾಗಿ ಟ್ಟುಕೊಂಡು ಮಾಡುವ ದಿಗ್ಬಂಧನವೇ ಘೇರಾವೋ ಎಂದು ನನಗನಿಸು ವದು. ಸಮಾಜವು ಬಾಲ್ಯಾವಸ್ಥೆಯಲ್ಲಿದ್ದಾಗ ಒಬ್ಬ ವ್ಯಕ್ತಿಯು ತನಗಾದ ಅನ್ಯಾಯವನ್ನು ಸರಿಪಡಿಸಿಕೊಳ್ಳಲಿಕ್ಕೆ ಏನೂ ಮಾರ್ಗವಿಲ್ಲದಾಗ ನೇರ ವಾಗಿ ಬಲಪ್ರಯೋಗ ಮಾಡದೆ ಅನ್ಯಾಯ ಮಾಡಿದವನ ಮನೆಯ ಮುಂದೆ ದಿವಸಾನುದಿವಸ ಕುಳಿತುಕೊಂಡು ಅಪಸವ್ಯಮಾರ್ಗದಿಂದ ದಿಗ್ಬಂಧನ ಮಾಡುತ್ತಿದ್ದನು."

ಎಂದು ಪದ್ಮನಾಭನು ನುಡಿದನು.

"ಅನ್ಯಾಯವಾಗದವರು ಇದನ್ನು ಮಾಡುತ್ತಿದ್ದಿಲ್ಲವೇ" ಎಂದು ಗಿರಿಧಾರಿಯು ಕೇಳಿದನು.

"ಆ ದಿಗ್ಬಂಧನದಿಂದ ಸಮಾಜದ ಸಹಾನುಭೂತಿಯನ್ನು ದೊರಕಿ ಸಿಕೊಂಡು ಸಮಾಜದ ಅಪರೋಕ್ಷ ಒತ್ತಾಯವನ್ನು ಅನ್ಯಾಯಮಾಡಿದ ವನ ಮೇಲೆ ತರಬೇಕೆಂಬುದೇ ಮುಖ್ಯ ಉದ್ದೇಶವಾಗಿತ್ತು. ಪುಂಡರೂ

ಲಂಡರೂ ತಮ್ಮ ಸ್ವಾರ್ಥೋಪಯೋಗಕ್ಕಾಗಿ ನ್ಯಾಯಾನ್ಯಾಯ ವಿಚಾರವಿಲ್ಲದೆ ಇದನ್ನು ಉಪಯೋಗ ಮಾಡಹತ್ತಿದ ಮೇಲೆ ಸಾಂಘಿಕ ಜೀವನವು ಮುಗ್ಗರಿಸಹತ್ತಿತು. ನಮ್ಮ ಕೃತಿಯು ಎಷ್ಟೋ ಸಾಧುವಿದ್ದರೂ ಅದರಿಂದ ಕಾಲಾಂತರದ ಮೇಲೆ ಸಮಾಜದ ಕಟ್ಟಳೆಯು ಬೆಳವಣಿಗೆಗೆ ಘಾತಕವಾಗುತ್ತಿದ್ದರೆ ಅದನ್ನು ನಾವು ಮಾಡಬಾರದು" ಎಂದು ಪದ್ಮನಾಭನು ಮಾತನಾಡಿದನು.

ಕೋಣೆಯಲ್ಲಿ ಯಾರೂ ಇಲ್ಲವೆಂದು ಪ್ರೇಮನಂದಿನಿಯು ಚಹವನ್ನು ತೆಗೆದುಕೊಂಡು ಬಂದಳು. ಕೋಣೆಯ ಹೊಸ್ತಿಲದಲ್ಲಿ ಕಾಲಿಡುತ್ತಲೇ ಗಿರಿಧಾರಿಯು ಕುಳಿತಿದ್ದನ್ನು ಕಂಡು ತಿರುಗಿದಳು. ಇದನ್ನು ಕಂಡು ಪದ್ಮನಾಭನು ಎದ್ದು ಬಂದು ಚಹವನ್ನು ತೆಗೆದುಕೊಂಡು ಗಿರಿಧಾರಿಗೆ ಕೊಟ್ಟನು. ಪ್ರೇಮನಂದಿನಿಯು ಹೊರಗೆ ನಿಂತ ಪದ್ಮನಾಭನಿಗೆ ಇನ್ನೊಂದು ಚಹವನ್ನು ತಂದುಕೊಟ್ಟಳು.

ಬಾಗಿಲದ ಕಡೆಗೆ ಬೆನ್ನು ಇದ್ದದರಿಂದ ಪ್ರೇಮನಂದಿನಿಯು ಕೋ-ಣೆಯ ಸಮೀಪಕ್ಕೆ ಬಂದು ಹೋದದ್ದನ್ನು ಗಿರಿಧಾರಿ ನೋಡಲಿಲ್ಲ. ಈರ್ವರೂ ಚಹವನ್ನು ತೆಗೆದುಕೊಳ್ಳುತ್ತ ಕುಳಿತುಕೊಂಡರು.

ಇಷ್ಟರಲ್ಲಿಯೇ ತಲೆಬಾಗಿಲದ ಹೊರಗೆ ಮೇಧಾವಿನಿ ಹಾಗೂ ಮಧುಮತಿಯು ಬರವನ್ನು ಒಳಗಿನಿಂದಲೇ ಕಂಡ ಪ್ರೇಮನಂದಿನಿಯು ಹೊರಗೆ ಬಂದು,

"ನಿಮಗೆ ಯಾರು ಬೇಕು" ಎಂದು ಅವರಿಗೆ ಕೇಳಿದಳು.

ಪ್ರೇಮನಂದಿನಿಯ ಆಕರ್ಷಕ ರೂಪವನ್ನು ಕಂಡು ಹಿಂದೆ ನಿಂತಿದ್ದ ಮಧುಮತಿಯು ಅವಳೆದುರಿಗೆ ಬಂದು ಉತ್ತರವನ್ನೀಯಬೇಕೆಂದವಳು ಅವಳನ್ನೇ ನೋಡುತ್ತ ನಿಂತಳು. ಅವಳು ಒಂದೇ ಸವನೆ ನೋಡುವದನ್ನು ಕಂಡು ಪ್ರೇಮನಂದಿನಿಯು,

"ಮಗು, ನೀನು ಜನರನ್ನು ನೋಡಿರುವದಿಲ್ಲವೋ" ಎಂದು ಕೇಳಿದಳು.

"ನೋಡಿರುವೆ, ಆದರೆ ನಿಮ್ಮಂತಹರನ್ನು ನಾನು ಎಂದೂ ನೋಡಿಲ್ಲ."

" ನನ್ನಲ್ಲಷ್ಟು ಹೆಚ್ಚಿನದೇನಿರುವದು? "

" ಮಧುಮತಿ, ಇರಲಿ ಬಿಡೇ. ಇದು ಪದ್ಮನಾಭನ ಮನೆಯಲ್ಲವೇ? ಅವರು ಮನೆಯಲ್ಲಿರುವರೇ?" ಎಂದು ಮೇಧಾವಿನಿ ಪ್ರೇಮನಂದಿನಿಯನ್ನು ಕೇಳಿದಳು.

" ಇರುವರು " ಎಂದು ಉತ್ತರ ಕೊಟ್ಟಳು ಪ್ರೇಮನಂದಿನಿ.

ತಾನು ಕನಸಿನಲ್ಲಿ ಕಂಡ ಹುಡುಗಿಯು ಇಷ್ಟು ಬೆಳೆದು ದೊಡ್ಡವ ಳಾಗಿ ತನ್ನೆದುರಿಗೆ ನಿಂತಿರುವಳೋ ಎಂದು ಮಧುಮತಿಯನ್ನು ನೋಡಿ ಪ್ರೇಮನಂದಿನಿಗೆ ಅನಿಸಹತ್ತಿತು. ತನ್ನ ಕಣ್ಣುಗಳಲ್ಲಿ ಏನಾದರೊಂದು ದೋಷವಿರಬಹುದೆಂದು ಅವುಗಳನ್ನು ತಿಕ್ಕಿಕೊಂಡು ನೋಡಿದಳು. ಕನಸಿ ನಲ್ಲಿ ನೋಡಿದ ಹುಡುಗಿಯೇ ಇವಳೆಂದು ಅವಳಿಗೆ ಮನವರಿಕೆಯಾ ಯಿತು. ಬಹಳ ವರುಷಗಳ ಹಿಂದೆ ತನಗೆ ಕಲ್ಲು ಒಗೆದ ಹುಡುಗಿಯೇ ಇವಳಿರಬಹುದೆಂದು ಪ್ರೇಮನಂದಿನಿಗೆ ಅನಿಸಹತ್ತಿತು.

" ನಿಮ್ಮದೇನು ಕೆಲಸ ಅವರ ಕಡೆಗೆ " ಎಂದು ಪ್ರೇಮನಂದಿನಿಯು ಕೇಳಿದಳು.

" ನಾವು ಕಾಲೇಜಿನಲ್ಲಿ ಕಲಿಯುವವರು. ಅವರು ನಮ್ಮ ಕಾಲೇಜಿ ನಲ್ಲಿ ಪ್ರಾಧ್ಯಾಪಕರಿರುವರು. ಅವರಿಗೆ ನಾವು ಆಮಂತ್ರಣ ಕೊಡಲು ಬಂದಿ ದ್ದೆವು. ಮತ್ತೇನೂ ಇಲ್ಲ " ಎಂದು ಮಧುಮತಿಯು ನುಡಿದಳು.

ಒಳಗೆ ಕುಳಿತಿದ್ದ ಪದ್ಮನಾಭನು ಅವರ ದನಿಯನ್ನು ಕೇಳಿ ತಾನೇ ಹೊರಗೆ ಬಂದು,

" ಇವರು ನಮ್ಮ ಕಾಲೇಜಿನಲ್ಲಿ ಓದತಕ್ಕವರು " ಎಂದು ಪ್ರೇಮ ನಂದಿನಿಗೆ ಹೇಳಿ ಅವರನ್ನು ಕರೆದುಕೊಂಡು ಹೋದನು.

" ನಿಮ್ಮ ಮಾತು ಮುಗಿದ ಮೇಲೆ ಹೋಗುವ ಮುಂದೆ ಇನ್ನೊಮ್ಮೆ ನನಗೆ ಭೆಟ್ಟಿಯಾಗಿ ಚೆನ್ನಾಗಿ ನೋಡಿಕೊಂಡು ಹೋಗು. "

ಎಂದು ಪ್ರೇಮನಂದಿನಿಯು ಮಧುಮತಿಗೆ ಹೇಳಿದಳು.

ಅಪರಿಚಿತಳಾದ ಪ್ರೇಮನಂದಿನಿಯ ಮಾತುಗಳನ್ನು ಕೇಳಿ ಸೋಜಿಗ ಹಾಗೂ ಆಶ್ಚರ್ಯವೆನಿಸಿ ಅವಳನ್ನು ಇನ್ನಷ್ಟು ನೋಡಬೇಕೆಂಬ ಇಚ್ಛೆ ಬಲಿಯಿತು. ಪ್ರೇಮನಂದಿನಿಗಾದರೂ ಮಧುಮತಿಯನ್ನು ನೋಡಬೇಕು,

ಅವಳೊಡನೆ ಮಾತನಾಡಬೇಕೆಂದು ಉತ್ಕಟೇಚ್ಛೆಯಾಯಿತು.

ಮಧುಮತಿ-ಮೇಧಾವಿನಿಯರನ್ನು ಕಂಡು ಗಿರಿಧಾರಿಯು, "ತಾವು ಇತ್ತಕಡೆಗೆ?" ಎಂದು ಅವರಿಗೆ ಕೇಳಿದನು.

"ನೀವು ಹೋದಲ್ಲಿ ನಾವು ಬರಬಾರದೋ" ಎಂದು ಮಧುಮತಿ ಗಿರಿಧಾರಿಗೆ ಕೇಳಿದಳು.

"ಇವರ ಪರಿಚಯು ನಿಮಗುಂಟೋ" ಎಂದು ಪದ್ಮನಾಭ ಕೇಳಿದನು.

"ಚೆನ್ನಾಗಿ ಉಂಟು" ಗಿರಿಧಾರಿ ನುಡಿದ.

"ಇವರು ನನ್ನ ಗೆಳತಿಯ ಅಣ್ಣ. ಅದರಿಂದ ಪರಿಚಯು" ಅಂದಳು ಮಧುಮತಿ.

"ಅಂದರೆ ನೀವೆಲ್ಲರೂ ಮನೆಯವರಾದಿರಿ" ಎಂದು ಪದ್ಮನಾಭ ನುಡಿದನು.

"ನಾನೊಬ್ಬಳಲ್ಲ, ಆವರಿಬ್ಬರು ಮನೆಯವರು" ಎಂದು ಮಧುಮತಿ ಉತ್ತರ ಕೊಟ್ಟಳು.

"ಅಣ್ಣಾ, ನಾವೂ ಬರುವೆವು, ಕುಳಿತುಕೊಳ್ಳಿ" ಎಂದು ಮೇಧಾವಿನಿ ಗಿರಿಧಾರಿಗೆ ನುಡಿದಳು.

"ಏಕೆ ತಾವು ಬಂದದ್ದು ? ತಮ್ಮಿಂದು ನನ್ನಲ್ಲಿ ಏನಾದರೂ ಕೆಲಸವುಂಟೋ" ಎಂದು ಕೇಳಿದನು ಪದ್ಮನಾಭ.

"ಇಂದು ಕಾಲೇಜದಲ್ಲಿ 'ನಮ್ಮ ಸಮಾಜಕ್ಕೆ ವಿವಾಹವಿಚ್ಛೇದನದ ಅವಶ್ಯಕತೆಯಿರುವದೋ' ಎಂಬ ವಿಷಯದ ಮೇಲೆ ಚರ್ಚಾಕೂಟವಿರುವದು. ಆ ಚರ್ಚಾಕೂಟದ ಅಧ್ಯಕ್ಷಸ್ಥಾನವನ್ನು ತಾವು ಅಲಂಕರಿಸಬೇಕೆಂದು ತಮ್ಮನ್ನು ಕೇಳಿಕೊಳ್ಳಲು ಬಂದಿರುವೆವು" ಎಂದು ಮಧುಮತಿಯು ಪದ್ಮನಾಭನಿಗೆ ಹೇಳಿದಳು.

"ನಾನು ಸಮಾಜಸುಧಾರಕನೂ ಅಲ್ಲ, ಸಮಾಜ ಶಾಸ್ತ್ರವನ್ನಾಗಲೀ ಅರ್ಥಶಾಸ್ತ್ರವನ್ನಾಗಲೀ ನಾನು ಅಭ್ಯಾಸ ಮಾಡಿದವನೂ ಅಲ್ಲ. ನಾನು ವಿಜ್ಞಾನ ಶಾಸ್ತ್ರವನ್ನು ಓದಿದವನು. ನನ್ನಿಂದ ನಿಮ್ಮ ಚರ್ಚೆಯಲ್ಲಿ ಏನು ಉಪಯೋಗವಾಗುವದು ? ಕಾಯಿದೆ ಪಂಡಿತನೂ ನಾನಲ್ಲ. ಇದು ನನ್ನ ಸ್ಥಿತಿ" ಎಂದು ಪದ್ಮನಾಭನು ನುಡಿದನು.

" ಯಾವದೇ ಶಾಸ್ತ್ರದ ಅಭ್ಯಾಸ ಬೇಕಾಗಿರುವದಿಲ್ಲ. ಸಮಾಜ ದಲ್ಲಿಯ ಸ್ಥಿತ್ಯಂತರವನ್ನು ಕಂಡವರು, ನೋಡಿದವರು ತಾವು. ಅದಕ್ಕೆ ತಾವು. ಯೋಗ್ಯರೆಂದು ಅಧ್ಯಕ್ಷಸ್ಥಾನವನ್ನು ವಹಿಸಲು ಕೇಳಿಕೊಳ್ಳಲು ಬಂದಿರುವೆವು " ಎಂದು ಮೇಧಾವಿನಿಯು ನುಡಿದಳು.

" ಸಮಾಜದಲ್ಲಿಯೇ ಬೆರೆತು ಅನುಭವ ಪಡೆದುಕೊಂಡವರನ್ನು ಕೇಳಿ ಕೊಂಡರೆ ನೆಟ್ಟಗಿತ್ತು " ಎಂದಂದನು ಪದ್ಮನಾಭನು.

" ತಮ್ಮ ಮೇಲಿನ ಪ್ರೇಮದಿಂದ ಹುಡುಗರು ಇಲ್ಲಿಯವರೆಗೆ ಕೇಳಲು ಬಂದಿರುವರು " ಎಂದು ಗಿರಿಧಾರಿಯು ನುಡಿದು ಸುಮ್ಮನಾದನು.

" ಸಮಾಜ ಸೇವಕರಿಷ್ಟು ಪ್ರಾಧ್ಯಾಪಕರಿಗೆ ಹೇಳಿರಿ " ಎಂದು ಮಧು ಮತಿಯು ಗಿರಿಧಾರಿಗೆ ಹೇಳಿದಳು.

" ಸಮಾಜಸೇವಕರೆಂದರೆ ನನಗೆ ತಿಳಿಯಲಿಲ್ಲ " ಅಂದ ಪದ್ಮನಾಭ.

" ಮಧುಮತಿ ಯಾವಾಗಲೂ ಕುಚೇಷ್ಟೆಯ ಹುಡುಗಿ. "

" ತಾವು ಸಮಾಜಸೇವಕರಲ್ಲವೇ ? ಸಮಾಜ ಘಾತಕರೋ " ಎಂದು ಮಧುಮತಿಯು ನಗುತ್ತ ನುಡಿದಳು.

" ನಾನು ಸೇವಕನೂ ಅಲ್ಲ, ಘಾತಕನೂ ಅಲ್ಲ. "

" ಅಂದರೆ ಭಕ್ಷಕರೋ " ಎಂದು ಗಿರಿಧಾರಿಗೆ ಮಧುಮತಿಯು ಕೇಳಿದಳು.

" ಸಮಾಜವು ತಿನ್ನುವ ಪದಾರ್ಥವೇನು ? " ಗಿರಿಧಾರಿ ಪ್ರಶ್ನೆ ಮಾಡಿದ.

" ಪರರ ಅಸ್ತಿತ್ವವನ್ನು ತಮ್ಮ ಸ್ವಾಧೀನಕ್ಕೆ ಉಪಯೋಗ ಮಾಡಿ ಕೊಳ್ಳುವದು, ತಮ್ಮ ಕಾಮದ ಯಜ್ಞಕುಂಡಲದಲ್ಲಿ ಜೀವನವನ್ನು ಅರಿಯದ ಹೆಂಗಸರನ್ನು ಆಹುತಿ ಕೊಡುವದು, ಪರರ ಹಣವನ್ನು ಮುಟ್ಟುವ ದಿಲ್ಲವೆಂದು ಹೇಳುತ್ತ ಹಣದೊಡೆಯರ ಸಮಕ್ಷಮವೇ ಜೇಬಿನಲ್ಲಿ ಹಾಕಿಕೊಳ್ಳುವದು, ಹೃದಯದಲ್ಲಿ ವಿಷವನ್ನಿಟ್ಟುಕೊಂಡು ಸಾಧುಗಳ ವೇಷ ಧರಿಸಿ ತ್ಯಾಗ, ಸತ್ಯ, ಅಹಿಂಸೆ ಮುಂತಾದವುಗಳ ಬಗ್ಗೆ ಹೇಳುತ್ತ ಕೇಳು ತ್ತಿರುವವರ ಕುತ್ತಿಗೆಯನ್ನೇ ಕೊಯ್ಯುವದು— ಇವೇ ಮೊದಲಾದವು ಗಳು ಸಮಾಜ ಭಕ್ಷಕರ ಹಾಗೂ ಘಾತುಕರ ಸವಿನಯ ಲಕ್ಷಣಗಳು "

ಎಂದು ಮಧುಮತಿಯು ನುಡಿದಳು.

" ತಮ್ಮ ಕಾಮದ ಯಜ್ಞಕುಂಡದಲ್ಲಿ ಜೀವನವನ್ನರಿಯುವ ಗಂಡಸರನ್ನು ಹೆಂಗಸರು ಆಹುತಿ ಕೊಡುವದಿಲ್ಲವೋ " ಎಂದು ಪದ್ಮನಾಭನು ತಟ್ಟನೆ ಮಾತನಾಡಿದನು.

ಪದ್ಮನಾಭನ ಈ ಮಾತುಗಳನ್ನು ಕೇಳಿ ಪ್ರೇಮನಂದಿನಿಯು ಒಳಗಿದ್ದವಳು ಸ್ವಲ್ಪ ಹೊರಗೆ ಬಂದಳು. ಮಧುಮತಿಯ ಮಾತಿನ ಪ್ರತಿಯೊಂದು ಶಬ್ದಗಳು ನೊಂದ ಜೀವಿ ಪ್ರೇಮನಂದಿನಿಗೆ ಶಾಂತಿಯನ್ನು ಕೊಡುತ್ತಿದ್ದವು.

ಪದ್ಮನಾಭನ ಪ್ರಶ್ನೆಗೆ ಮಧುಮತಿಯು ಉತ್ತರ ಕೊಡಲು ಹಿಂದೆ ಮುಂದೆ ನೋಡಹತ್ತಿದಳು.

" ಮಧುಮತಿಯು ಏನೋ ಮಾತಿನ ಓಘದಲ್ಲಿ ಮಾತನಾಡಿದಳು. ಅವಳಿಗೆ ಜಗತ್ತಿನ ಅನುಭವ ಏನೂ ಇಲ್ಲವೆಂದರೂ ಸೈ. ಅಂದ ಮೇಲೆ ಅವಳು ಉತ್ತರ ಕೊಡುವ ಬಗೆ ಹೇಗೆ " ಎಂದು ಮೇಧಾವಿನಿಯು ಮೆಲ್ಲಗೆ ನುಡಿದಳು.

ಮೇಧಾವಿನಿಯ ಮಾತನ್ನು ಕೇಳಿ ಪ್ರೇಮನಂದಿನಿಗೆ ತಾನು ಪದ್ಮನಾಭನಿಗೆ ಉತ್ತರ ಕೊಡಬೇಕೆಂದು ಅನಿಸಹತ್ತಿತು. ಪರಕೀಯರೆದುರಿಗೆ ತಾನು ಉತ್ತರ ಕೊಟ್ಟರೆ ಸಮಂಜಸ ತೋರಲಾರದೆಂದು ಒಮ್ಮೆ ಹೊಳೆಯಿತು. ಮಧುಮತಿ–ಮೇಧಾವಿನಿಯರು ಪರಕೀಯರಲ್ಲ, ಅವರು ತನ್ನ ಮಕ್ಕಳ ಹಾಗೆ ಎಂದು ಅವಳಿಗೆ ಅನಿಸಿತು. ಮಕ್ಕಳೆದುರಿಗೆ ಮಾತನಾಡಿದರೆ ಏನೂ ತಪ್ಪಿಲ್ಲೆಂದು ಪ್ರೇಮನಂದಿನಿಯು ಅಂದುಕೊಂಡಳು.

" ಹೆಂಗಸರು ಗಂಡಸರನ್ನು ತಮ್ಮ ಕಾಮಯಜ್ಞಕುಂಡದಲ್ಲಿ ಎಂದೂ ಆಹುತಿಕೊಡುವದಿಲ್ಲ. ಈ ನಿಯಮಕ್ಕೆ ಹಲವಾರು ಅಪವಾದಗಳಿರಬಹುದು " ಎಂದು ಪ್ರೇಮನಂದಿನಿಯು ಕೋಣೆಯ ಬಾಗಿಲ ಹತ್ತರ ನಿಂತು ಉತ್ತರವನ್ನಿತ್ತಳು.

ಮೇಧಾವಿನಿಯು ಪ್ರೇಮನಂದಿನಿ ಹಾಗೂ ಮಧುಮತಿಯನ್ನು ಎವೆ ಬಡಿಯದೆ ನೋಡಹತ್ತಿದಳು. ಮಧುಮತಿಯನ್ನು ಕಂಡು ಪ್ರೇಮನಂದಿನಿಯಲ್ಲಿ ಒಂದು ತರಹದ ಅನುರಾಗ, ಪ್ರೇಮ ಹುಟ್ಟಿತು. ಅವಳನ್ನು

ಎಷ್ಟು ನೋಡಿದರೂ ಅವಳ ಮನದಣಿಯಲಿಲ್ಲ. ಮಧುಮತಿಯ ಮಾತು ಪ್ರೇಮನಂದಿನಿಯ ಬಾಯಿಂದ ಉಚ್ಚಿ ಬಿದ್ದಂತೆ ತೋರಹತ್ತಿತು. ಆವರಲ್ಲಿಯ ಏಕರೂಪ ಸಾಮ್ಯ ಮೇಧಾವಿನಿಗೆ ದಂಗುಬಡಿಸಿತು.

" ಹೆಣ್ಣುಗಂಡಿನ ಸಂಬಂಧ ಹೆಣ್ಣಿಗೂ ತಿಳಿಯದು, ಗಂಡಿಗೂ ತಿಳಿಯದು, ಹೆಣ್ಣು ಗಂಡನ್ನು ಬೈಯುವದು, ಗಂಡು ಹೆಣ್ಣನ್ನು ಬೈಯುವದು, ಇದು ನಿತ್ಯ ನಡೆದದ್ದು. ಹೆಣ್ಣು ಬಯ್ಯುತ್ತ ಗಂಡನ್ನು ಕೂಡಿಕೊಳ್ಳುವದು, ಗಂಡು ಬೈಯ್ದು ಹೆಣ್ಣನ್ನು ಕೂಡಿಕೊಳ್ಳುವದು. ಇದರ ಇಂಗಿತವೇ ನನಗೆ ತಿಳಿಯದು " ಎಂದು ಪ್ರೇಮನಂದಿನಿಯು ಅಂದಳು.

" ಹೆಂಗಸರಲ್ಲಿ ತ್ಯಾಗ ಬುದ್ಧಿಯು ಹೆಚ್ಚಾಗಿರುವದು " ಎಂದು ಗಿರಿಧಾರಿ ನುಡಿದನು.

" ನಿಮಗೆ ಹೆಣ್ಣಿನ ಸಂಪರ್ಕ ಬಂದಿರುವದೋ " ಎಂದು ಕೇಳಿದ ಪದ್ಮನಾಭ.

" ಸಂಪರ್ಕ ಬರಬೇಕೆಂಬ ನಿಯಮವಿಲ್ಲ. ಬರದಿದ್ದರೂ ನಿರೀಕ್ಷಿಸಿ ಹೇಳಬಹುದು. ನಾನು ಕಣ್ಣಾರೆ ಕಂಡಿದ್ದರ ಮೇಲಿಂದ ಹೇಳಿದೆನು. ನಮ್ಮ ಮಧುಮತಿಯು ಅಮ್ಮ ವೇದವತಿಯು ಇದಕ್ಕೆ ಆದರ್ಶಳು. ಅವಳ ತ್ಯಾಗ ಬುದ್ಧಿಯನ್ನು ಎಷ್ಟು ಹೊಗಳಿದರೂ ಸಾಲದು. ಅವಳು ಒಂದು ದಿನವಾದರೂ ತನ್ನ ಪರಿಸ್ಥಿತಿಯನ್ನು ಹಳಿಯಲಿಲ್ಲ. ತನ್ನ ಮೈಮೇಲೆ ಎಷ್ಟೋ ಸಲ ಒಬ್ಬ ಮುರ್ಖಾಳ ಕೈಮಾಡಿದ್ದರೂ ಅವಳು ಆತನ ಮೇಲೆ ದೂರು ಮಾಡಲಿಲ್ಲ " ಎಂದು ಗಿರಿಧಾರಿ ನುಡಿದ.

" ಆ ಮುರ್ಖಾಳ ಮೈಮೇಲೆ ಕೈಮಾಡಿದ್ದು ವೇದವತಿಗೆ ಬೇಕಾಗಿರಬಹುದು. ಅದಕ್ಕಾಗಿಯೋ ಅವಳು ದೂರು ಮಾಡದೆ ಸುಮ್ಮನಿದ್ದಂತೆ ತೋರುವದು " ಎಂದು ಪ್ರೇಮನಂದಿನಿ ಅಂದಳು.

" ಅದನ್ನು ನಾನು ಒಪ್ಪುವದಿಲ್ಲ. ಅವನ ಹೇಯವಾದ ಕೃತಿಯಿಂದ ಪೆಟ್ಟು ತಗಲಿ ತಾನು ಪ್ರಾಣ ಬಿಟ್ಟರೂ ತನ್ನ ಮೇಲೆ ಕೈಮಾಡಿದ ಮನುಷ್ಯನು ಯಾರು ? ಅವರ ಹೆಸರೇನು ಎಂಬುದನ್ನು ಅವಳು ಯಾರಿಗೂ ಹೇಳಲಿಲ್ಲ. ಅವನ ಮೇಲೆ ಏನೂ ಕ್ರಮ ತೆಗೆದುಕೊಳ್ಳಬಾರದೆಂದು ತನ್ನ ಮಗ ವಿದ್ಯಾಚರಣನಿಗೆ ಹೇಳಿದಳಂತೆ " ಎಂದು ಗಿರಿಧಾರಿ ನುಡಿದನು.

" ಅಮ್ಮ ಹಾಗೆ ಹೇಳಿದ್ದು ನಾನು ಕೇಳಿರುವೆ " ಎಂದು ಮಧುಮತಿ ಹೇಳಿದಳು.

" ಹಾಗೆ ಕೈಮಾಡಿದ ಮುರ್ಖ್ಯಾಳ ಅವಳ ಪತಿಯಾಗಿರಬಹುದು. ಕೆಲವು ಹೆಂಗಸರು ಪತಿಯೇ ದೇವರೆಂದು ಭಾವಿಸುವರು. ದೇವರು ಕೈಮಾಡಿದರೆ ಮನುಷ್ಯನು ಆತನನ್ನು ಹೊಡೆಯಲು ಹೋಗುವನೋ " ಎಂದು ಪ್ರೇಮನಂದಿನಿಯು ಹೇಳಿದಳು.

" ದೇವರು ಕೈಗೆ ಸಿಕ್ಕರಲ್ಲವೇ ಆತನನ್ನು ಹೊಡೆಯುವದು ? " ಅಂದಳು ಮಧುಮತಿ.

" ಪತಿಯೇ ದೇವರೆಂದು ಭಾವಿಸಬೇಕಾದರೆ ಸ್ತ್ರೀಯಲ್ಲಿ ತ್ಯಾಗಬುದ್ಧಿ ಇರಲೇಬೇಕಾಗುವದು. ನನ್ನದೆಂಬುವ ಭಾವನೆಯನ್ನು ಕಳೆದುಕೊಳ್ಳದೆ ಯಾರೂ ತ್ಯಾಗಿಯಾಗಲಾರರು. ಭೋಗದಲ್ಲಿ ತ್ಯಾಗವಿರುವದಿಲ್ಲ " ನುಡಿದನು ಗಿರಿಧಾರಿ. "

" ತ್ಯಾಗದಲ್ಲಿ ಭೋಗವಿರುವದೆಂದು ನೀವು ಹೇಳಲಿಲ್ಲ ಗಿರಿಧಾರಿ. " ಎಂದು ಮಧುಮತಿ ಹೇಳಿದಳು.

ಅವರ ಈ ಮಾತುಗಳನ್ನು ಕೇಳಿ ಪದ್ಮನಾಭನ ಮನಸ್ಸಿನಲ್ಲಿ ಅಸಹ್ಯ ವೇದನೆಯುಂಟಾಯಿತು. ವೇದನೆಯನ್ನು ವ್ಯಕ್ತಪಡಿಸಲಾರ.

" ವೇದವತಿಯು ವಿಧವೆಯೆಂದು ಎಲ್ಲರೂ ಹೇಳುತ್ತಿದ್ದರು. ಹೀಗಾದ ಮೇಲೆ ಅವಳಿಗೆ ಗಂಡನೆಲ್ಲಿಂದ ಬರಬೇಕು. ಅವಳ ಚಾರಿತ್ರ್ಯ ನಿಷ್ಕಲಂಕ" ಎಂದು ಗಿರಿಧಾರಿ ನುಡಿದನು.

" ನಮ್ಮ ತಂದೆ ಇರುವದಾಗಿದ್ದರೆ ನಮ್ಮ ಅಮ್ಮನು ನಮಗೆ ಒಂದು ದಿನವಾದರೂ ಹೇಳುತ್ತಿದ್ದಳು. ನಾನು ಬೆಳೆದು ಇಪ್ಪತ್ತು ವರುಷವಾಗಿರಬಹುದು. ನಾನು ಒಂದು ದಿನವಾದರೂ ಅಮ್ಮನ ಬಾಯಿಂದ ನಮ್ಮ ತಂದೆಯಿರುವನೆಂಬ ಮಾತು ಬರಲಿಲ್ಲ. ತಾಯಿಯು ವಿಧವೆಯೆಂದು ಅರಿತಮೇಲೆ ತಂದೆಯಿರುವನೆಂಬ ವಿಚಾರ ಯಾವ ಮಕ್ಕಳ ತಲೆಯಲ್ಲಿಯೂ ಬರುವದಿಲ್ಲ " ಎಂದು ಮಧುಮತಿಯು ಹೇಳಿದಳು.

" ವೇದಪತಿಯು ವಿವಾಹವಿಚ್ಛೇದನವೇಕೆ ಆಗಿರಬಾರದು "? ಎಂದು ಬಹಳೇ ವಿಚಾರ ಮಾಡುತ್ತ ಪದ್ಮನಾಭನು ನುಡಿದನು.

" ಅವಳ ಕೊರಳಲ್ಲಿ ಮಂಗಳಸೂತ್ರವಿದ್ದಿಲ್ಲ " ಗಿರಿಧಾರಿ ಅಂದನು.

" ವಿವಾಹವಿಚ್ಛೇದನಕ್ಕೂ ಮಂಗಳಸೂತ್ರಕ್ಕೂ ಏನೂ ಸಂಬಂಧವಿರುವದಿಲ್ಲ. ಸಪ್ತಪದಿಯ ಕಾಲಕ್ಕೆ ಹೆಂಡತಿಯ ಸೆರಗಿನ ತುದಿಗೂ ಗಂಡನು ಹೊತ್ತುಕೊಂಡ ಧೋತರದ ತುದಿಗೂ ಹಾಕಿದ ಗಂಟಿನ ದ್ಯೋತಕವೇ ಹೆಂಡತಿಯ ಕೊರಳಲ್ಲಿಯ ಮಂಗಲಸೂತ್ರ. ವಿವಾಹವಿಚ್ಛೇದನವಾಗಿದ್ದರೆ ಮಂಗಲಸೂತ್ರವನ್ನು ಅವಳೇಕೆ ಧರಿಸಬೇಕು ? " ಎಂದು ಪದ್ಮನಾಭನು ನುಡಿದನು.

ಪದ್ಮನಾಭನ ಮಾತು ಮಧುಮತಿಯ ಅಂತಃಕರಣಕ್ಕೆ ಧಕ್ಕೆಹಚ್ಚಿತು. ಕಣ್ಣುಗಳು ಸಿಟ್ಟಿನಿಂದ ಕೆಂಪಾದವು. ಸಿಟ್ಟು ತಡೆಯದೆ ಎದ್ದು ನಿಂತಳು ಮಧುಮತಿಗೆ ಸಿಟ್ಟು ಬಂದಿರುವದೆಂದು ಮೇಧಾವಿನಿಯು ಕಂಡುಹಿಡಿದು ತಾನೂ ಎದ್ದು ನಿಂತಳು.

" ಪ್ರಾಧ್ಯಾಪಕರೇ ನೀವು ಆಡಿದ ಮಾತು ನನಗೆ ಸರಿಬರಲಿಲ್ಲ. ನನ್ನ ಅಮ್ಮ ವಿವಾಹವಿಚ್ಛೇದನ ಮಾಡಿಕೊಳ್ಳುವಷ್ಟು ಸುಖಾಭಿಲಾಷಿಯಲ್ಲ. ನುಡಿಯಲ್ಲಿ ಆಧುನಿಕ ವಿಚಾರಗಳ ಸಂಸ್ಕಾರವಿದ್ದರೂ ನಡೆಯಲ್ಲಿ ನಮ್ಮ ಹಳೇ ಸಂಸ್ಕೃತಿಯನ್ನು ಕಾಯ್ದುಕೊಂಡು ಬಂದವಳು. ನಾನು ಮಗಳೆಂದು ವರ್ಣನೆ ಮಾಡುವದಿಲ್ಲ. ವಿವಾಹವಿಚ್ಛೇದನ ಮಾಡಿಕೊಂಡ ಆಕೆಯ ಗಂಡನು ನನ್ನೆದುರಿಗೆ ಬಂದರೆ ಅವನನ್ನು ಹೊಡೆಯದೆ ನಾನು ಬಿಡುವದಿಲ್ಲ. ನಾನು ಚಿಕ್ಕವಳಿದ್ದಾಗ ಯಾವಳೋ ಒಬ್ಬಳು ನನ್ನನ್ನು ಮುದ್ದಿಡಲು ಬಂದಾಗ್ಗ ಚೂಪಾದ ಕಲ್ಲಿನಿಂದ ಅವಳಿಗೆ ಹೊಡೆದಂತೆ ಆತನಿಗೆ ಹೊಡೆಯುವದಿಲ್ಲ. ಹಾವಿನ ಹೆಡೆಯನ್ನು ಕಲ್ಲಿನಿಂದ ಜಜ್ಜುವಂತೆ ಅವನ ತಲೆಯನ್ನು ದೊಡ್ಡ ಕಲ್ಲಿನಿಂದ ಜಜ್ಜಿ ಬಿಡುವೆನು. ಅಂತಹ ಅಧಮನಿಗೆ ಬುದ್ಧಿಯನ್ನು ಕಲಿಸಲೇಬೇಕು. " ಎಂದು ರೋಷದಿಂದ ಮಧುಮತಿಯು ನುಡಿದಳು.

ಅವಳ ಮಾತು ಕೇಳಿ ಪ್ರೇಮನಂದಿನಿಯ ಕಣ್ಣುಗಳು ಕತ್ತಲಿಗಟ್ಟಿದವು.

ಪದ್ಮನಾಭನೂ ತಿಳಿಯದೆ ಕಲ್ಲುಗೊಂಬೆಯಂತೆ ಕುಳಿತುಬಿಟ್ಟನು.

" ಮಧುಮತಿ, ನೀನು ನುಡಿಯುವದು ಸತ್ಯ. ಆತನು ಅಧಮನಿರಬೇಕು; ಅಧಮನು ! ಅಧಮನು !! " ಎಂದು ಪದ್ಮನಾಭನು ಗುಣಗುಡಹತ್ತಿದನು.

# ೬

ವಿವಾಹವಿಚ್ಛೇದನವು ಸಮಾಜದ ಪ್ರಗತಿಗೆ ಸಾಧಕವೋ ಬಾಧಕವೋ ಎಂಬೀ ವಿಷಯದ ಮೇಲೆ ಚರ್ಚಾಕೂಟವನ್ನು ಕಾಲೇಜ ಗ್ಯಾಲರಿ ಹಾಲದಲ್ಲಿ ಏರ್ಪಾಟು ಮಾಡಿದ್ದರು. ಗ್ಯಾಲರಿ ಹಾಲ ವಿದ್ಯಾರ್ಥಿ ವಿದ್ಯಾರ್ಥಿನಿಯರಿಂದ ಕಿಕ್ಕಿರಿದು ಹೋಗಿತ್ತು. ಚರ್ಚಾಕೂಟಕ್ಕೆ ಪದ್ಮನಾಭನು ಅಧ್ಯಕ್ಷನಾಗಿದ್ದನು. ಮೇಧಾವಿನಿ-ಮಧುಮತಿಯರಿಬ್ಬರೂ ಚರ್ಚಾಕೂಟದಲ್ಲಿ ಭಾಗವಹಿಸುವವರಿದ್ದರು. ನಲಿನಿಕಾಂತ—ಹಾಗೂ ಉಮೇಶರು ಕೂಡ ಭಾಗವಹಿಸತಕ್ಕವರು.

ಹೆಂಗಸು ಬುದ್ಧಿಗೇಡಿ, ಗಂಡಸರಿಂದ ಪಾರಾಗಬೇಕಾದರೆ, ಅಬಲೆಯರ ಮೇಲೆ ಸಬಲರೆಂದು ಮಾಡುವ ದಬ್ಬಾಳಿಕೆಯನ್ನು ಎದುರಿಸಬೇಕಾದರೆ, ಸ್ತ್ರೀಯರ ಬುದ್ಧಿಗೆ ವಿಕಾಸವನ್ನು ಕೊಡಬೇಕಾದರೆ ವಿವಾಹವಿಚ್ಛೇದನವು ಅವಶ್ಯವಾಗಿದೆ. ಹೆಂಗಸು ಕೊನೆಯವರೆಗೆ ತನ್ನ ಕೈಗೊಂಬೆಯಾಗಿ ಉಳಿಯಬೇಕೆಂದು, ಗಂಡಸು ಅವಳ ಬುದ್ಧಿಯು ಕುಂಠಿತವಾಗುವಂತೆಯೂ, ಅವಳಲ್ಲಿಯ ಧೈರ್ಯವು ಲಯಹೊಂದಿ ಅಧೈರ್ಯವು ಬೇರೂರುವಂತೆಯೂ, ಸಮಾಜದಲ್ಲಿ ಕಟ್ಟುನಿಟ್ಟುಗಳನ್ನು ನಿರ್ಮಾಣ ಮಾಡಿರುವನು, ಎಂದು ಮಧುಮತಿಯು ಮಂಡಿಸಿದಳು. ಇದು ಸಮಾಜದ ಪ್ರಗತಿಗೆ ಸಾಧಕವಾಗಿರದೆ ಬಾಧಕವಾಗುವದೆಂದು ಮೇಧಾವಿನಿಯು ವಾದಿಸಿದಳು. ಸಮಾಜದಲ್ಲಿ ಬಳಲುತ್ತಿರುವ ಹೆಂಗಸರ ಒಂದೆರಡು ಉದಾಹರಣೆಗಳನ್ನು ಎತ್ತಿಕೊಂಡು ವಿವಾಹವಿಚ್ಛೇದನವೇ ಅವಶ್ಯವೆಂದು ಮಂಡಿಸುವದು ಕೂಪಮಂಡೂಕ ನ್ಯಾಯವಾಗುವದೆಂದು ಮೇಧಾವಿನಿಯು ಪ್ರತಿಪಾದಿಸಿದಳು. ಕರ್ಕಶ ಹೆಂಗಸರಿಂದ ಪ್ರಪಂಚದಲ್ಲಿ ಪೆಟ್ಟುತಿಂದ ಎಷ್ಟೋ ಪುರುಷರು ತಮ್ಮ ಜೀವನದ ಪರಿಮಿತಿಯನ್ನು ಸಂಕುಚಿತ ಮಾಡಿಕೊಂಡು ತೊಳಲಿ ಬಳಲುವರು. ಅಂತಹ ಗಂಡಸರು ವಿವಾಹವಿಚ್ಛೇದನವು ಬೇಕೆಂದು ಬೇಡಬಹುದು. ಇಂತಹ ಉದಾಹರಣೆಗಳಾದರೂ ವಿರಳ. ಸ್ತ್ರೀ ಪುರು

ಪರ ಸಮರಸವೇ ದಾಂಪತ್ಯ ಜೀವನದ ಗುಟ್ಟು" ಎಂದು ಮೇಧಾವಿನಿಯು ವಾದದ ಮುಖ್ಯಾಂಶವಾಗಿತ್ತು.

ನಲಿನಿಕಾಂತ-ಉಮೇಶರಿಬ್ಬರೂ ಹೆಂಗಸರ ವಾಗ್ಬಾಣಕ್ಕೆ ಹೆದರಿ ದಿಕ್ಕೆಟ್ಟು ಓಡಿ ಹೋಗಿ ಪ್ರಪಂಚ ಪಾಣಿಪತ್ತದಲ್ಲಿ ಪ್ರಾಣವನ್ನು ನೀಗಿದ ಪುರುಷರ ಚಿತ್ರವನ್ನು ಚಿತ್ರಿಸಿದರು. ಹೆಂಗಸರ ವ್ಯಭಿಚಾರಕ್ಕೆ ಹೇಸಿ ಹುಚ್ಚರಾಗಿ ಬೀದಿಯಲ್ಲಿ ಅಲೆಯುತ್ತಿರುವ ಗಂಡಸರ ಚಿತ್ರಕ್ಕೆ ರಂಗ ಬೇರಂಗವನ್ನು ಹೊಯ್ದು ಸಭಿಕರ ಮುಂದೆ ಮಂಡಿಸಿದರು.

ದಾಂಪತ್ಯ ಜೀವನದ ವಿರಸವೇ ಗಂಡು ಹೆಣ್ಣಿನ ಪ್ರಗತಿಯ ನೇಗಟ್ಟು. ಸಮರಸವಿದ್ದರೆ ಗಂಡು ಹೆಣ್ಣು ಪಶು ಸಮಾನವಾಗುವವು. ಬುದ್ಧಿಯ ವಿಕಾಸವೇ ಆಗುವದಿಲ್ಲ. ಸಮರಸದಿಂದ ಹೆಣ್ಣಿನ ಮಾತಿಗೆ ಗಂಡು ಗೋಣು ಹಾಕುವದು; ಗಂಡಿನ ಮಾತಿಗೆ ಹೆಣ್ಣು ಮೂಕದೆವ್ವದಂತೆ ತಲೆ ಅಲ್ಲಾಡಿಸುವದು— ಎಂದು ಮತ್ತೊಬ್ಬನು ತನ್ನ ವಾದವನ್ನು ಮಂಡಿಸಿದನು.

ಪದ್ಮನಾಭನು ವಿದ್ಯಾರ್ಥಿ-ವಿದ್ಯಾರ್ಥಿನಿಯರ ಚರ್ಚೆಯು ಮುಗಿದ ಮೇಲೆ ಸಮಾರೋಪಕ್ಕೆ ಎದ್ದು ನಿಂತನು.

" ನಿಮ್ಮ ವಿಚಾರ ಪೂರಿತವಾದ ಚರ್ಚೆಯನ್ನು ಕೇಳಿ ನನಗೆ ಬಹಳೇ ಸಂತೋಷವಾಯಿತು. ವಿವಾಹವಿಚ್ಛೇದನವು ಸಮಾಜಕ್ಕೆ ಸಾಧಕವೋ ಬಾಧಕವೋ ಎಂಬುವದನ್ನು ನಾನು ಚರ್ಚಿಸದೆ ನಿಮ್ಮೆಲ್ಲರ ಅನುಮತಿಯಿಂದ ಒಂದು ಕತೆಯನ್ನು ಹೇಳುವೆನು. ಕತೆ ಪ್ರಸ್ತುತಕ್ಕೆ ಸಮಂಜಸವೋ ಅಸಮಂಜಸವೋ ಎಂಬುವದನ್ನು ನೀವೇ ವಿಚಾರ ಮಾಡಿಕೊಳ್ಳಿ.

ಗುಬ್ಬಿಯ ಕತೆಯಿಂದಾದರೂ ತಿಳಿದುಕೊಳ್ಳಿ; ಕಾಗೆಯ ಕತೆಯಿಂದಾದರೂ ಅರಿತುಕೊಳ್ಳಿ; ಒಂದು ಮಾತ್ರ ನಿಮಗೆ ಹೇಳುವದೇನಂದರೆ, ಕತೆಯಲ್ಲಿಯ ಪಾತ್ರಗಳು ಕಾಲ್ಪನಿಕ, ನಿಜವಲ್ಲ. ಯಾವ ವ್ಯಕ್ತಿಗೂ ಸಂಬಂಧಿಸಿಲ್ಲ.

ಒಂದು ಊರಲ್ಲಿ ಒಬ್ಬ ಸುಶಿಕ್ಷಿತ ಗ್ರಹಸ್ಥನಿದ್ದನು. ಆತನು ಹೇಳಿಕೊಳ್ಳುವಷ್ಟು ಧನಾಢ್ಯನಿರದಿದ್ದರೂ ಉಂಡುಟ್ಟು ಸುಖದಿಂದಿದ್ದನು. ಅವನ ಹೆಂಡತಿ ಬಹು ಕರ್ಕಶಿ, ರೂಪ ಹೆದರುವದಾಗಿತ್ತು. ಅವಳ ಮಾತುಗಳ ಅಬ್ಬರಕ್ಕೆ ಕಾರ್ಮೋಡಗಳ ಗುಡುಗು ಹೆದರಿ ಅರಬೀ ಸಮುದ್ರಕ್ಕೋ

ಇಲ್ಲವೆ ಬಂಗಾಲ ಉಪಸಾಗರಕ್ಕೋ ಓಡಿ ಹೋಗುತ್ತಿದ್ದವು. ಅವಳ ಹೆಜ್ಜೆಯ ಸಪ್ಪಳಕ್ಕೆ ನಿದ್ರೆ ಹೋದ ಕುಂಭಕರ್ಣನಂತಹ ಮನುಷ್ಯನೂ ಕೂಡ ಹೆದರಿ ಏಳುತ್ತಿದ್ದನೆಂದು ಜನರು ಅನ್ನುತ್ತಿದ್ದರು. ಅವಳ ಚೀರುವ ಧ್ವನಿಯಿಂದ ತನ್ನ ಕಿವಿ ಪಟಲಗಳು ಹರಿದು ಹೋಗಬಾರದೆಂದು ಗಂಡನು ಕಿವಿಗಳಲ್ಲಿ ಅರಳೆಯನ್ನು ಇಟ್ಟುಕೊಳ್ಳುತ್ತಿದ್ದನು.

ಗಂಡನು ರೂಪವಂತ; ಮೃದು ಮಾತಿನವ. ತನ್ನ ನಿತ್ಯ ನೈಯತ್ತಿಕ ಕರ್ಮಗಳನ್ನು ಮಾಡಿಕೊಂಡು ಕಾಲಕಳೆಯುತ್ತಿದ್ದನು. ತನ್ನ ನೆರಳಿಗೆ ತಾನು ಹೆದರಿ ನಡೆಯತಕ್ಕವನು. ಹೆಂಡತಿಯ ಆರ್ಭಟಕ್ಕೆ ಕೆಳಗೆಬಿಟ್ಟ ಮೊಗವನ್ನು ಮೇಲಕ್ಕೆತ್ತಿದರೆ ಅವನಿಗೊಂದು ಆಣೆ. ತನ್ನ ಪೂರ್ವ ಜನ್ಮದ ಕರ್ಮದ ಫಲವೆಂದು ತಿಳಿದು ಅವನು ಅವಳೊಡನೆ ಪ್ರಪಂಚ ಮಾಡುತ್ತಿದ್ದನು. ತನ್ನ ಪಾಲಿಗೆ ಬಂದದ್ದೇ ಪಂಚಾಮೃತವೆಂದು ಆತನು ತಿಳಿದುಕೊಳ್ಳುತ್ತಿದ್ದನು.

ಪರರ ಯೋಗಕ್ಷೇಮವನ್ನು ಯಾವಾಗಲೂ ಕೇಳತಕ್ಕವನು. ಅನು ಕಂಪದಿಂದ ಮಾತನಾಡತಕ್ಕವನು. ಆತನ ಅನುಕಂಪದ ಮಾತುಗಳಿಗೆ ಜನರು ಯಾವಾಗಲೂ ಅವನ ಸುತ್ತಲು ಮುಗಿಬೀಳುತ್ತಿದ್ದರು.

ಹೀಗೆ ಕಾಲಕಳೆಯುತ್ತಿರುವಾಗ ದೇವರು ಅವನಿಗೆ ಒಂದು ಗಂಡು ಮಗುವನ್ನು ಕೊಟ್ಟನು. ಮಗನು ತಾಯಿಯ ಗುಣಗಳನ್ನು ಅನುಕರಣೆ ಮಾಡಬಾರದೆಂದು ತನಗೆ ಶಕ್ಯವಿದ್ದಷ್ಟು ಮುಂಜಾಗ್ರತೆಯನ್ನು ವಹಿಸಿದ್ದನು. ಆದರೆ ಮಗನಲ್ಲಿ ತಾಯಿಯ ಗುಣಗಳೂ ಹಾಗೂ ತಂದೆಯ ಗುಣಗಳೂ ಸಮಾವೇಶವಾಗಿದ್ದವು. ಮಗನು ಪೂರ್ಣ ತಂದೆಯನ್ನೂ ಹೋಲಲಿಲ್ಲ. ಇತ್ತ ಪೂರ್ಣ ತಾಯಿಯನ್ನೂ ಹೋಲಲಿಲ್ಲ. ತದರ್ಧ ಮದರ್ಧನಾದನು.

ಇಂತಹ ರಕ್ಕಸಿಗೆ ಒಬ್ಬ ಕಾಮುಕೇಳಿಯ ಗೆಳೆಯನು ಗಂಟುಬಿದ್ದನು. ಆತನೂ ರಕ್ಕಸನಿರಬಹುದು. ಅವರ ಸರಸಸಲ್ಲಾಪ ಹಾಗೇ ನಡೆದು ಅವರ ವಿಷಯವು ಬೀದಿಯಲ್ಲಿಯ ಮಾತಾಯಿತು. ಇವನ್ನು ಅರಿಯದ ಊರಲ್ಲಿಯ ಒಂದು ನರಪಿಳ್ಳೆಯೂ ಕೂಡ ಉಳಿಯಲಿಲ್ಲ. ಜನರು ಆಡಿ ಕೊಳ್ಳುವದು ಅವಳ ಕಿವಿಗೆ ಮುಟ್ಟದೆ ಬಿಡಲಿಲ್ಲ. ಜನರ ವಿರುದ್ಧ ಗರ್ಜಿಸ

ತೊಡಗಿದಳು. ಅವಳು ಓಣಿಯಲ್ಲಿ ಬರುತ್ತಿದ್ದರೆ ಜನರು ಅವಳನ್ನು ತಪ್ಪಿಸಿ ಬೇರೆ ಕಡೆಯಿಂದ ಹೋಗುತ್ತಿದ್ದರು. ಯಾರಾದರೂ ಅಪ್ಪಿತಪ್ಪಿ ಭೆಟ್ಟಿಯಾದರೆ ಹಿಟ್ಟಿನ ಚೀಲವನ್ನು ನಾಯಿಯು ಹರಿಯುವಂತೆ ಅವರನ್ನು ಹರಿದುಕೊಳ್ಳುತ್ತಿದ್ದಳು. ಎಲ್ಲರೂ ವ್ಯಭಿಚಾರಿಗಳು; ತಾನೊಬ್ಬಳೇ ಮಾತ್ರ ಕಲಿಯುಗದ ಗರತಿ ಗಂಗಾದೇವಿ ಎಂದು ಕೂಗುತ್ತಿದ್ದಳು. ಮನೆಯಲ್ಲಿ ಈ ತರಹದ ರಂಭಾಟ ಪ್ರಾರಂಭವಾಯಿತು. ಇದನ್ನು ಕಂಡು ಸಹಿಸಲಾರದೆ ಆಕೆಯ ಗಂಡನು ಎದೆಯೊಡೆದುಕೊಂಡು ಸತ್ತನು.

ಗಂಡ ಇದ್ದ ಕಾಲಕ್ಕೇ ಅವಳನ್ನು ಕೇಳುವವರು ಯಾರೂ ಇದ್ದಿಲ್ಲ. ಗಂಡ ಸತ್ತ ಮೇಲೆ ಕೇಳುವವರೇನು? ಸರ್ವಾಧಿಕಾರಿ ಹೋಗಿ ಏಕಛತ್ರಾಧಿಪತಿಯಾದಳು. ಎಲ್ಲ ಹೆಂಗಸರು ವ್ಯಭಿಚಾರಿಗಳೆಂದು ಅವಳ ಮಾತು ಪ್ರತಿದಿನದಲ್ಲಿ ಮಗನ ಕಿವಿಗೆ ಹಲವಾರು ಸಾರೆ ಬೀಳುತ್ತಿದ್ದವು. ದಿವಂಪ್ರತಿ ಅವಳು ಮಾಡುತ್ತಿದ್ದ ಈ ಪಠಸವನ್ನು ಕೇಳಿ ಅವನ ವಿಚಾರ ಸಗಣಿಯಲ್ಲಿಯೇ ಒಂದು ವಿಲಕ್ಷಣ ಮಾರ್ಪಾಟಾಯಿತು.

ಮಗನು ಬೆಳೆದು ದೊಡ್ಡವನಾದನು. ವಿಶ್ವವಿದ್ಯಾಲಯದ ಪದವೀಧರನಾದನು. ನೋಡಲಿಕ್ಕೆ ಅಷ್ಟು ಕುರೂಪಿಯೂ ಅಲ್ಲ, ಸುರೂಪಿಯೂ ಅಲ್ಲ. ಅವನಿಗೆ ಕರ್ಮಧರ್ಮ ಸಂಯೋಗದಿಂದ ಸರಕಾರದಲ್ಲಿ ಒಂದು ನವಕರಿ ದೊರೆಯಿತು. ಅವನ ಮನೆತನದ ಬಗ್ಗೆ ಗೊತ್ತಿದ್ದವರು ಯಾರೂ ಅವನಿಗೆ ಕನ್ಯೆಯನ್ನು ಕೊಡಲು ಮುಂದೆ ಬರಲಿಲ್ಲ. ದೂರ ದೇಶದಲ್ಲಿದ್ದವರು ಅವನ ತಾಯಿಯ ಬಗ್ಗೆ ಏನೂ ಗೊತ್ತಿಲ್ಲದವರು ತಮ್ಮ ಬೆಳೆದ ಹೆಣ್ಣುಗಳನ್ನು ತಂದು ಅವನಿಗೆ ತೋರಿಸಹತ್ತಿದರು. ಹೀಗೆ ಬಂದ ಹುಡುಗಿಯರಲ್ಲಿ ಆತನ ತಾಯಿ ಒಂದನ್ನು ಪಾಸು ಮಾಡಿದಳು.

ಅವಳು ಸಿರಿವಂತರ ಮನೆತನದವಳು. ಅವಳ ತಂದೆಗೆ ಅವಳೊಬ್ಬಳೇ ಮಗಳು. ಬಹಳ ಅಚ್ಚೆಯಿಂದ ಅವಳನ್ನು ಬೆಳೆಸಿದ್ದರು. ಅವಳು ಕಾಲೇಜಿನ ಕಟ್ಟೆಯನ್ನು ಕೂಡ ಹತ್ತಿದ್ದಳು. ಒಳ್ಳೇ ವರನು ಸಿಕ್ಕನೆಂದು ಅವರು ಹಿರಿಹಿರಿ ಹಿಗ್ಗಿದರು. ಅವನಿಗೆ ಐದು ಸಾವಿರ ರೂ. ವರದಕ್ಷಿಣೆ ಕೊಟ್ಟು ಮೇಲೆ ನಾಲ್ಕು ಸಾವಿರ ರೂಪಾಯಿ ವೆಚ್ಚ ಮಾಡಿ ಮಗಳ ಲಗ್ನವನ್ನು ಮಾಡಿದರು. ಲಗ್ನದ ಪೂರ್ವದಲ್ಲಿ ಆತನ ತಾಯಿಯು

ವಿಷಯಕ್ಕೆ ಯಾರೋ ಹೇಳಿದ್ದರು. ತಾಯಿಯನ್ನು ತೆಗೆದುಕೊಂಡೇನು ಮಾಡುವದು? ಹುಡುಗನು ನೆಟ್ಟಗಿದ್ದರೆ ಸಾಕು, ತಾಯಿಯು ಹಿಂದೆ ಇದ್ದಷ್ಟು ದಿವಸ ಮುಂದೆ ಇರುವದಿಲ್ಲ ಎಂದು ಆ ಬಗ್ಗೆ ಹೆಚ್ಚಿಗೆ ಮಹತ್ವ ಕೊಡಲಿಲ್ಲ.

ಹುಡುಗಿಯು ನೋಡಲು ಬಲು ಚೆಲುವೆ. ಸುಶಿಕ್ಷಿತಳು, ಮನೆಗೆಲಸದಲ್ಲಿ ನುರಿತವಳು. ಎಲ್ಲರೊಡನೆ ದಯೆಯಿಂದ ನಡೆದುಕೊಳ್ಳುವವಳು. ಸೊಸೆಯನ್ನು ಕಂಡು ಅತ್ತೆಗೆ ಸಮಾಧಾನವಾಗಲಿಲ್ಲ. ಬಂದು ಒಂದು ವರುಷದ ವರೆಗೆ ಗಂಡಹೆಂಡಿರು ಸುಖದಿಂದಲೂ ಆನಂದದಿಂದಲೂ ಬಾಳುವೆ ಸಾಗಿಸಿದರು. ಅವರು ನಗುವದು, ಕೆಲೆಯುವದು, ಕೂಡಿ ತಿರುಗಾಡುವದು ಅವನ ತಾಯಿಗೆ ಸಹನವಾಗಲಿಲ್ಲ. ದಿನಾಲು ಒಂದಿಲ್ಲೊಂದು ಹುಟ್ಟಿಸಿ ಮಗ ಮನೆಗೆ ಬಂದ ಕೂಡಲೆ ದೂರು ಹೇಳುತ್ತಿದ್ದಳು. ಮಗನು ಅವಳ ದೂರನ್ನು ಕೇಳುತ್ತಲೇ ಇದ್ದನು. ತಾಯಿಗೆ ತನ್ನ ಮಂತ್ರನಾಟಲಿಲ್ಲವೆಂದೆನಿಸಿತು. ಎಲ್ಲ ಹೆಂಗಸರು ಹಾದರಗಿತ್ತಿಯರು, ಅವರ ಗಂಡಂಟರು ಹೊರಗೆ ಹೋದರೆ ಸಾಕು, ಸೊರೆಗಾಡಿ ಮನೆಗೆ ಬಂದು ಸೇರುವರೆಂದು ಅವಳು ದಿನಾಲು ಮಗನೆದುರಿಗೆ ಪಠಿಸುವ ಮಂತ್ರವಾಯಿತು. ಆತ ಬಾಲಕನಿದ್ದಾಗ ಈ ಮಂತ್ರದ ಘೋಷಣೆ ದಿನಾಲು ಕೇಳುತ್ತಿದ್ದನು. ತಂದೆ ಸತ್ತ ಮೇಲೆ ಈ ಮಂತ್ರದ ಪಠಣ ನಿಂತು ಹೋಗಿತ್ತು. ಸೊಸೆ ಬಂದ ಮೇಲೆ ಮತ್ತೆ ಪ್ರಾರಂಭವಾಯಿತು. ಈ ವಿಚಾರ ಅವನಲ್ಲಿ ಬೆಳೆದು ಸ್ಥಿರವಾಗಿ ನಿಂತಿತು. ಹೆಂಡತಿಯ ಪ್ರತಿಯೊಂದು ಕೃತಿಯನ್ನು ಸಂಶಯಾಸ್ಪದದಿಂದ ನೋಡಹತ್ತಿದನು. ಹೆಂಡತಿಯು ಏನೇ ಮಾಡಿದರೂ ಆತನು ಸಂಶಯದಿಂದ ನೋಡಹತ್ತಿದನು. ಹೆಂಡತಿಯ ಮೇಲಿನ ವಿಶ್ವಾಸವನ್ನು ತಾಯಿಯು ಹಾರಿಸಿಬಿಟ್ಟಳು. ಗಂಡನು ಹೆಂಡತಿಯು ಹಾದರಗಿತ್ತಿಯೆಂಬ ಭಾವನೆಯಿಂದ ನೋಡಹತ್ತಿದನು. ತಾಯಿಯ ಮಾತುಗಳ ಮೇಲಿಂದ ಆತನು ಸಿಡಿಮಿಡಿ ಹಾಯ್ದು ಹೆಂಡತಿಯನ್ನು ದನ ಬಡಿದಂತೆ ಬಡಿಯಹತ್ತಿದನು.

ಅವಳನ್ನು ಕೆಲವು ದಿವಸ ಉಪವಾಸ ಹಾಕಿದನು. ಪಾಪ ಆ ಹುಡುಗಿ ಪಿಟ್ಟೆಂದು ಮಾತನಾಡಲಿಲ್ಲ. ದಿನಂಪ್ರತಿ ಹೊಡೆತದ ವೇದನೆ

ಯನ್ನು ತಾಳಲಾರದೆ ಆ ಹುಡುಗಿಯು ಅಲ್ಲಿಯೇ ಪರಿಚಯಸ್ಥರ ಮನೆಯಲ್ಲಿ ಅಡಗಿಕೊಂಡು ಕುಳಿತಳು. ಆ ಪರಿಚಯಸ್ಥರಿಗೆ ಅವಳ ತಂದೆಯು ಗುರುತಿತ್ತು. ಆ ಮನೆಯ ಯಜಮಾನನು ಅವಳನ್ನು ಕರೆದುಕೊಂಡು ಹೋಗಿ ಅವಳ ತವರೂರಿಗೆ ಬಿಟ್ಟು ಬಂದನು.

ತಾಯಿಯೂ ಮಗನೂ ಊರ ತುಂಬಾ ಹುಡುಕಿದರು. ಅವಳು ಹಾದರಗಿತ್ತಿಯಾದುದರಿಂದಲೇ ಮನೆ ಬಿಟ್ಟು ಓಡಿ ಹೋದಳೆಂದು ತಾಯಿಯು ಮಗನಿಗೆ ಬೋಧಿಸಿದಳು. ಸತ್ಯವಿರಬಹುದೆಂದು ಮಗನಿಗೆ ಅನಿಸಿತು. ಹೆಂಡತಿಯು ತನ್ನ ತವರೂರಿಗೆ ಹೋಗಿರಬಹುದೆಂದು ತರ್ಕಿಸಿ ಗಂಡನು ಕರೆಯಲು ಹೋದನು. ಗಂಡನ ಬರವನ್ನು ಕಂಡು ಹೆಂಡತಿಯು ನಡುಗಹತ್ತಿದಳು. ಮಾವನು ಬಂದ ಅಳಿಯನಿಗೆ ಆದರ ಸತ್ಕಾರ ಮಾಡಿದನು. ಮಗಳಿಗೆ ಹೊಡೆದ ಸುದ್ದಿಯನ್ನು ಆತನು ಎತ್ತಲಿಲ್ಲ. ತಂದೆಯು ಸುಮ್ಮನೆ ಇದ್ದನು.

ತಂದೆಯು ತಾನು ಕುಳಿತ ಸ್ಥಳದಿಂದಲೇ ಮಗಳಿಗೆ ನಿನ್ನ ಗಂಡನು ಕರೆಯಲು ಬಂದಿರುವನೆಂದು ಹೇಳಿದನು. ಅವಳಿಗೆ ಕೇಳಿಸಿತೋ ಇಲ್ಲವೋ ಗೊತ್ತಾಗಲಿಲ್ಲ. ಅವಳ ಉತ್ತರವೇ ಬರಲಿಲ್ಲ. ತಾನು ಬಂದದ್ದನ್ನು ಕಂಡು ಹೆಂಡತಿಯು ಹೊರಗೆ ಬರಬಹುದೆಂದು ಗಂಡನು ತಿಳಿದುಕೊಂಡಿದ್ದನು. ಅವರು ಹೊರಗೆ ಬರುವ ಹಾಗಿದ್ದಿಲ್ಲ. ತಲೆಗೆ ಪೆಟ್ಟಿನಿಂದ ತೂತು ಬಿದ್ದ ಸ್ಥಳವನ್ನು ಬಟ್ಟೆಯಿಂದ ಕಟ್ಟಿಕೊಂಡಿದ್ದಳು. ಕೈಕಾಲುಗಳಿಗೆ ಒಳ ಪೆಟ್ಟು ಬಿದ್ದುದರಿಂದ ಬಾತು ಬಿಟ್ಟು ನಡೆಯಲು ಅವಳಿಗೆ ಬಹಳ ತ್ರಾಸವಾಗುತ್ತಿತ್ತು.

"ಈಕೆಯನ್ನು ಕಳುಹಿಸಿಕೊಡಬೇಕು. ಅವಳು ಮನೆಯಿಂದ ಓಡಿ ಬಂದಿರುವಳು" ಎಂದು ಗಂಡನು ನುಡಿದನು.

ಬಂದರೆ ಕರೆದುಕೊಂಡು ಹೋಗಬಹುದೆಂದು ಅವಳ ತಂದೆಯು ಅಳಿಯನಿಗೆ ಮೃದುವಾಗಿ ಹೇಳಿದನು.

ಮನುಷ್ಯನು ನಾಚಿಕೆಯನ್ನು ಬಿಟ್ಟರೆ ಯಾವ ಕಾಲಕ್ಕೆ ಏನು ಮಾಡುವನೆಂಬುದನ್ನು ಹೇಳಲಿಕ್ಕೆ ಬರುವದಿಲ್ಲ. ನಮ್ಮಯುವರಿಯಡೆ ನಾಚಿಕೆಯಿಲ್ಲದವನು ತನ್ನ ಕೃತಿಗಳನ್ನು ಮಾಡುವನು. ಯಾವಾಗಲೂ

ಅವನದು ಅವ್ಯಾಪಾರೇಷು ವ್ಯಾಪಾರ. ತಾನು ಕುಳಿತಲ್ಲಿಂದೆದ್ದು ನೇರ ವಾಗಿ ಹೆಂಡತಿಯು ಮಲಗಿಕೊಂಡ ಕೋಣೆಗೆ ಹೋದನು. ಆತನ ಹೊಡೆತದಿಂದ ಕಾಲುಗಳು ಬಾತಿದ್ದರಿಂದ ಅವಳು ನರಳುತ್ತ ಮಲಗಿ ಕೊಂಡಿದ್ದಳು. ಗಂಡ ಬಂದುದನ್ನು ನೋಡಿ ಹಾಸಿಗೆಯಲ್ಲಿಯೇ ಎದ್ದು ಕುಳಿತುಕೊಳ್ಳಲು ಪ್ರಯತ್ನಮಾಡಿದಳು. ನೋವು ಬಲವಾದ್ದರಿಂದ ಅವ ಳಿಗೆ ಎದ್ದು ಕುಳಿತುಕೊಳ್ಳಲು ಸಾಧ್ಯವಾಗಲಿಲ್ಲ. ನಾನು ನಿನ್ನನ್ನು ಕರೆ ಯಲು ಬಂದಿರುವೆನೆಂದು ಗಂಡ ದರ್ಪದಿಂದ ನುಡಿದ ಮಾತುಗಳನ್ನು ಕೇಳಿ ಕರುಣಾಜನಕ ದೃಷ್ಟಿಯಿಂದ ಆತನನ್ನು ನೋಡಿದಳು. ಕಣ್ಣಿನಿಂದ ಹನಿ ಗಳು ಉದುರಹತ್ತಿದವು. ತನ್ನ ಹೃದಯವನ್ನು ಕರಗಿಸಲು ರಕ್ಕ ರೀತಿ ಯಿಂದ ಅಳುವಳೆಂದು ಗಂಡ ತಿಳಿದುಕೊಂಡು ರಾಕ್ಷಸೀ ವೃತ್ತಿಯನ್ನು ತಾಳಿ ಹೆಂಡತಿಗೆ ಕೆನ್ನೆಯ ಮೇಲೆ ಬಲವಾಗಿ ಏಟು ಕೊಟ್ಟನು.

“ ಅಪ್ಪಾ ಸತ್ತೆ ” ಎಂದು ಚೀರಿದಳು.

ಹೊರಗಿನವರು ಎಲ್ಲರೂ ಗಾಬರಿಯಾಗಿ ಓಡಿ ಬಂದರು.

ಗಂಡನು ಅವಳ ಹಾಸಿಗೆಯ ಬಳಿಯಲ್ಲಿ ನಿಂತಿದ್ದನು. ಎಲ್ಲರೂ ಭೀತರಾಗಿ ಏನಾಯಿತೆಂದು ಕೇಳಿದರು. ಅವಳು ಅದಕ್ಕೆ ಉತ್ತರವನ್ನೇ ಕೊಡಲಿಲ್ಲ. ಅವಳ ಬದಿಯಲ್ಲಿ ಕುಳಿತು “ ಮಗೂ ಚೀರಿದ್ದೇಕೆ ? ಏನಾ ಯಿತು ” ಎಂದು ಮಗಳ ಮೇಲೆ ಕೈಯಾಡಿಸುತ್ತ ತಾಯಿಯು ಕೇಳಿದಳು.

“ ಅಮ್ಮಾ, ಏನೂ ಆಗಿಲ್ಲ. ನನಗೆ ಏನೋ ಹೆದರಿಕೆ ಬಂದಿತು. ” ಎಂದು ಮೊಗವನ್ನು ತಿರುವಿಕೊಂಡು ಉತ್ತರ ಕೊಟ್ಟಳು.

ಗಂಡನು ಸಂತವನು ಕುಳಿತುಕೊಳ್ಳಲಿಲ್ಲ. ಉಳಿದವರೆಲ್ಲರೂ ಹೊರಗೆ ಹೋದರು. ಮಗಳ ಬದಿಯಲ್ಲಿ ತಾಯಿಯು ಮಾತ್ರ ಕುಳಿತು ಕೊಂಡಳು.

“ ಅಮ್ಮ, ನೀನು ಹೊರಗೆ ಹೋಗು; ಅವರಿಗೆ ಏನೋ ಮಾತನಾಡು ವದಿದ್ದಂತೆ ತೋರುವದು” ಎಂದು ಮಗಳು ಹೇಳಿ ತಾಯಿಯನ್ನು ಹೊರಗೆ ಕಳುಹಿಸಿದಳು.

ತಾಯಿಯು ನಿರುಪಾಯಳಾಗಿ ಹೊರಗೆ ಬಂದಳು.

“ ಈ ಮನೆಯಲ್ಲಿ ನಾನು ನಿಂತು ನೀರು ಕುಡಿಯುವದಿಲ್ಲ. ನೀನು ನನ್ನ ಸಂಗಡ ಬರುವವಳೋ ಹೇಗೆ ಹೇಳು. ”

“ ನಾನು ನಿಮ್ಮ ಹಿಂದೆಯೇ ಬರುವೆನು. ನನಗೆ ನಡೆಯಲಿಕ್ಕೆ ಬರುವದೋ ಹೇಗೆ ಗೊತ್ತಿಲ್ಲ. ಕಾಲುಗಳು ಬಾತಿರುವವು. ”

“ ಬಾತರೇನಾಯಿತು; ಹಾಗೇ ನಡೆಯಬೇಕು. ನಿನ್ನಲ್ಲಿ ಇನ್ನೂ ಪ್ರಾಣ ಇರುವದು. ”

“ ಇನ್ನೊಂದು ಹತ್ತು ನಿಮಿಷ ಬಿಟ್ಟು ಹೋಗೋಣ. ”

“ ಇಲ್ಲ, ಈಗಲೇ ಹೊರಡಬೇಕು. ”

“ ಆಗಲಿ, ನನ್ನನ್ನು ನೀವು ಎಬ್ಬಿಸಬೇಕಾಗುವದು. ”

“ ಎದ್ದು ಕುಳಿತುಕೊಳ್ಳಲು ಬರುವದಿಲ್ಲವೋ ? ”

ಪ್ರಯಾಸಪಟ್ಟು ಎದ್ದು ಕುಳಿತು, ನಿಲ್ಲಲು ಅವನಿಗೆ ಕೈ ಆಶ್ರಯವನ್ನು ಬೇಡಿದಳು. ನಿರುಪಾಯನಾಗಿ ಆಕೆಯ ಗಂಡ ಅವಳ ಕೈಯನ್ನು ಹಿಡಿದು ಎಬ್ಬಿಸಿದನು. ಅವಳು ಅವನ ಕೈಯನ್ನು ಹಿಡಿದುಕೊಂಡು ಕುಂಟುತ್ತ ಹೊರಗೆ ಬಂದು ತನ್ನ ಗಂಡನ ಸಂಗಡ ತಾನು ಹೋಗಿಬರುವೆನೆಂದು ಎಲ್ಲರಿಗೂ ಹೇಳಿ ನಮಸ್ಕಾರ ಮಾಡಿ ಗಂಡನ ಭುಜದ ಮೇಲೆ ಕೈಯಿಟ್ಟು ಹೊರಟಳು. ಮಗಳ ಅದೃಷ್ಟವನ್ನು ಕಂಡು ತಾಯಿ ಕಣ್ಣೀರಿಟ್ಟಳು. ಆಕೆಯ ಅಣ್ಣನು ಕೋಪದಿಂದ ಹಲ್ಲು ಕಡಿಯುತ್ತ ಹೊಡೆಯಲು ಅತನ ಮೇಲೇರಿ ಹೋದನು. ತನ್ನ ಪತಿಗೆ ತನ್ನೆದುರಿಗೆ ಏನೂ ಮಾಡಕೂಡದೆಂದು ಆ ಸತಿಯು ಸೆರಗೊಡ್ಡಿ ಬೇಡಿಕೊಂಡಳು. ತಂದೆಯು ಒತ್ತಿ ಬರುತ್ತಿದ್ದ ದುಃಖವನ್ನು ನುಂಗಿ ಆ ದೃಶ್ಯವನ್ನು ನೋಡಲಾರದೆ ಮೊಗ ತಿರುಹಿಕೊಂಡು ನಿಂತನು. ಆತ ಪಿಟ್ಟೆಂದು ಮಿಸುಕಲಿಲ್ಲ. ಅವಳ ಹಣೆಯ ಮೇಲೆ ಕುಂಕುಮದ ಬಟ್ಟನ್ನಿಟ್ಟು,

“ ಹೋಗಿ ಬಾ ಮಗು, ದೇವರು ನಿನಗೆ ಕಲ್ಯಾಣ ಮಾಡಲಿ. ”

ಎಂದು ತಾಯಿಯು ಮಗಳನ್ನು ಹರಸಿದಳು.

ಕಾಲು ಎಳೆಯುತ್ತ ಗಂಡನ ಭುಜವನ್ನು ಹಿಡಿದುಕೊಂಡು ತವರು

ಮನೆಯಿಂದ ಹೊರ ಹೊರಟಳು. ಅಂದು ಆತ ಹೆಂಡತಿಯನ್ನು ಕರೆದು
ಕೊಂಡು ಒಂದು ಹೋಟಲಿನಲ್ಲಿ ಇಳಿದುಕೊಂಡನು. ಮರುದಿವಸ
ಹೆಂಡತಿಯನ್ನು ತನ್ನೂರಿಗೆ ಕರೆದುಕೊಂಡು ಹೋದನು.

ಅವಳು ಗರ್ಭಿಣಿಯಾಗಿದ್ದಳು. ಗಂಡನು ಎಷ್ಟೇ ತ್ರಾಸ ಕೊಟ್ಟರೂ
ಹೊಟ್ಟೆಯಲ್ಲಿಯ ಕೂಸಿನ ಸಲುವಾಗಿ ಅವಳು ಪ್ರಾಣವನ್ನು ಹಿಡಿದಿದ್ದಳು.
ಸಾಯಬೇಕೆಂದು ಅವಳಿಗೆ ಎಷ್ಟೋ ಸಲ ಅನಿಸಿತು. ಪ್ರಾಣ ಕೊಡಬೇ
ಕೆಂದು ಹೋದವಳು ತಿರುಗಿ ಬಂದಳು. ಕಷ್ಟದಲ್ಲಿ ಕಾಲ ಕಳೆಯುತ್ತ
ನವಮಾಸ ತುಂಬಿದ ಮೇಲೆ ಒಂದು ಗಂಡು ಮಗುವನ್ನು ಹಡೆದಳು.
ಹೆರಲು ತವರುಮನೆಗೆ ಬಂದಿದ್ದಳು. ಕೂಸಿಗೆ ಐದು ತಿಂಗಳು ತುಂಬಿದ
ಮೇಲೆ ಗಂಡನ ಮನೆಗೆ ಕಳುಹಿಸಿದರು.

ಮಗನನ್ನು ಕಂಡು ಆತ ಸಂತೋಷಪಟ್ಟ. ಮುದ್ದಾಡಿ ಹುಡುಗ
ನನ್ನು ಆಡಿಸುತ್ತಿದ್ದ. ಹೀಗೆ ಮೂರು ನಾಲ್ಕು ತಿಂಗಳುಗಳು ಉರುಳಿ
ದವು. ಗಂಡನ ಹೊಡೆತವು ಒಂದು ದಿನವಾದರೂ ತಪ್ಪಲಿಲ್ಲ. ಜಾರ
ಪುತ್ರನಿಗೆ ತನ್ನ ಮಗನೆಂದು ಮುದ್ದಿಡುವದು ನಾನೆಲ್ಲಿಯೂ ನೋಡಿಲ್ಲ
ವೆಂದು ಆತನ ತಾಯಿಯು ಒಂದು ದಿನ ವಿಷ ಕಾರಿದಳು. ಆತನ ತಲೆ
ಯಲ್ಲಿ ಹೆಂಡತಿಯು ಜಾರಿಣಿಯೆಂಬ ವಿಚಾರ ಬಿರುಗಾಳಿಗೆ ಸಿಲುಕಿ ಹಾರ
ಹತ್ತಿತು. ತಾಯಿಯ ಹೀನ ವರ್ತನವನ್ನು ಕಂಡು ರೇಗಿಕೊಂಡಿದ್ದರೂ
ಆ ಮಾರಿಯ ವಿರುದ್ಧ ನಿಲ್ಲಲು ಆತನಿಗೆ ಧೈರ್ಯವಿದ್ದಿಲ್ಲ. ನಿಂತರೆ ಅವಳು
ಸೀಳಿ ಹಾಕುವಳೆಂಬ ಹೆದರಿಕೆ ಅವನಿಗಿತ್ತು. ರಾಕ್ಷಸೀ ವೃತ್ತಿಯನ್ನು
ತಾಳಿ ಹೆಂಡತಿಯನ್ನು ಇಮ್ಮಡಿ ಜೋರಿನಿಂದ ಥಳಿಸಹತ್ತಿದನು. ಮಗನ
ಸಲುವಾಗಿ ಎಲ್ಲವನ್ನೂ ಸಹನ ಮಾಡಿಕೊಂಡಳು.

ಒಂದು ದಿವಸ ಆ ಕೂಸನ್ನು ಕಂಡು ಇದು ನನ್ನ ಮಗನಲ್ಲ;
ಇದನ್ನು ನೀನು ವ್ಯಭಿಚಾರದಿಂದಲೇ ಹಡೆದಿರುವೆ ಎಂದು ಕೂಗಾಡಹತ್ತಿ
ದನು. ಮಧ್ಯಾಹ್ನ ಹನ್ನೆರಡು ಗಂಟೆ. ಹೊರಗೆ ರಣರಣ ಬಿಸಿಲು.
ಅವಳ ಬಗಲಲ್ಲಿಯ ಕೂಸನ್ನು ಕಸಿದುಕೊಂಡು ನೆಲಕ್ಕೆ ಅಪ್ಪಳಿಸಬೇ
ಕೆಂದು ಮಾಡಿದನು. ಅವಳಿಗೆ ಸಿಟ್ಟು ತುಂಬಾ ಬಂದಿತು. ಮಹಾಕಾಳಿ
ಯಾದಳು. ಕಣ್ಣುಗಳಿಂದ ಕಿಡಿಗಳು ಹಾರಹತ್ತಿದವು. ಮಗುವನ್ನು

ಬದುಕಿಸಬೇಕೆಂಬ ಆತುರದಿಂದ ಗಂಡನ ಕೈಯಿಂದ ಕೂಸನ್ನು ಕಸಿದು
ಕೊಳ್ಳಲು ಓಡಿ ಹೋದಳು. ದೈತ್ಯನು ಜೋರಿನಿಂದ ಒದ್ದನು. ಜೋರಾಗಿ
ಬಿದ್ದರೂ ಸಾವರಿಸಿಕೊಂಡು ಮಾತೃವಾತ್ಸಲ್ಯದಿಂದ ಮಗನನ್ನು ಕಸಿದು
ಕೊಳ್ಳಲು ಹೋಗಿ ಅವನ ಕೈಗಳನ್ನು ಬಲವಾಗಿ ಕಡಿದು ಕೂಸನ್ನು
ಕಸಿದುಕೊಂಡು ಬೀದಿಗೆ ಅಳುತ್ತ ಬಂದು ನಿಂತಳು. ಬೀದಿಗೆ ಎಂದೂ
ಬಾರದವಳು ಇಂದು ಮಗುವನ್ನು ಬದುಕಿಸಬೇಕೆಂಬ ಆಶೆಯಿಂದ
ಬಂದಳು. ತನ್ನ ಹಿಂದೆ ಓಡಿಬರುತ್ತಿರುವ ಗಂಡನನ್ನು ಕಂಡು ಹೆಗಲ
ಮೇಲೆ ಕೂಸನ್ನು ಹಾಕಿಕೊಂಡು 'ನನ್ನ ಕೂಸನ್ನು ಬದುಕಿಸಿರೋ'
ಎಂದು ಕೂಗುತ್ತ ಓಡಹತ್ತಿದಳು.

ಗಂಡನು ಅವಳ ಹಿಂದೆ ಬೇಟೆಗಾರನಂತೆ ಓಡಹತ್ತಿದನು. ಅವನು
ಸಮೀಪಿಸಿದಂತೆ ಅವಳ ಕೂಗಾಟ ಬಹಳೇ ಜೋರಾಯಿತು. ಅವಳು ಹೀಗೆ
ಕೂಗುವಳೆಂದು ಆತನಿಗೆ ಅನಿಸಿದ್ದಿಲ್ಲ. ಅವಳು ಚೀರುತ್ತ ಬೀದಿಗೆ
ಹತ್ತಿದ್ದ ಒಂದು ಮನೆಯನ್ನು ಹೊಕ್ಕಳು. ಮನೆಯ ಯಜಮಾನನು
ಇದನ್ನು ಕಂಡು ಮನೆಯ ಹೊರಬಾಗಿಲಕ್ಕೆ ಬಂದು ನಿಂತನು. ಗಂಡನು
ಒಳಗೆ ನುಗ್ಗಲು ಬಂದನು. ಯಜಮಾನನು ತನ್ನ ಆಳುಗಳಿಂದ ಆತ
ನನ್ನು ಬೀದಿಗೆ ದಬ್ಬಿಸಿದನು. ನೆರೆದ ಜನರು ಅವನಿಗೆ ಛೀಮಾರಿ ಹಾಕಿ
ನಿನ್ನ ಮೇಲೆ ಫಿರ್ಯಾದಿ ಮಾಡಿಸುತ್ತೇವೆಂದು ಹೇಳಿ ಕಳುಹಿದರು.

ಮುಂದೆ ಆ ಮನೆಯವರು ಅವಳ ತವರುಮನೆಗೆ ತಂತಿಯನ್ನು
ಬಿಟ್ಟು ಅವಳ ತಂದೆಯನ್ನು ಕರೆಯಿಸಿಕೊಂಡರು. ತಂದೆಯು ಗಾಬರಿ
ಯಾಗಿ ಬಂದು ಮಗಳನ್ನೂ ಮೊಮ್ಮಗನನ್ನೂ ಊರಿಗೆ ಕರೆದುಕೊಂಡು
ಹೋದನು.

ಗಂಡನ ತಾಯಿಯು ಮಗನಿಗೆ ಮೇಲೆ ಫಿರ್ಯಾದಿಯನ್ನು ಮಾಡಬೇ
ಕೆಂದು ಒತ್ತಾಯ ಮಾಡಹತ್ತಿದಳು. ಹೆಂಡತಿಯನ್ನು ಆಳಲಿಕ್ಕೆ ಬಾರದ
ನೀನು ಜಗತ್ತಿನಲ್ಲಿ ಹೇಗೆ ಬದುಕಿ ಬಾಳುವೆಯೆಂದು ಮಗನಿಗೆ ಹಂಗಿಸು
ತ್ತಿದ್ದಳು. ಕೊನೆಗೊಮ್ಮೆ ಫಿರ್ಯಾದಿಯನ್ನು ಕೊಟ್ಟನು. ಅದರಲ್ಲಿ
ಅವನಿಗೆ ಯಶ ದೊರೆಯಲಿಲ್ಲ. ಇವನೇ ತಪ್ಪಿತಸ್ಥನೆಂದು ನ್ಯಾಯಾಲ
ಯವು ತೀರ್ಮಾನ ಕೊಟ್ಟು ನಿನ್ನ ಮೇಲೆಯೇ ಏಕೆ ಕ್ರಮ ತೆಗೆದುಕೊ

ಳ್ಳಬಾರದೆಂಬ ಬಗ್ಗೆ ಹೇಳಿಕೆಯನ್ನು ಕೊಡಲು ಅವನಿಗೆ ಆದೇಶಪತ್ರ ಕೊಟ್ಟಿತು. ಇದರೊಳಗಿಂದ ಆತನು ಪಾರಾಗಬೇಕಾದರೆ ಏಳು ಹನ್ನೊಂದು ಆಯಿತು. ಇದರಿಂದ ಹತಾಶನಾಗಿ ಆತನು ವಿವಾಹವಿಚ್ಛೇದನ ಕಾಯದೆಯ ಅನ್ವಯವಾಗಿ ಹೆಂಡತಿಯು ಕಬಜೆಯನ್ನು ಕೊಡಿಸಬೇಕೆಂದು ಮೊಕದ್ದಮೆಯನ್ನು ಹೂಡಿದನು. ಆವಳು ನ್ಯಾಯಾಲಯದ ಕಟ್ಟೆಯನ್ನು ಹತ್ತಲಿಲ್ಲ. ನ್ಯಾಯಾಲಯವು ಕಬಜೆಯನ್ನು ಕೊಡಿಸಿತು. ಮಗನ ಸಲುವಾಗಿ ಗಂಡನ ಹತ್ತರ ಹೋಗಲು ಅವಳು ಸಿದ್ಧಳಿದ್ದಿಲ್ಲ. ವಿವಾಹ ವಿಚ್ಛೇದನ ಮಾಡಬೇಕೆಂದು ಅವನು ಮತ್ತೊಮ್ಮೆ ಮೊಕದ್ದಮೆಯನ್ನು ಮಾಡಿದನು. ಅದರಲ್ಲಿ ಅವನ ವಿರೋಧವಾಗಿ ನೂರಾರು ಜನರು ಸಾಕ್ಷಿ ಹೇಳಿದ್ದರಿಂದ ವಿಚ್ಛೇದನ ದೊರೆಯಲಿಲ್ಲ.

ಆತನ ತಾಯಿಯು ಹೆಂಗಸಿನಿಂದ ಸೋತನೆಂದು ದಿನಾಲು ಹಂಗಿಸುತ್ತಿದ್ದಳು. ಹೀಗೆ ಎರಡು ಮೂರು ವರುಷಗಳು ಗತಿಸಿದವು. ಹೆಂಡತಿಯು ಹಿಂದುಗಡೆಗೆ ವಿಚ್ಛೇದನಕ್ಕೆ ಸಮ್ಮತಿಯನ್ನು ಕೊಡಬೇಕೆಂದು ಮಾಡಿದಳು. ವಿಚ್ಛೇದನವಾದರೆ ಗಂಡನು ಇನ್ನೊಂದು ಲಗ್ನ ಮಾಡಿಕೊಳ್ಳುವನು. ಆ ಹುಡುಗಿಯು ಪಾಡಾದರೂ ತನ್ನ ಹಾಗೆಯೇ ಆಗುವದೆಂದು ಹೆದರಿ ಅವಳು ಬೇಗ ಸಮ್ಮತಿ ಕೊಡಲಿಲ್ಲ.

ಕತೆಯು ಮುಗಿಯಿತು. ನೀವೇ ಇದರ ಮೇಲಿಂದ ನಿಮಗೆ ಬೇಕಾದ ಹಾಗೆ ಅರ್ಥಮಾಡಿಕೊಳ್ಳಬಹುದು. ತಾವೆಲ್ಲರೂ ಶಾಂತಚಿತ್ತದಿಂದ ಈ ಕತೆಯನ್ನು ಕೇಳಿದ್ದಕ್ಕೆ ನಿಮ್ಮೆಲ್ಲರ ಆಭಾರ ಮನ್ನಿಸುವೆನು. ನಾನು ನಿಮಗೆ ಉಪನ್ಯಾಸ ಕೊಡಲಿಲ್ಲ.

# ೯

ಚರ್ಚಾಕೂಟ ಮುಗಿದ ಮೇಲೆ ಮಧುಮತಿ-ಮೇಧಾವಿನಿಯರು ಪದ್ಮನಾಭನನ್ನು ಮನೆಯವರೆಗೆ ಕಳುಹಿಸಲು ಬಂದಿದ್ದರು. ಪದ್ಮನಾಭನ ಇಂದಿನ ಮುಖಮುದ್ರೆ ಬಹಳೇ ಗಂಭೀರವಾಗಿತ್ತು.

“ ಎಂದೂ ಮರೆಯಲಾರದ ಕತೆಯನ್ನು ತಾವು ಇಂದು ಹೇಳಿದಿರಿ. ”

ಅಂದಳು ಮಧುಮತಿ.

ಪದ್ಮನಾಭನು ಅವರನ್ನು ತನ್ನ ಕೋಣೆಯಲ್ಲಿ ಕರೆದುಕೊಂಡು ಹೋದನು. ‘ ಪ್ರೇಮನಂದಿನೀ ’ ಎಂದು ಕೂಗಿದನು. ಪದ್ಮನಾಭನ ಪ್ರೇಮಮಯ ಧ್ವನಿಯನ್ನು ಕೇಳಿ ಪ್ರೇಮನಂದಿನಿಯು ಆನಂದಭರಿತಳಾಗಿ ‘ಏಕೆ?’ ಎಂದು ಕೋಣೆಯ ಬಾಗಿಲದ ಬಳಿ ನಿಂತು ಕೇಳಿದಳು.

“ ನಿನ್ನ ಮಕ್ಕಳಿಗೆ ಚಹ ಕೊಡುವಿಯಾ ? ”

“ ತಯಾರಿಸಿಕೊಂಡು ಬರುವೆ ಐದು ನಿಮಿಷ ತಡೆಯಬೇಕಾಗುವದು.”

“ ಐದೇಕೆ, ಹತ್ತು ನಿಮಿಷ ತಡೆಯುವೆವು. ಈ ಮಕ್ಕಳೆಲ್ಲರೂ ಇಂದು ಕಾಲೇಜದಲ್ಲಿ ಬಹಳೇ ಗಂಭೀರವಾಗಿ ಮಾತನಾಡಿದರು. ಅವರ ವಿಚಾರಧಾರೆಯ ಪ್ರವಾಹದಲ್ಲಿ ನಾನು ತೇಲುತ್ತ ಹೋಗಿದ್ದೆ. ದಂಡೆಯನ್ನು ಮುಟ್ಟುವೆನೋ ಇಲ್ಲವೋ ಎಂದು ಅನಿಸಹತ್ತಿತು. ನನ್ನನ್ನು ನಾ ಮರೆತು ಅವರ ವಿಚಾರವಾಹಿನಿಯ ಮಂಜುಳಧ್ವನಿಯನ್ನು ಕೇಳುತ್ತ ಚುಪ್ಪಾಗಿ ಕುಳಿತಿದ್ದೆ. ಅವರೆಲ್ಲರಲ್ಲಿಯ ವಿಚಾರಪ್ರಗಲ್ಭತೆ, ಮಾತುಗಳಲ್ಲಿಯ ತರ್ಕಬದ್ಧ ಸರಣಿ, ಮಂಡಿಸುವ ರೀತಿಯಲ್ಲಿ ಕುಶಲತೆ ಇವುಗಳನ್ನು ಕಂಡು ನಾನು ಇಂದು ಬಹಳೇ ಆನಂದಪಟ್ಟೆ. ”

ಎಂದು ಪದ್ಮನಾಭನು ನುಡಿದನು.

“ ಸ್ವಲ್ಪ ತಡೆಯಿರಿ ನಾನು ಎಸರು ಇಟ್ಟು ಬರುವೆ ” ಎಂದು ಹೇಳಿ ಪ್ರೇಮನಂದಿನಿಯು ಒಳಗೆ ಹೋದಳು.

“ ಇಂದು ತಾವು ಬಹಳೇ ಸ್ವಾರಸ್ಯವಾದ ಕತೆ ಹೇಳಿದಿರಿ” ಅಂದಳು ಮಧುಮತಿ.

" ವಿಷಯಕ್ಕೆ ಸಂಬಂಧಪಟ್ಟ ಕತೆಯೇ ಇತ್ತು " ಮೇಧಾವಿನಿಯು ನುಡಿದಳು.

" ನಾನು ಓಘದಲ್ಲಿ ಕತೆಯಲ್ಲಿಯ ಇನ್ನೂ ಮೂರು ನಾಲ್ಕು ಮಾತುಗಳನ್ನು ಹೇಳುವದನ್ನು ಮರೆತುಬಿಟ್ಟೆ."

" ನನಗೆ ಈಗ ಹೇಳಬೇಕು " ಎಂದು ಮಧುಮತಿಯು ನಗುತ್ತ ನುಡಿದಳು.

" ವ್ಯಭಿಚಾರದಿಂದ ಮಗುವನ್ನು ಹೆತ್ತಿರುವಳೆಂದು ಗಂಡನು ಅಪವಾದನೆ ಮಾಡಿದ ಕೂಡಲೇ ಫೂತ್ಕಾರ ಮಾಡುತ್ತ 'ಪೋಕಳ್ಳ ಅಪಾದನೆ ಮಾಡಿ ನಾಲಿಗೆಯನ್ನು ಕೆಡಿಸಿಕೊಳ್ಳಬೇಡಿರಿ. ಸ್ವಲ್ಪ ವಿಚಾರ ಮಾಡಿ ಮಾತನಾಡಿರಿ. ಇವನು ನಿಮ್ಮ ಮಗನೇ ಆಗಿದ್ದರೆ ನೀವು ಸಾಯುವ ಕಾಲಕ್ಕೆ ನಿಮ್ಮ ಬಾಯಿಯಲ್ಲಿ ನೀರು ಬಿಡತಕ್ಕವನು ಇವನೇ, ಬೇರೆ ಯಾರೂ ಬಿಡುವದಿಲ್ಲ ' ಎಂದು ಗಂಭೀರವಾಗಿ ಮಗನನ್ನು ಎದೆಗವಚಿಕೊಂಡು ಹೇಳಿದಳು' ಎಂದು ಪದ್ಮನಾಭನು ನುಡಿದನು.

" ಗಂಡನ ಕೈಯಿಂದ ಕೂಸನ್ನು ಕಸಿದುಕೊಳ್ಳುವ ಕಾಲಕ್ಕೆ ಆ ಅವಿವೇಕಿ ಗಂಡನು ತನ್ನ ಹೆಂಡತಿಯ ಕೊರಳಲ್ಲಿಯ ಮಂಗಳಸೂತ್ರವನ್ನು ಜೋರಿನಿಂದ ಜಗ್ಗಲು ಅದು ಕೊರಳೊಳಗಿಂದ ಕತ್ತರಿಸಿ ಅವಳ ಉಡಿಯಲ್ಲಿ ಬಿದ್ದಿತು. ಅದನ್ನು ಕೈಯಲ್ಲಿ ಹಿಡಿದುಕೊಂಡು ' ಏನು ಘಾತ ಮಾಡಿದಿರಿ ಎಂದು ಶೋಕಿಸಹತ್ತಿದಳು. ' ಇವನು ನಿಮ್ಮ ಮಗನೆಂದು ತೋರಿಸಲಿಕ್ಕೆ ಮಗನ ಹುಟ್ಟುಹಬ್ಬದ ದಿನ ಮಾತ್ರ ಈ ಮಂಗಲಸೂತ್ರವನ್ನು ಧರಿಸುವೆನು. ಉಳಿದ ಯಾವ ದಿನಗಳಲ್ಲಿಯೂ ತಾವು ಹರಿದ ಮಂಗಳಸೂತ್ರವನ್ನು ಧರಿಸುವದಿಲ್ಲ ' ವೆಂದು ಕಣ್ಣೀರು ಹಾಕುತ್ತ ತನ್ನ ಗಂಡನಿಗೆ ಹೇಳಿದಳು. "

ಎಂದು ಪದ್ಮನಾಭನು ಹೇಳಿದನು.

" ಮುಂದೆ ಆ ಗಂಡನ ಸ್ಥಿತಿಯೇನಾಯಿತು ? " ಎಂದು ಮೇಧಾವಿನಿ ಕೇಳಿದಳು.

" ನಾನಾದರೂ ತಿಳಿದುಕೊಳ್ಳಲು ಆತುರಪಟ್ಟೆ. ಆದರೆ ತಿಳಿಯಲಿಲ್ಲ " ಎಂದು ಪದ್ಮನಾಭನು ಅಂದನು.

" ಕತೆಗಾರ ಏಕೆ ಮುಂದೆ ಹೇಳಲಿಲ್ಲ " ಕೇಳಿದಳು ಮೇಧಾವಿನಿ.

" ಆತನನ್ನು ಕರೆಯಲು ಯಾರೋ ಬಂದುದರಿಂದ ಕತೆಗಾರ ಬರುವೆನೆಂದು ಹೇಳಿ ಹೋದನು. ಅವನು ತಿರುಗಿ ಬರಲೇ ಇಲ್ಲ. ಆದಕ್ಕೆ ಅಷ್ಟೇ ಉಳಿಯಿತು "

ಎಂದು ಪದ್ಮನಾಭನು ತನ್ನ ತಲೆಯನ್ನು ಎಡಗೈಯಿಂದ ತಿಕ್ಕಿಕೊಳ್ಳುತ್ತ ಹೇಳಿದನು.

" ಬಹಳೇ ಚತುರ ಕತೆಗಾರ " ಎಂದು ಮಧುಮತಿ ನುಡಿದಳು.

" ಕಾಲನಲ್ಲಿ ಆತ ಲೀನನಾಗಿರಬಹುದು. ಅದಕ್ಕೇ ಬಂದಿರಲಿಕ್ಕಿಲ್ಲ" ನುಡಿದನು, ಪದ್ಮನಾಭ.

" ವಿವಾಹ ಮಾಡಿಕೊಂಡರಲ್ಲವೇ ಇಷ್ಟೆಲ್ಲ ಗೊಂದಲವು. "

ಎಂದು ಮೇಧಾವಿನಿಯು ಅಂದಳು.

" ವಿವಾಹ ಮಾಡಿಕೊಳ್ಳದೆ ಇರುವದು ನುಡಿದಷ್ಟು ಸುಲಭವಲ್ಲ. ಆಜನ್ಮ ಬ್ರಹ್ಮಚಾರಿಯಾಗಿರುವವರು ಸಾವಿರಕ್ಕೆ ಒಬ್ಬರೋ ಇಬ್ಬರೋ. ಸೃಷ್ಟಿನಿಯಮವನ್ನು ಪ್ರತಿಯೊಬ್ಬನು ಪಾಲಿಸಬೇಕಾಗುವದು. ಸಾಮಾನ್ಯ ಮನುಷ್ಯನ ಬುದ್ಧಿವಿಕಾಸಕ್ಕೆ ದಾಂಪತ್ಯ ಜೀವನ ಬೇಕು. ಕಾಮವನ್ನು ಹೋಮ ಮಾಡಿದವರು ಇದಕ್ಕೆ ಅಪವಾದ. ಎಲ್ಲರೂ ಶುಕಮುನಿಯಾಗುವದು ಅಶಕ್ಯ ಮಾತು. ದಾಂಪತ್ಯ ಜೀವನವು ಕೆಲವು ನಿಯಮಗಳಿಂದ ಒದ್ದವಾಗಿರಬೇಕು. ಲೈಂಗಿಕ ಸುಖವು ದಾಂಪತ್ಯ ಜೀವನದ ಗುರಿಯಲ್ಲ. ಆತ್ಮವಿಕಾಸಕ್ಕೆ ಸತಿಪತಿಯರು ಪರಸ್ಪರರು ಪೋಷಕವಾಗಿರಬೇಕು, ಘಾತಕವಾಗಿರಬಾರದು. ಪರಸ್ಪರರಲ್ಲಿ ಅನುರಾಗವೇ ದಾಂಪತ್ಯ ಜೀವನದ ತಳಹದಿಯು. ಜೀವನದಲ್ಲಿ ವರುಷಗಳು ಉರುಳಿದಂತೆ ಅನುರಾಗವೇ ಬೆಳೆದು ಪ್ರೀತಿಯಾಗಿ ಪ್ರೇಮದಲ್ಲಿ ಪರಿವರ್ತನೆಯಾಗುವದು. "

ಎಂದು ಪದ್ಮನಾಭ ನುಡಿದನು.

" ತಮಗೆ ಅನುರಾಗ, ಪ್ರೀತಿ ಹಾಗು ಪ್ರೇಮ–ಇವುಗಳ ಅನುಭವ ದಾಂಪತ್ಯಜೀವನದಲ್ಲಿ ಬಂದಿರಬಹುದು " ಎಂದಳು ಮೇಧಾವಿನಿ.

" ನನ್ನ ದುರದೃಷ್ಟಕ್ಕೆ ಇವುಗಳ ಅನುಭವವು ಬರಲಿಲ್ಲ. ನಾನು ಪ್ರವೃತ್ತಿಯಲ್ಲಿಯೇ ಬೆಳೆದು ಬಂದಿರುವದರಿಂದ ಈ ಸಾತ್ವಿಕ ಭಾವವು

ನನಗೆ ಎರವಾಯಿತು" ಎಂದು ಉಸಿರು ಬಿಡುತ್ತ ಪದ್ಮನಾಭನು ಖಿನ್ನ ನಾಗಿ ನುಡಿದನು.

"ಒಳಗೆ ಹೋಗಿ ಚಹ ಮಾಡಲು ಸಹಾಯ ಮಾಡುವೆ" ಎಂದು ಮಧುಮತಿಯು ಮೇಧಾವಿನಿಗೆ ಹೇಳಿ ಒಳಗೆ ಹೋದಳು.

ಮಧುಮತಿಯು ಬರುವದನ್ನು ಕಂಡು,

"ಬಾ ಮಗು ಒಳಗೆ. ಕುಳಿತುಕೊಳ್ಳಲು ಅಲ್ಲಿರುವ ಮಣೆಯನ್ನು ತೆಗೆದುಕೋ."

ಎಂದು ನುಡಿದಳು ಪ್ರೇಮನಂದಿನಿ.

"ಏನೂ ಬೇಡ; ನಿಮ್ಮ ಬದಿಯಲ್ಲಿಯೇ ಕುಳಿತುಕೊಳ್ಳುವೆ."

"ನಿಮ್ಮ ಮನೆ ದೊಡ್ಡದಿರುವದೊ?" ಕೇಳಿದಳು ಪ್ರೇಮನಂದಿನಿ.

"ದೊಡ್ಡದಿರುವದು."

"ಬಾಡಿಗೆ ಎಷ್ಟು."

"ಬಾಡಿಗೆ ಏನೂ ಇಲ್ಲ. ಆಸ್ಪತ್ರೆಯವರೇ ವಿದ್ಯಾಚರಣನ ಸಲು ವಾಗಿ ಕಟ್ಟಿಸಿ ಕೊಟ್ಟಿರುವರು."

"ನಿಮ್ಮ ಮನೆಯಲ್ಲಿ ಎಷ್ಟು ಜನ?"

"ನಾನು ಹಾಗೂ ಅಣ್ಣ ವಿದ್ಯಾಚರಣ ಇಬ್ಬರೆ. ಮನೆಯಲ್ಲಿಯ ಕೆಲಸ ಬೊಗಸಿಗೆ ಚಂದ್ರಾ ಎಂಬವಳು ಇರುವಳು."

"ಅಡಿಗೆಯನ್ನು ಯಾರು ಮಾಡುವರು?"

"ಚಂದ್ರಾ ಮಾಡುತ್ತಾಳೆ. ಅಡಿಗೆ ಮಾಡಲು ಕಲಿಯೆಂದು ಎಷ್ಟೋ ಸಾರೆ ಅಣ್ಣ ಹೇಳಿದ. ಇನ್ನುಮೇಲೆ ಕಲಿಯಬೇಕಾಗಿದೆ."

"ಹೆಂಗಸರು ಅಡಿಗೆಯನ್ನು ಕಲಿಯಬೇಕು."

"ಅಭ್ಯಾಸದಲ್ಲಿ ಕಲಿಯುವದು ಆಗಲಿಲ್ಲ."

"ಇನ್ನು ಮೇಲಾದರೂ ಕಲಿಯಬೇಕು."

"ನಿಮ್ಮ ಕಡೆಯಿಂದಲೇ ಕಲಿತುಕೊಳ್ಳುವೆನು."

"ನನ್ನ ಕಡೆಯಿಂದ ಬೇಡ."

"ಏಕೆ?"

" ಜೀವನದಲ್ಲಿಯು ದುಃಖದ ಮೂರ್ತಿ ನಾನು. ಮೇಲಾಗಿ ಅಪ ಶಕುನಿ. "

"ಜೀವನದ ಸುಃಖವನ್ನು ಅನುಭೋಗಿಸಿದವರೇ ಪರರ ದುಃಖವನ್ನು ನಿವಾರಣವಾಡಬಲ್ಲರೆಂದು ಅಮ್ಮನು ಪದೇ ಪದೇ ನನಗೆ ಹೇಳುತ್ತಿದ್ದಳು. ದುಃಖಪಟ್ಟವರೇ ಪರರಿಗೆ ಅವರ ಜೀವನದ ದಾರಿದೀಪಗಳೆಂದು ನಮ್ಮ ರಂಜನಿಗೆ ಮೇಲಿಂದ ಮೇಲೆ ಹೇಳುತ್ತಿದ್ದಳು. "

" ರಂಜನಿ " ಯಾರು ?

" ಅವಳೊಬ್ಬಳು ದಾಯಿ. ನಮ್ಮ ಅಮ್ಮನ ಕೈಯಲ್ಲಿ ಕೆಲಸ ಮಾಡುತ್ತಿದ್ದಳು. ಹೊಟ್ಟೆಬಟ್ಟೆಗಿಲ್ಲದೆ ತಿರುಕನ ಹಾಗೆ ತಿರಿದುಂಬುವದನ್ನು ಕಂಡು ಅಮ್ಮ ಅವಳ ಮೇಲೆ ಕನಿಕರಪಟ್ಟು ರಂಜನಿಯನ್ನು ಕೆಲವು ದಿನ ನಮ್ಮ ಮನೆಯಲ್ಲಿಯೇ ಇಟ್ಟುಕೊಂಡು ಕಲಿಸಿ ಆಸ್ಪತ್ರೆಯಲ್ಲಿ ದಾದಿಯ ಕೆಲಸವನ್ನು ಕೊಡಿಸಿದಳು. ರಂಜನಿಗೆ ನಮ್ಮ ಅಮ್ಮನೆಂದರೆ ದೇವರು " ಮಧುಮತಿಯು ನುಡಿದಳು.

" ನಿನ್ನ ದನಿಯು ನನ್ನ ಹಾಗೆ ಇರುವದಲ್ಲ " ಎಂದು ಪ್ರೇಮನಂದಿನಿಯು ಕೇಳಿದಳು.

" ಅಕಸ್ಮಾತ್ತಾಗಿರಬಹುದು. ದೇವರ ಸೃಷ್ಟಿಯಲ್ಲಿ ಎಷ್ಟೋ ವೈಚಿತ್ರ್ಯಗಳಿವೆ. ಅದರಲ್ಲಿ ಇದೊಂದೇಕೆ ಇರಬಾರದು ? " ಎಂದು ನಗುತ್ತ ಮಧುಮತಿಯು ನುಡಿದಳು.

" ನೀನು ಮಾತಿನಲ್ಲಿ ಬಲು ಚತುರಳು. "

ಪ್ರೇಮನಂದಿನಿಯು ಮೊಗವನ್ನು ನೋಡುತ್ತ,

" ನೀವು ಪ್ರಾಧ್ಯಾಪಕರ ಹೆಂಡಂದಿರೋ " ಎಂದು ಮಧುಮತಿ ಕೇಳಿದಳು.

" ನನ್ನ ಹಣೆಯ ಮೇಲೆ ಕುಂಕುಮದ ಬಟ್ಟು ಇರುವದೋ. "

" ಹಣೆಯ ಮೇಲೆ ಕುಂಕುಮದ ಬಟ್ಟು ಇರುವದಿಲ್ಲ. " ಕೆಲಸದಲ್ಲೇಕೆ ಅಳಿಸಿರಬಾರದು. "

" ನನ್ನ ಕೊರಳಲ್ಲಿ ಮಂಗಳಸೂತ್ರವಿರುವದೋ " ಎಂದು ತನ್ನ ಕೊರಳನ್ನು ತೋರಿಸುತ್ತ ಪ್ರೇಮನಂದಿನಿಯು ನುಡಿದಳು.

" ಅಂದ ಮೇಲೆ ತಾವು ಈ ಮನೆಯಲ್ಲೀನು ? "

" ಈ ಮನೆಯಲ್ಲಿ ನಾನೊಬ್ಬಳು ಅಡಿಗೆಯವಳು. "

" ನೀವು ಬರೇ ಅಡಗಿಯವರಲ್ಲೆಂದು ನಾನು ಹೇಳುವೆ. "

" ಹೇಗೆ ? "

" ನಿಮ್ಮ ಹಾಗು ಪದ್ಮನಾಭರ ಮಾತುಕತೆಗಳ ಮೇಲಿಂದ ಅನ್ನುವೆನು. ನಮ್ಮಲ್ಲಿ ಚಂದ್ರಾ ಎಂಬುವ ಅಡಿಗೆಯವಳೂ ಸೇವಕಳೂ ಇರುವಳು. ಅವಳು ಯಾವಾಗಲೂ ನಮ್ಮಿಂದ ದೂರ ಸರಿದು ನಿಲ್ಲುವಳು. ಅಮ್ಮನು ತಾನಿದ್ದಾಗ ಅವಳಿಗೆ ತನ್ನ ಹತ್ತರ ಕುಳಿತುಕೊಳ್ಳಲು ಎಷ್ಟೋ ಸಲ ಹೇಳಿದರೂ ಅವಳು ಒಂದು ದಿನವಾದರೂ ಅವಳ ಹತ್ತರ ಕೂಡಲಿಲ್ಲ. "

" ನಿನ್ನ ಅಭಿಪ್ರಾಯದಂತೆ ನಾನು ಇಲ್ಲೇನಿರುವೆನು ? "

" ಇದು ನನಗೆ ತಿಳಿಯದ ವಿಷಯ. "

" ತಿಳಿದರೂ ಹೇಳುವದಿಲ್ಲವೆಂದು ಕಾಣುವದು. "

" ನೀವು ಅಡಿಗೆಯವಳಾಗಿದ್ದರೆ ನಮ್ಮಲ್ಲಿ ಅಡಿಗೆ ಮಾಡಲು ಬರುವಿರಾ ? ನಮ್ಮಲ್ಲೇಕೆ ಬಂದು ಇರಬಾರದು. "

" ಕರೆಯದೆ ಯಾರಾದರೂ ಬಂದು ಇರುವರೋ ? "

" ನಾಳೆ ತಮ್ಮನ್ನು ಭೆಟ್ಟಿಯಾಗಲು ಅಣ್ಣನನ್ನು ಕಳುಹಿಸಿಕೊಡುವೆ."

ಮಧುಮತಿಯ ಮಾತು ಕೇಳಿ ಪ್ರೇಮನಂದಿನಿಯ ಕಣ್ಣುಗಳಿಂದ ಹನಿಗಳು ಉದುರಿದವು. ಅದನ್ನು ಕಂಡು ಮಧುಮತಿಯು ತಾನು ಮಾತನಾಡಿದ್ದಕ್ಕೆ ವ್ಯಥೆ ಪಟ್ಟಳು.

" ನನ್ನದು ಸರ್ವಥಾ ತಪ್ಪಾಯಿತು, ಅವಿವೇಕತನದಿಂದ ಮಾತನಾಡಿದ್ದಕ್ಕೆ ನಿಮ್ಮ ಮಗಳೆಂದು ನನ್ನನ್ನು ಕ್ಷಮಿಸಿರಿ. ನಿಮ್ಮ ನೊಂದ ಹೃದಯಕ್ಕೆ ನಾನು ಬರೆಕೊಟ್ಟಂತಾಯಿತು. "

" ಹಾಗೇನಿಲ್ಲ ಮಗು; ನಿನ್ನ ಮಾತುಗಳಿಂದ ನಾನು ನೊಂದಿಲ್ಲ; ನಿನ್ನ ಮುದ್ದು ಮಾತುಗಳಿಂದ ನಾನು ಸಂತೋಷಪಡುತ್ತಿರುವೆನು. ಜಗತ್ತು ಅರಿಯದ ಮುಗ್ಧ ಹುಡುಗಿ. ಜಗತ್ತು ನಿನಗೆ ಗೊತ್ತಾಗುವ ಬಗೆ ಹೇಗೆ " ಎಂದು ಪ್ರೇಮನಂದಿನಿಯು ಮಧುಮತಿಗೆ ಅಂದಳು.

" ನನಗೆ ತಿಳಿಯದೆ ಜನರ ಮನಸ್ಸನ್ನು ನೋಯಿಸುತ್ತ ನಡೆಯು

ವೆನು. ಅದೊಂದು ಕೆಟ್ಟ ಚಾಳಿ ನನ್ನಲ್ಲಿ. ಅಮ್ಮನು ಸಾಯುವವರೆಗೆ ಈ ನಡತೆಯನ್ನು ಬಿಟ್ಟುಬಿಡೆಂದು ಕೈಯಲ್ಲಿ ಕಡ್ಡಿ ಕೊಟ್ಟು ಹೇಳಿದ್ದಳು."

"ಇನ್ನು ಮೇಲಾದರೂ ಬಿಡಲು ಬರುವದಿಲ್ಲವೋ ?"

"ಬಿಡಲು ಪ್ರಯತ್ನ ಮಾಡುವೆನು. ಇದು ನನ್ನ ಸ್ವಭಾವ. ನಡತೆಯನ್ನು ಸರಿಪಡಿಸಿಕೊಳ್ಳುವದು ನಮ್ಮ ಕೈಯಲ್ಲಿಯ ಮಾತು. ಆದರೆ ಸ್ವಭಾವವು ಹುಟ್ಟಿನಿಂದಲೇ ಬಂದದ್ದು. ಜನ್ಮದಿಂದ ಬಂದದ್ದು ಸುಟ್ಟ ಮೇಲೆಯೇ ಹೋಗತಕ್ಕದ್ದು" ಎಂದು ಮಧುಮತಿಯು ಪ್ರೇಮನಂದಿನಿಗೆ ಹೇಳಿದಳು.

"ನಿಮ್ಮಲ್ಲಿ ಅಡಿಗೆ ಮಾಡಲು ಇಟ್ಟುಕೊಳ್ಳಲು ನಿಮ್ಮ ಅಣ್ಣನು ಒಪ್ಪುವನೋ ?"

"ನಾನು ಒಪ್ಪಿದರೆ ತೀರಿತು, ಅಣ್ಣನು ಒಪ್ಪಿದಂತೆಯೇ."

"ನನ್ನ ಹಿಂದಿನ ಕತೆಯನ್ನು ಕೇಳಿದರೆ ನನ್ನನ್ನು ಯಾರೂ ಮನೆಯಲ್ಲಿಟ್ಟುಕೊಳ್ಳುವದಿಲ್ಲ. ನನ್ನನ್ನು ಕಂಡರೆ ತಿರಸ್ಕಾರ ಮಾಡುವರು."

"ಎಲ್ಲರೂ ತಪ್ಪು ಮಾಡತಕ್ಕವರೇ, ನಾವು ದೇವತೆಗಳಲ್ಲ, ಮನುಷ್ಯರು."

"ನಾವು ಮನುಷ್ಯರು ಹೌದು. ಮಂದಿಯು ತಪ್ಪನ್ನು ಎತ್ತಿ ತೋರಿಸುವಾಗ ನಾವು ಮನುಷ್ಯರಲ್ಲ; ದೇವತೆಗಳು. ಇದು ಮನುಷ್ಯನ ಸ್ವಭಾವ. ಮನುಷ್ಯನು ತಾನು ಯಾವಾಗಲೂ ಸದ್ಗುಣಿಯೆಂದು ತಿಳಿದುಕೊಳ್ಳುವನು."

"ತಪ್ಪು ದುರ್ಗುಣಗಳನ್ನು ಅರಿತುಕೊಂಡವರು ಯಾರೂ ಇಲ್ಲವೇ?"

"ಇರುವರು, ತನ್ನ ದುರ್ಗುಣಗಳ ಅರಿವಾದರೆ ಮನುಷ್ಯನು ಸಂತನಾಗುವನು. ತನ್ನ ದುರ್ಗುಣಗಳ ಅರಿವು ಹೆಚ್ಚಾದಂತೆ ಮನುಷ್ಯನು ಪರರ ತಪ್ಪುಗಳನ್ನು ಎಣಿಸದೆ ಅವರ ಬಗ್ಗೆ ಒಂದು ತರಹದ ಅನುರಾಗವನ್ನು ತಾಳಿ ದಯಾರ್ದ್ರಭಾವವನ್ನು ತೋರಿಸುವನು. ನೊಂದ ಜೀವಿಗೆ ಜೀವನದಲ್ಲಿ ಬದುಕಿ ಬಾಳಲು ಸಂತಸದ ಮಾತುಗಳಿಂದ ಧೈರ್ಯವನ್ನು ಕೊಡುವನು. ಬೆಂದ ಜೀವಿಗೆ ಮುಂದೆ ಕರೆದು ಪ್ರೀತಿಯನ್ನು ತೋರಿಸುವನು. ಇಂತಹ ಜನರು ದೊರೆಯುವದು ಅತಿ ವಿರಳ" ಎಂದು ಪ್ರೇಮನಂದಿನಿಯು ನುಡಿದಳು.

"ನನ್ನ ಅಣ್ಣನು ಅನುಕಂಪದ ನಿಧಿ; ಕರುಣೆಯ ಸಾಗರ."

"ನಿಮ್ಮ ತಾಯಿ ಪುಣ್ಯವಂತಿ."

"ನಿಮಗೆ ಬಂಧು ಬಳಗವಿಲ್ಲವೋ? ತಂದೆತಾಯಿಗಳಿಲ್ಲವೋ? ಸಂತೈಸುವ ಮಕ್ಕಳಿಲ್ಲವೋ" ಎಂದು ಮಧುಮತಿಯು ಪ್ರೇಮನಂದಿನಿಗೆ ಕೇಳಿದಳು.

"ಬಂಧುಬಳಗವಿಲ್ಲ; ತಂದೆತಾಯಿಗಳಿಲ್ಲ. ನನ್ನವರೆಂಬುವವರು ಜಗತ್ತಿನಲ್ಲಿ ಯಾರೂ ಇಲ್ಲ. ಒಂದು ಆಸ್ಪತ್ರೆಯಲ್ಲಿ ಒಮ್ಮೆ ಹಡೆದಿದ್ದೆ."

"ಅದೇನಾಯಿತು? ಸತ್ತು ಹೋಯಿತೋ."

"ಪ್ರಸವವೇದನೆ ಬಹಳವಾಗಿ ಮೂರ್ಛಾವಸ್ಥೆಯಲ್ಲಿ ಹಡೆದೆನು. ನಾನು ಹಡೆದದ್ದು ಪರರಿಗೆ ಆಡಿಕೊಳ್ಳುವ ಮಾತಾಗಿತ್ತು. ಕೂಸು ಸತ್ತೇ ಬಂದಿತೆಂದು ನನಗೆ ಪ್ರಜ್ಞೆಬಂದ ಮೇಲೆ ಹೇಳಿದರು. ನಾನು ಅನೈತಿಕವಾಗಿ ಹಡೆದದ್ದಕ್ಕೆ ಅದರ ಬಗ್ಗೆ ನಾನು ಹೆಚ್ಚಾಗಿ ಕೇಳಲಿಲ್ಲ." ಮಧುಮತಿಯ ಮೋರೆಯನ್ನು ನೋಡುತ್ತ ಪ್ರೇಮನಂದಿನಿಯು ನುಡಿದಳು.

"ಪ್ರೇಮನಂದಿನಿ. ಚಹ ಇನ್ನೂ ಆಗಲಿಲ್ಲವೇ" ಎಂದು ಪದ್ಮನಾಭ ಕೋಣೆಯಿಂದ ಕೂಗಿದ.

"ಯಾವದೇ ಕೆಲಸದಲ್ಲಿ ಮಧುಮತಿ ಹೋದರೆ ಸಾಕು. ಅವಳು ಕೆಲಸ ಮಾಡುವವರ ಸಂಗಡ ಹರಟೆಯನ್ನು ಕೊಚ್ಚುತ್ತ ಅವರಿಗೆ ಕೆಲಸಕ್ಕೆ ಅಡ್ಡಿ ಮಾಡುವಳು. ಯಾವದೇ ಕೆಲಸದಲ್ಲಿ ಅವಳು ಹೊಕ್ಕರೆ ಶಿವಪೂಜೆಯಲ್ಲಿ ಕರಡಿ ಹೊಕ್ಕಂತೆ. ಮಧುಮತಿ, ಹೊರಗೆ ಬರಬಾರದೇ" ಎಂದು ಮೇಧಾವಿನಿಯು ಮಧುಮತಿಗೆ ಕೇಳಿಸುವಂತೆ ಹೇಳಿದಳು.

"ನಿನ್ನದು ಯಾವಾಗಲೂ ಅವಸರ" ಎಂದು ನುಡಿಯುತ್ತ ಮಧುಮತಿಯು ಚಹದ ಕಪ್ಪುಗಳನ್ನು ಕೋಣೆಯಲ್ಲಿ ತಂದಿಟ್ಟಳು.

ಪ್ರೇಮನಂದಿನಿಯು ಅವಳ ಹಿಂದೆಯೇ ಬಂದು ಎಲ್ಲರಿಗೂ ಚಹವನ್ನು ಕೊಟ್ಟಳು.

ಮಧುಮತಿಯು ಪದ್ಮನಾಭನ ಮೊಗ ನೋಡುತ್ತ.

"ನಂದಿನಿ, ಈ ಕಪ್ಪನ್ನು ನೀನು ತೆಗೆದುಕೋ, ಒಳಗಿನಿಂದ ಇನ್ನೊಂದು ನನಗೆ ತೆಗೆದುಕೊಂಡು ಬರುತ್ತೇನೆ" ಎಂದು ನುಡಿದಳು.

" ನಾನು ಒಳಗೆ ಕುಡಿಯುವೆನು. "

" ಇಲ್ಲಿ ಕುಳಿತು ಕುಡಿಯಲು ಪ್ರಾಧ್ಯಾಪಕರ ಆಕ್ಷೇಪವೇನಾದರೂ ಇರುವದೋ ಇಲ್ಲಿ ನೀನು ಕುಳಿತರೆ ಏನಾದರೂ ಮಾನ ಮುಕ್ಕಾಗುವದೊ. "

" ಹಾಗೇನೂ ಇಲ್ಲ " ಅಂದಳು ಪ್ರೇಮನಂದಿನಿ.

" ನಾವೆಲ್ಲರೂ ನಿಮ್ಮ ಮಕ್ಕಳಂತೆ. ನಮ್ಮ ಸಂಗಡ ಕುಡಿದರೆ ನೆಟ್ಟಗೆ. "

ಎಂದು ಮಧುಮತಿಯು ಹೇಳಿದಳು.

" ಪ್ರೇಮನಂದಿನೀ, ನೀನೂ ಇಲ್ಲಿಯೇ ಕುಳಿತು ಕುಡಿ " ಎಂದು ಪದ್ಮನಾಭನು ಹೇಳಿದನು.

ಪದ್ಮನಾಭನ ಇಂದಿನ ವಿಚಿತ್ರ ಸ್ವಭಾವವನ್ನು ಕಂಡು ಪ್ರೇಮನಂದಿನಿಗೆ ಅತ್ಯಾಶ್ಚರ್ಯವಾಯಿತು. ಎಲ್ಲರೆದುರಿಗೆ ತನ್ನನ್ನು ಅಕ್ಕರತೆಯಿಂದ ಕರೆದು ಚಹವನ್ನು ಕುಡಿಯಲು ಹೇಳಿದ್ದು ತನ್ನ ಭಾಗ್ಯವೆಂದು ಅಂದುಕೊಂಡಳು. ಪ್ರೇಮನಂದಿನಿಯು ಒಳಗಿನಿಂದ ಚಹವನ್ನು ತೆಗೆದುಕೊಂಡು ಕೋಣೆಯಲ್ಲಿ ಬಂದಳು. ಮಧುಮತಿಯು ತಾನೆದ್ದು ತನ್ನ ಕುರ್ಚಿಯನ್ನು ಪ್ರೇಮನಂದಿನಿಗೆ ಕೊಟ್ಟು ಮೇಧಾವಿನಿಯ ಹತ್ತರ ಹೋಗಿ ಕುಳಿತುಕೊಂಡಳು.

" ಹೀಗೆ ಕುಳಿತು ಚಹ ಕುಡಿಯುವದನ್ನು ಕಂಡು ನನಗಾದ ಆನಂದ ಹೇಳಲಿಕ್ಕೆ ಬರುವದಿಲ್ಲ " ಎಂದು ಮಧುಮತಿಯು ನಗುತ್ತ ನುಡಿದಳು.

" ಪ್ರಾಧ್ಯಾಪಕರು ಇಂದು ಸಾಮ್ಯವಾದಿಗಳಾದರು " ಅಂದಳು ಮೇಧಾವಿನಿ.

" ಏಕೆ " ಕೇಳಿದಳು ಮಧುಮತಿ.

" ಎಲ್ಲರೂ ಸಮಾನಸ್ಕಂಧರೆಂದು ತಿಳಿದು ಹತ್ತಿರ ಕುಳ್ಳರಿಸಿಕೊಂಡು ಚಹ ಕುಡಿಯುವದಕ್ಕೆ " ಮೇಧಾವಿನಿ ಹೇಳಿದಳು.

" ನಂದಿನಿಯನ್ನು ಯಾವಾಗಲೂ ನನ್ನ ಸಮಾನಳೆಂದೇ ತಿಳಿದುಕೊಂಡಿರುವೆನು. ಶ್ರೇಷ್ಠ, ಕನಿಷ್ಠ, ಉಚ್ಚ, ನೀಚ ಎಂಬ ಭಾವಗಳು ನನ್ನಲ್ಲಿಲ್ಲ " ಎಂದು ಪದ್ಮನಾಭನು ಉತ್ತರವಿತ್ತನು.

"ಇದು ಪ್ರಾಧ್ಯಾಪಕರಿಗೆ ಶೋಭಿಸತಕ್ಕ ಮಾತು. ಪ್ರಾಧ್ಯಾಪಕರೇ ಉಚ್ಚ ಮಟ್ಟದ ಮಾರ್ಗವನ್ನು ತೋರಿಸದಿದ್ದರೆ ವಿದ್ಯಾರ್ಥಿಗಳು ಯಾವ ಮಾರ್ಗವನ್ನು ಅನುಕರಣ ಮಾಡಬೇಕು? ನೈತಿಕ ಶಕ್ತಿಯಿರಬೇಕು ಅವರಲ್ಲಿ ವಿದ್ಯಾರ್ಥಿಗಳನ್ನು ತಮ್ಮ ಮಕ್ಕಳೆಂದು ಭಾವಿಸಬೇಕು" ಎಂದು ಮೇಧಾವಿನಿಯು ಮೃದುದನಿಯಿಂದ ಹೇಳಿದಳು.

"ಮೇಧಾವಿನಿ, ಕಲಿಸುವವನಲ್ಲಿ ನೈತಿಕ ಶಕ್ತಿಯಿರಬೇಕೆಂಬುದು ಸೂಕ್ತ ಮಾತು. ಆದರೆ ಸಾಂಪ್ರತಕ್ಕೆ ತದ್ವಿರುದ್ಧವಿರುವದು. ಅನೀತಿಯೇ ನೀತಿಯೆಂದು ಹೇಳುವ ದಿನಗಳು ಬಂದಿರುವವು. ತಾವು ಹಡೆದ ಹುಡುಗರ ಮೇಲೆಯೇ ತಂದೆತಾಯಿಗಳಲ್ಲಿ ಮಕ್ಕಳೆಂಬ ಭಾವನೆ ಈಗ ಇರುವದಿಲ್ಲ. ಪಶುಗಳಂತೆ ತಮ್ಮದೊಂದಾದರೆ ಮುಗಿಯಿತು. ತಂದೆ ತಾಯಿಗಳಲ್ಲಿಯೇ ಮಕ್ಕಳೆಂಬ ಭಾವನೆಯಿರದಿದ್ದರೆ ಕಲಿಸುವವರಲ್ಲಿ ಮಕ್ಕಳ ಭಾವನೆ ಹೇಗೆ ಬರಬೇಕು ? ವಿದ್ಯಾದಾನ ಮಾಡಬೇಕೆಂಬ ಪವಿತ್ರ ಭಾವನಯಿಂದ ಕಲಿಸುವ ವೃತ್ತಿಯನ್ನು ಕೈಕೊಂಡಿರುವವರು ನೂರರಲ್ಲಿ ಒಬ್ಬರೋ ಇಬ್ಬರೋ. ಕೆಲಸ ದೊರಕಿತೆಂದು ಕಲಿಸುವ ವೃತ್ತಿಯನ್ನು ಕೈಕೊಂಡವರೇ ಬಹಳ" ಎಂದು ಪದ್ಮನಾಭನು ನುಡಿದನು.

"ಕಲಿಸುವವರ ಬಗ್ಗೆ ಆದರ ಬುದ್ಧಿ ವಿದ್ಯಾರ್ಥಿಗಳಲ್ಲಿರುವದಿಲ್ಲ." ಎಂದು ಮೇಧಾವಿನಿಯು ನುಡಿದಳು.

"ಅನುರಾಗದಿಂದ, ವಾತ್ಸಲ್ಯದಿಂದ ನಾವು ವಿದ್ಯಾರ್ಥಿಗಳನ್ನು ಕಾಣದಿದ್ದರೆ ಅವರಿಗೆ ನಮ್ಮಲ್ಲಿ ಆದರ ಬುದ್ಧಿ ಹೇಗೆ ಬರಬೇಕು ? ನಾವು ಹುಡುಗರ ಜೀವನದಲ್ಲಿ ಬೆರೆತುಕೊಳ್ಳುವದಿಲ್ಲ. ಒಂದು ಪಕ್ಷಕ್ಕೆ ಬೆರೆತುಕೊಂಡರೆ ಅದಾವದೂ ಅನೀತಿಯ ಮಾರ್ಗಕ್ಕೆ" ಅಂದನು ಪದ್ಮನಾಭ.

"ಪ್ರೇಮನಂದಿನಿಯು ಪ್ರಾಧ್ಯಾಪಕಳಾಗಿದ್ದರೆ ಚೆನ್ನಾಗುತ್ತಿತ್ತು" ಅಂದಳು ಮಧುಮತಿ.

"ಮುಂದಿನ ಜನ್ಮದಲ್ಲಿ" ಉತ್ತರಕೊಟ್ಟಳು ಪ್ರೇಮನಂದಿನಿ,

"ಈ ಜನ್ಮದಲ್ಲಿ ಸಾಧ್ಯವಿಲ್ಲವೇ ?"

"ನಿರಕ್ಷರ ಕುಕ್ಷಿಯು ನಾನು."

"ಕಲಿಸಲು ಅಕ್ಷರವನ್ನು ಕಲಿಯಬೇಕಾಗಿಲ್ಲ", ಅಂದಳು ಮಧುಮತಿ.

“ ಜೀವನದ ಅಪಾರ ಅನುಭವವಿದ್ದರೆ ಸಾಕು. ಅನುಭವವನ್ನೇ ಹೇಳಿ ಬಾಲಕರ ಮನರಂಜಿಸಿದರೆ ಸಾಕು. ಹೇಳಿದ ಅನುಭವದ ಚಿತ್ರವನ್ನೇ ಬಾಲಕರು ಸ್ಮರಣೆಯಲ್ಲಿಟ್ಟುಕೊಂಡು ನಡೆದರೆ ವಿದ್ಯಾದಾನ ಮಾಡಿದ ಹಾಗೆ. ಮಂಡಿಸಿದ ಅನುಭವ ಚಿತ್ರದಿಂದ ಬಾಲಕರ ವಿಚಾರ ಶಕ್ತಿಗೆ ಪ್ರಚೋದನೆ ಸಿಕ್ಕರೆ ಸಾಕು. ಅಕ್ಷರವನ್ನು ಕಲಿಸುವದಕ್ಕಿಂತ ಇದು ಮಿಗಿಲಲ್ಲವೇ ? ” ಎಂದು ಮೇಧಾವಿನಿಯು ನುಡಿದಳು.

“ ಮೇಧಾವಿನಿಯು ಅನ್ನುವ ಮಾತು ಸತ್ಯ ” ಎಂದು ಅಂದನು ಪದ್ಮನಾಭ.

ಪದ್ಮನಾಭನಿಂದ ಅನತಿ ದೂರದಲ್ಲಿಯೇ ಕುಳಿತ ಪ್ರೇಮನಂದಿನಿಯ ಉಲ್ಲಸಿತ ಮೊಗವನ್ನು ಕಂಡು ಮಧುಮತಿಯು ಆನಂದಪಟ್ಟಳು.

“ ನೀವಿಬ್ಬರೂ ಹೀಗೆ ಕುಳಿತದ್ದು ನೋಡಿದರೆ ಜೀವನದಲ್ಲಿ ಸಮರಸಗೊಂಡ ದಂಪತಿಗಳಂತೆ ಕಾಣುವಿರಿ ” ಎಂದು ಮಧುಮತಿಯು ಹಿಂದೆ ಮುಂದೆ ವಿಚಾರ ಮಾಡದೆ ಥಟ್ಟನೆ ನುಡಿದುಬಿಟ್ಟಳು.

ಮಧುಮತಿಯ ಮಾತು ಪದ್ಮನಾಭನ ಹೃದಯಕ್ಕೆ ನಟ್ಟಿತು. ಏನೂ ತಿಳಿಯದವನಂತೆ ಕಣ್ಣುಮುಚ್ಚಿಕೊಂಡು ಕುಳಿತನು. ಪ್ರೇಮನಂದಿನಿಯ ಹೃದಯದಲ್ಲಿಯು ದುಃಖದ ಕೆರೆಯು ಕಟ್ಟೆಯು ಅವಳ ಮಾತಿನಿಂದ ಒಡೆಯಿತು. ಪ್ರೇಮನಂದಿನಿಯು ನೀರು ತುಂಬಿದ ಕಣ್ಣುಗಳನ್ನು ಕಂಡು ಪದ್ಮನಾಭನು ಅನುರಾಗ ಭಾವದಿಂದ ಆಕೆಯನ್ನು ನೋಡಿದನು. ಆತನ ಅನುರಾಗದ ಕಿರಣಗಳು ಬಿಡಿಯುವ ನೀರ ಹನಿಗಳು ಕಣ್ಣುಗಳಲ್ಲಿಯೇ ಮಾಯವಾಗಿ ಮೊಗಕ್ಕೆ ಒಂದು ತರಹದ ಕಾಂತಿಯನ್ನೀಡಿದವು. ಕಾಂತಿಯುತ ಮಂದಸ್ಮಿತ ಮೊಗವನ್ನು ಕಂಡು ಪದ್ಮನಾಭನು ಮನದಲ್ಲಿಯೇ ಸಂತೋಷಪಟ್ಟನು.

“ ನೀವಿಬ್ಬರೂ ಆದರ್ಶ ಜೀವಿಗಳು ” ಅಂದಳು ಮೇಧಾವಿನಿ.

“ ಜೀವಿಗಳೇನೋ ಹೌದು; ಆದರೆ ನೀನು ಹಚ್ಚಿದ ವಿಶೇಷಣವು ನಮಗೆ ಅನ್ವಯಿಸುವದಿಲ್ಲ ” ಎಂದು ಪದ್ಮನಾಭನು ಉತ್ತರವನಿತ್ತನು.

“ ನನಗೆ ತೋರಿದ್ದು ಆಡಿ ತೋರಿಸಿದೆ. ”

“ ಬಾಹ್ಯ ವೇಷದಿಂದ ಅಂತರಂಗವನ್ನು ತಿಳಿಯಬೇಡ. ”

" ಅಂತರಂಗವೇ ಬಾಹ್ಯರಂಗವಾಗುವದಿಲ್ಲವೇ ? "

" ಬಾಹ್ಯರಂಗವಾಗುವದು, ಆದರೆ ಬಾಹ್ಯವು ಅಂತರಂಗವಾಗಲಾರದು. ಇದೇ ಜೀವನದ ಸಮಸ್ಯೆ. ದೇಹವನ್ನು ತಿಕ್ಕಿ ಸ್ವಚ್ಛ ಮಾಡಿದರೆ ಹೃದಯವು ನಿರ್ಮಲವಾದೀತೇ ? ರಾಜನ ವೇಷವನ್ನು ಧರಿಸಿದರೆ ರಾಜನಾಗಲಾರನು " ಎಂದು ಪದ್ಮನಾಭನು ನುಡಿದನು.

" ಪ್ರೇಮನಂದಿನಿಯು ನನಗೆ ತೋರುವ ಮಮತೆಯು ನನ್ನ ತಾಯಿಯನ್ನು ನೆನಪು ಮಾಡಿಕೊಡುವದು " ಎಂದು ಮಧುಮತಿ ಮಾತನಾಡಿದಳು.

" ಹಿಂದಿನ ಜನ್ಮದಲ್ಲಿ ನಿನ್ನ ತಾಯಿಯಾಗಿರಬಹುದು. "

ಮೇಧಾವಿನಿ ನುಡಿದಳು.

" ಪುನರ್ಜನ್ಮ ನಂಬಿದವರಿಗೆ ಈ ಮಾತು ಮೇಳು ಮೇಧಾ "

ಎಂದು ಮಧುಮತಿಯು ನಗುತ್ತ ನುಡಿದಳು.

" ನಂಬುವದಿಲ್ಲವೆಂದು ಹೇಳಿ ಅದನ್ನೇ ನಂಬತಕ್ಕವಳು ನೀನು. ಹೀಗೆ ಆಡುವದು ನಿನಗೆ ರೂಢಿಯಾಗಿದೆ " ಎಂದು ಮೇಧಾವಿನಿ ಅಂದಳು.

" ನಂಬುತ್ತೇವೆಂದು ಹೇಳಿ ನಂಬದವಳು ನೀನು. "

ಎಂದು ಮಧುಮತಿ ಮೇಧಾವಿನಿಗೆ ಹೇಳಿದಳು. "

" ಮನುಷ್ಯನ ಸ್ವಭಾವದಲ್ಲಿ ಪರಿವರ್ತನೆಯಾದರೆ ಈ ಜನ್ಮದಲ್ಲಿಯೇ ಅವನಿಗೆ ಪುನರ್ಜನ್ಮ ಬರುವದಿಲ್ಲವೋ ? ಅವನು ಪುನಃ ಹುಟ್ಟಿದ ಮೇಲೆ ಹಾಗೆ ಆಗುವದಿಲ್ಲವೋ ? ಮರಣದ ದವಡೆಯಿಂದ ಹೊರಾಗಿ ಬಂದರೆ ಪುನಃ ಹುಟ್ಟಿ ಬಂದೆವೆಂದು ಅನ್ನುವದಿಲ್ಲವೋ ? ಪುನರ್ಜನ್ಮವಿರದಿದ್ದರೆ ಜನಗಳ ಸ್ಥಿತಿಗತಿಗಳಲ್ಲಿ ವ್ಯತ್ಯಾಸವೇಕಿರಬೇಕು " ಎಂದು ಪ್ರೇಮನಂದಿನಿಯು ಉತ್ತರವಿತ್ತಳು.

" ಸಾಮಾನ್ಯರಿಗೆ ತಿಳಿಯದ ವಿಷಯ " ಎಂದು ಮೇಧಾವಿನಿ ನುಡಿದಳು.

" ಅಸಾಮಾನ್ಯ ಮನುಷ್ಯರಿಗೆ ತಿಳಿಯುವದೋ ? ಅಸಾಮಾನ್ಯನು ದೇವನು ಇಲ್ಲವೆ ದಾನವನಿರಬೇಕು " ಎಂದು ಮಧುಮತಿಯು ಮೇಧಾವಿನಿಗೆ ಹೇಳಿದಳು.

ವೇಳೆ ಆಯಿತು ಹೋಗೋಣವೆಂದು ಮೇಧಾವಿನಿಯು ಮಧುಮತಿಗೆ ಹೇಳಿ ಪದ್ಮನಾಭನ ಮೊಗವನ್ನು ನೋಡಿದಳು.

“ ಇನ್ನು ಮೇಲೆ ನಾನು ಕುಳಿತರೆ ಮೇಧಾವಿನಿಯು ನನ್ನನ್ನು ಬಿಟ್ಟು ಹೋಗುವಳು ” ಎಂದು ಮಧುಮತಿಯು ಪ್ರೇಮನಂದಿನಿಯನ್ನು ನೋಡಿ ನುಡಿದಳು.

“ ಹೋಗಿ ಬನ್ನಿ; ನಿಮಗೆ ಅವಕಾಶ ದೊರೆತಾಗ ಇತ್ತ ಕಡೆಗೆ ಬರುತ್ತಿರಬೇಕು ” ಎಂದು ಹೇಳಿ ಪದ್ಮನಾಭನು ಅವರಿಗೆ ಬೀಳ್ಕೊಟ್ಟನು.

ಅವರನ್ನು ಕಳುಹಿಸಲು ಪ್ರೇಮನಂದಿನಿಯು ಹೊರಬಾಗಿಲಿನವರೆಗೆ ಹೋದಳು.

“ಮಗು, ಇಂದು ನೀನು ಬಹಳೇ ಮಾತನಾಡಿದಿ. ನಿನ್ನ ಒಂದೊಂದು ಶಬ್ದವನ್ನೂ ಕೂಡ ನಾನು ಮರೆಯುವಂತಿಲ್ಲ. ನನ್ನ ಆಯುಷ್ಯದಲ್ಲಿ ಎಷ್ಟೋ ವರುಷಗಳು ಉರುಳಿ ಹೋದವು. ಬಾಲ್ಯವನ್ನು ಕಳೆದೆ; ಯೌವನವನ್ನು ದಾಟಿದೆ; ವೃದ್ಧವಯಸ್ಸನ್ನು ದಾಟುತ್ತಿರುವೆ. ಬರೇ ನೋವಿನ ವರುಷಗಳನ್ನು ನಾನು ಕಂಡೆ. ಆನಂದದ ಒಂದು ಗಳಿಗೆಯಾದರೂ ನನ್ನ ಗತಿಸಿದ ಜೀವನದಲ್ಲಿ ಬರಲಿಲ್ಲ. ಇಂದು ನೀನು ಬಂದು ನಿನ್ನ ಅಂದವಾದ ಮಾತಿನಿಂದ ಒಂದು ನಿಮಿಷವಾದರೂ ಜಗತ್ತನ್ನು ಮರೆಯಿಸಿದಿ, ಜಗತ್ತು ಮರೆತು ನಿನ್ನೊಡನೆ ಬೆರೆತು ಆನಂದಪಟ್ಟುದು ಸತ್ಯವೋ ಅಸತ್ಯವೋ ಎಂಬುದು ನನಗೆ ತಿಳಿಯದಾಗಿದೆ. ನೀನು ಇನ್ನೂ ಚಿಕ್ಕವಳು; ನನ್ನ ಮಗಳಂತಿರುವಿ. ನಿನ್ನ ಉಪಕಾರವಾಯಿತೆಂದು ಅನ್ನಲು ವಾತ್ಸಲ್ಯದಿಂದ ಏನೋ ಬಾಯಿ ಒಪ್ಪಲೊಲ್ಲದು. ”

ಎಂದು ಪ್ರೇಮನಂದಿನಿಯು ಕಣ್ಣಲ್ಲಿ ನೀರು ತಂದು ಮಧುಮತಿಯ ಬೆನ್ನ ಮೇಲೆ ಕೈಯಾಡಿಸುತ್ತ ಹೇಳಿದಳು.

‘ ನೀವು ನಮ್ಮ ಮನೆಗೆ ಒಮ್ಮೆ ಬರಬೇಕು. ಅಣ್ಣ ವಿದ್ಯಾಧರನ ಪರಿಚಯ ಮಾಡಿ ಕೊಡುವೆ. ಆತನನ್ನು ಕರೆದುಕೊಂಡು ಬರಬೇಕೆಂದರೆ ಆತನಿಗೆ ಒಂದು ನಿಮಿಷವೂ ಬಿಡುವು ಇರುವದಿಲ್ಲ ’ ಎಂದು ಮಧುಮತಿಯು ನುಡಿಯುತ್ತ ಪ್ರೇಮನಂದಿನಿಗೆ ನಮಸ್ಕಾರ ಮಾಡಿದಳು.

ಪ್ರೇಮನಂದಿನಿಯು ಅವರನ್ನು ಕಳುಹಿಸಿ ಕೋಣೆಗೆ ಬಂದಳು.

"ಮಾತಿನಲ್ಲಿ ಮಧುಮತಿಯನ್ನು ಮೀರುವವರು ಯಾರೂ ಇಲ್ಲ." ಎಂದು ಪ್ರೇಮನಂದಿನಿಯು ನುಡಿದಳು.

ಪ್ರೇಮನಂದಿನಿಯ ಮಾತು ಕೇಳಿ ಪದ್ಮನಾಭನು ಮೊಗವನ್ನು ಮೇಲಕ್ಕೆತ್ತಿ,

"ನಂದಿನೀ ಇತ್ತ ಬಾ; ನನ್ನ ಎದುರಿಗಿನ ಕುರ್ಚಿಯ ಮೇಲೆ ಕುಳಿತುಕೋ" ಎಂದು ನುಡಿದನು.

ಆತನ ಮಾತು ಕೇಳಿ ಪ್ರೇಮನಂದಿನಿಗೆ ಬಹಳೇ ಸೋಜಿಗವೆನಿಸಿತು. ತನ್ನ ಎದೆಯ ಮೇಲಿನ ಸೆರಗನ್ನು ಸರಿಪಡಿಸಿಕೊಳ್ಳುತ್ತ ಪದ್ಮನಾಭನ ಎದುರಿಗಿನ ಕುರ್ಚಿಯ ಮೇಲೆ ಕೆಳಗೆ ಮೊಗ ಮಾಡಿಕೊಂಡು ಕುಳಿತಳು.

"ನಂದಿನೀ, ನಿನ್ನ ಮನಸ್ಸಿನಲ್ಲಿ ಲಗ್ನವಾಗುವದಿರುವದಲ್ಲವೇ? ನಿನ್ನನ್ನು ಕೆಲವು ದಿನಗಳ ಮೇಲೆ ಲಗ್ನವಾಗುವೆನೆಂದು ಮೋಹದ ಭರದಲ್ಲಿ ನಾನು ನಿನಗೆ ಹೇಳಿದ್ದೆ. ನನ್ನ ಆ ಮಾತನ್ನು ನಂಬಿ ಹಿಂದೆ ಮುಂದೆ ಏನೂ ವಿಚಾರ ಮಾಡದೆ ನನ್ನ ಮನೆಗೆ ಬಂದೆ. ಸತ್ಯ ಸಂಗತಿಯನ್ನು ಅಡಗಿಸಿ ನೀನು ಮನೆಯ ಅಡಿಗೆಯವಳೆಂದು ಹೇಳಿದೆ. ಮನೆಯಲ್ಲಿಯ ಸ್ವಂತದಾಳೆಂದು ಕೆಲವರ ಮುಂದೆ ಸಾರಿದೆ. ಅಡಿಗೆಯವಳಂತೆ ನೀನು ನಡೆಯುವೆ. ಮನೆ ನಿನ್ನದೆಂಬ ಭಾವನೆಯಿಂದ ದುಡಿವೆ. ಹಾಗೂ ದುಡಿಯುತ್ತಿರುವಿ ಏಕೆ? ದಾಂಪತ್ಯ ಜೀವನವನ್ನು ಒಮ್ಮೆಯಾದರೂ ಕಂಡು ಆಸೆ ನೀಗಬೇಕೆಂದಲ್ಲವೆ? ನಿನ್ನನ್ನು ನಾನು ಮೋಸ ಮಾಡಿದೆ. ನನ್ನ ಸ್ವಾರ್ಥದ ಸಲುವಾಗಿ ಪೊಳ್ಳು ವಚನಗಳನ್ನು ಕೊಟ್ಟೆ, ಆದರೆ ಈಗ ನೀನು ಹೇಳಿದ ದಿವಸವೇ ನಿನ್ನನ್ನು ಮದುವೆಯಾಗಲು ನಾನು ಸಿದ್ಧನು."

"ಏನು ಮಾತನಾಡುತ್ತಿರುವಿರಿ ಇಂದು? ಮನುಷ್ಯನು ಎಷ್ಟೋ ದುಷ್ಟನಾದರೂ ಆತನ ಆಯುಷ್ಯದಲ್ಲಿ ಒಮ್ಮೆಯಾದರೂ ಸಾಧುಭಾವ ಹುಟ್ಟಿ ದಯಾನಂತನಾಗುವನು. ನಾನು ಬೀದಿ ಬೀದಿಗಳಲ್ಲಿ ನಿರ್ಗತಿಕಳಾಗಿ ಅಲೆಯುತ್ತಿದ್ದೆ. ನನಗೆ ನೀವು ಆಶ್ರಯ ಕೊಟ್ಟಿರಲ್ಲ. ಜನಗಳ ಪಿಸು ನುಡಿಗಳಿಗೆ ಕಿವಿಗೊಡದೆ ನನಗೆ ಅನ್ನದಾತರಾಗಿಲ್ಲವೇ ನೀವು?"

"ನೀನಾದರೂ ಜನರ ಮಾತಿಗೆ ಕಿವಿಗೊಡದೆ ನನ್ನ ಮೇಲೆ ವಿಶ್ವಾಸವಿಟ್ಟು ಬರಲಿಲ್ಲವೇ?"

" ನಿಮಗೂ ವಯಸ್ಸಾಯಿತು. ನನಗೂ ವಯಸ್ಸಾಯಿತು. ನೀವು ಮದುವೆ ಮಾಡಿಕೊಳ್ಳುವೆನೆಂದು ಹೇಳಿದ್ದು ನನಗೆ ಸಾಕು. ಅದುವೇ ತೃಪ್ತಿ. ನನಗೆ ದಾಂಪತ್ಯಜೀವನ ಸಿಕ್ಕಹಾಗೆ. ಇರ್ವರಲ್ಲಿಯೂ ಭೋಗದಾಸೆಯಿಲ್ಲ. ನಾವಿಬ್ಬರೂ ಜೀವನದಲ್ಲಿ ಸಂ[illegible]ರು. ನನಗೆ ನೀವು ಜೋಡು. ನಿಮಗೆ ನಾನು ಜೋಡು. ನಿಮ್ಮ ಮುಂದಿನ ಜೀವನ ಏನೇ ಇದ್ದರೂ ನನಗೆ ನೀವು ಅನುರಾಗದ ನಿಧಿ; ಪ್ರೀತಿಯ ಸಾಗರ. "

" ನಂದಿನೀ, ಮೊಗವನ್ನು ಮೇಲಕ್ಕೆತ್ತು. ನಿನ್ನ ವಿಶಾಲವಾದ ಲಲಾಟದ ಮೇಲೆ ತಿಲಕವನ್ನಿಡುವೆ. "

ಸಂಜೆಯ ತಂಪಾದ ಗಾಳಿಯು ಕಿಡಿಕಿಯೊಳಗಿಂದ ಬೀಸಿ ಪ್ರೇಮನಂದಿನಿಯ ಲಲಾಟದ ಮೇಲಿದ್ದ ಒಂದೆರಡು ಕೂದಲುಗಳ ಗುಂಪನ್ನು ತೂರಿತು. ಮುಳುಗುವ ಸೂರ್ಯನ ಹೊಂಬಣ್ಣದ ಕಿರಣಗಳು ಅವಳ ಮೊಗದ ಮೇಲೆ ಬಿದ್ದು ರೂಪಕ್ಕೆ ಪುಟ ಕೊಟ್ಟಿತು. ಆಕರ್ಷಕ ರೂಪ ಕಂಡು ' ಪ್ರೇಮನಂದಿನಿ ' ಎಂದು ಪದ್ಮನಾಭ ನುಡಿದನು. ಎದೆಯ ಮೇಲಿನ ಸೆರಗು ಜಾರಿ ಕೆಳಗೆ ಸರಿಯಿತು.



ಸಾಯಂಕಾಲದ ಐದು ಗಂಟೆ. ಪದ್ಮನಾಭ ಏನೋ ಓದುತ್ತ ಕೋಣೆಯಲ್ಲಿ ಕುಳಿತಿದ್ದನು. ಪ್ರೇಮನಂದಿನಿಯು ತಂಬೂರಿಯ ತಂತಿಗಳನ್ನು ನುಡಿಸುತ್ತ ನಡುಮನೆಯಲ್ಲಿ ಪ್ರಸನ್ನಚಿತ್ತಳಾಗಿ ಕುಳಿತುಕೊಂಡಿದ್ದಳು. ಅವಳು ಚನ್ನಾಗಿ ಹಾಡಬಲ್ಲಳು. ಕೋಗಿಲೆಯ ಕಂಠ ಅವಳದು. ಪ್ರೇಮನಂದಿನಿಯ ಮಧುರ ಗಾನಕ್ಕೆ ಪಶುಪಕ್ಷಿಗಳೂ ಮುಗ್ಧವಾಗುತ್ತಿದ್ದವು. ಅವಳು ಚನ್ನಾಗಿ ಹಾಡಬಲ್ಲಳೆಂದು ಪದ್ಮನಾಭನಿಗೆ ಗೊತ್ತು. ಅವಳು ಹಾಡುವುದನ್ನು ಪದ್ಮನಾಭನು ಎಷ್ಟೋ ಸಲ ಅವಳಿಗರಿಯದಂತೆ ಕೇಳಿ

ಆನಂದಪಟ್ಟಿದ್ದನು. ಆದರೆ ಒಂದು ದಿನವಾದರೂ ಆತನು ಪ್ರೇಮನಂದಿನಿಗೆ ಹಾಡೆಂದು ಹೇಳಿದ್ದಿಲ್ಲ. ಆಕೆ ದೇಹವನ್ನು ಎಡೆಯಾಗಿ ಕೊಟ್ಟಿದ್ದಕ್ಕೆ ಪತಿತಳೆಂದು ಅಂದವರೂ ಅನ್ನಬಹುದು. ದೇಹದಿಂದ ಪತಿತರಾಗದಿದ್ದರೂ ಮನಸ್ಸಿನಲ್ಲಿ ಪತಿತರಾದವರೇ ಬಹಳ. ಆದರೆ ನಂದಿನಿಯು ಮನಸ್ಸಿನಿಂದ ಪತಿತಳಾಗಿದ್ದಿಲ್ಲ. ‘ ನನ್ನ ದೇಹ ನಿನ್ನ ಮಾಡಿಯಾಗಬಹುದು. ಆದರೆ ಮನಸ್ಸು ನಿನ್ನ ನುಡಿಯಾಗಲಾರದು ’ ಎಂದು ತನ್ನನ್ನು ಪತಿತ ಮಾರ್ಗಕ್ಕೆ ಹಚ್ಚಿದವರಿಗೆ ಮನದಲ್ಲಿ ಹೇಳುತ್ತಿದ್ದಳು. ಅವಳು ಮಾಡಿದ್ದು ಅನೀತಿಯೆಂದು ಪಂಡಿತರೂ ಪಾಮರರೂ ಕೂಗಿ ಕರೆದರೂ ತಾನು ಅನೀತಿ ಮಾರ್ಗವನ್ನು ತುಳಿದೆನೆಂದು ಅವಳಿಗೆ ಒಂದು ದಿನವಾದರೂ ಅನಿಸಲಿಲ್ಲ. ವಂಚಕಳಲ್ಲ, ಘಾತುಕಿಯಲ್ಲ, ಪಾಟಗಾರ್ತಿಯಲ್ಲ, ಎಂದು ನೊಂದ ಮನಕ್ಕೆ ಹೇಳುತ್ತಿದ್ದಳು. ಜಾರಿ ಕಾಲಿಗೆ ಆಶ್ರಯ ಸಿಗದ್ದರಿಂದ ಎಲ್ಲಿಯಾದರೂ ಸ್ಥಿರವಾದ ಬಾಳಿನ ಬೆಳಕನ್ನು ಕಾಣಬೇಕೆಂದು ಹಂಬಲಿಸಿ ರಕ್ಕರ ಮೋಸದಲ್ಲಿ ಎಡಚಿಬಿದ್ದು ಒದ್ದಾಡಿ ಘಾಸಿಯಾದ ಜೀವಿ.

ಇಂದು ಮನಸ್ಸು ಏಕೋ ಆನಂದಲಹರಿಯಲ್ಲಿ ತೇಲಾಡುತ್ತಿತ್ತು. ಮನೋದ್ವೇಗಕರ ಶೃಂಗಾರ ರಸ ಪದಗಳನ್ನು ಅವಳು ಹಾಡಲಿಲ್ಲ. ಭಕ್ತಿಭಾವಪರ ಗೀತೆಗಳನ್ನು ಕೋಗಿಲೆಯ ಕಂಠದಿಂದ ಹಾಡುತ್ತ ತಂಬೂರಿಯ ತಂತಿಗಳನ್ನು ನುಡಿಸುತ್ತಿದ್ದಳು. ಭಾವಪರವಶಳಾದ ಅವಳ ಭಕ್ತಿಗೀತೆಯನ್ನು ಕೇಳಿ ಪದ್ಮನಾಭನು ಕೋಣೆಯಲ್ಲಿಯೇ ತಲೆದೂಗುತ್ತಿದ್ದನು. ಏಳು ಜನ್ಮದ ಕರ್ಮ ವಿಧಿ ನಮ್ಮ ಬೆನ್ನು ಬಿಡದು, ಎಂದು ಗುಣಗುಟ್ಟಿದ. ಕರ್ಮಕ್ಕೆ ಮೊರೆಯಿಟ್ಟರೆ ಧರ್ಮತೋರೀತೇ ಅದು ಎಂದು ಮತ್ತೊಮ್ಮೆ ಮನದಲ್ಲಿ ಅಂದುಕೊಂಡ. ಕರ್ಮವನ್ನು ಜೀವಿಸಿ ಸವೆಸಬೇಕು, ಇದ್ದು ಜಯಿಸಬೇಕೆಂದು ಒಂದು ಅಸ್ಪಷ್ಟವಾಣಿಯು ಹೃದಯದಿಂದ ನುಡಿದಂತೆ ಅವನಿಗೆ ಭಾಸವಾಯಿತು.

ಅದೇ ಸಮಯಕ್ಕೆ ಪ್ರೇಮನಂದಿನಿಗೆ ಭೆಟ್ಟಿಯಾಗದೆ ಬಹಳ ದಿನಗಳಾದವೆಂದು ಹಾತೊರೆದು ಮಧುಮತಿಯು ಬಂದಳು. ಮನೆಯಲ್ಲಿ ಕಾಲಿಡುತ್ತಲೇ ಪ್ರೇಮನಂದಿನಿಯ ಗಾಯನದ ಮಧುರ ದನಿಯನ್ನು ಕೇಳಿ ಸಪ್ಪಳ ಮಾಡದೆ ನಿಂತಲ್ಲಿಯೇ ನಿಂತು ಬಿಟ್ಟಳು. ಪದ್ಮನಾಭನು ಮಧು

ಮತಿಯು ಬರವನ್ನು ಕಂಡು ಕೂಗಿ ಕರೆಯಬೇಕೆಂಬುವಷ್ಟರಲ್ಲಿಯೇ ಮಧುಮತಿಯು ಸನ್ನೆ ಮಾಡಿ ಆತನಿಗೆ ಸುಮ್ಮನಿರಲು ಹೇಳಿದಳು. ಹದಿನೈದು ನಿಮಿಷಗಳಾದರೂ ಗಾನಲಹರಿಯಲ್ಲಿ ಪ್ರೇಮನಂದಿನಿಯು ಮಗ್ನಳಾಗಿದ್ದಳು.

ಪ್ರತಿಯೊಂದು ಪ್ರಾಣಿಗೂ ಜೀವನದಲ್ಲಿ ಒಂದು ನಿಮಿಷವಾದರೂ ದೇವರು ಆನಂದ ಕೊಡುವನೆಂದು ಮಧುಮತಿಗೆ ಅನಿಸಿತು.

ಪದ್ಮನಾಭನು ಆನಂದ ಪರವಶನಾಗಿ ಕೋಣೆಯಿಂದ ಪ್ರೇಮನಂದಿನಿಯು ಕುಳಿತಲ್ಲಿಗೆ ಹೋಗಿ,

" ನಂದಿನೀ "

ಎಂದು ಮೆಲ್ಲಗೆ ನುಡಿದನು.

ದನಿಯನ್ನು ಕೇಳಿ ತಂಬೂರಿಯನ್ನು ಕೆಳಗಿರಿಸಿ ಎದ್ದು ನಿಂತಳು.

" ಪ್ರೇಮನಂದಿನೀ, ಇಂದು ನಿನ್ನ ಗಾಯನವನ್ನು ಕೇಳಿ ರಾಧಾರಮಣನು ಕೋಣೆಯಲ್ಲಿ ಕುಣಿಯುತ್ತಿದ್ದಂತೆ ನನಗೆ ಭಾಸವಾಯಿತು. A sinner has a future ಎಂಬುದು ನನಗೆ ನೆನಪಾಗುವದು "

ಹೊರಗೆ ನಿಂತ ಮಧುಮತಿಯು ಓಡುತ್ತ ಒಳಗೆ ಬಂದು,

" A saint has a past, " ಎಂದು ನುಡಿದಳು.

" ಮಗು, ಬಾ ಕುಳಿತುಕೋ. ಇದೇ ಬಂದಿಯಾ ? "

" ಒಂದು ಹದಿನೈದು ನಿಮಿಷಗಳಾದವು. "

" ಎಲ್ಲಿ ಕುಳಿತಿದ್ದೆ ? "

" ನಿನ್ನ ಹೃದಯದಲ್ಲಿ "

" ನನ್ನ ಹೃದಯದಲ್ಲಿ ಕುಳಿತು ಎಷ್ಟೋ ದಿನಗಳಾದವು. "

" ನಿನ್ನ ಗಾಯನವನ್ನು ಕೇಳುತ್ತ ಮುಗ್ಧಳಾಗಿ ಹೊರಗೆ ನಿಂತಿದ್ದೆ. "

" ಒಳಗೆ ಬರಬೇಕಾಗಿತ್ತು. "

" ಬಂದಿದ್ದರೆ ಹಾಡುವದನ್ನು ನಿಲ್ಲಿಸುತ್ತಿದ್ದಿ. "

" ನಿನಗೆ ಹಾಡಲು ಬರುವದೋ ? "

" ನನಗೆ ಹಾಡಲೂ ಬರುವದು, ನೃತ್ಯ ಮಾಡಲೂ ಬರುವದು. "

" ಯಾರು ಕಲಿಸಿದರು ? "

" ಅಮ್ಮ ಶಿಕ್ಷಕರನ್ನು ಇಟ್ಟು ಕಲಿಸಿದಳು. ದಿನಾಲು ದೇವರ

ನಾಮದ ಗೀತೆಗಳನ್ನು ಹೇಳುತ್ತಿದ್ದಳು."

"ನೀನೇನು ಮಾಡುತ್ತಿದ್ದಿ?"

"ನಾನು ಹಾಡುತ್ತ ಕುಳಿತುಕೊಳ್ಳುತ್ತಿದ್ದೆ. ನಾನು ಹಾಡುವದನ್ನು ಕಂಡು ಅವ್ವ ಎಷ್ಟೋ ಸಲ ನನ್ನ ಮೈದಡೆಯುತ್ತಿದ್ದಳು. ಆಗ್ಗೆ ನನಗಾಗುವ ಆನಂದ ಹಿಡಿಸಲಾರದಷ್ಟು. ಎಷ್ಟು ಬಣ್ಣಿಸಿದರೂ ಕಡಿಮೆ. ನೀವೂ ಸೊಗಸಾಗಿ ಹಾಡುವಿರಿ."

"ಇಷ್ಟು ಚನ್ನಾಗಿ ಹಾಡುವಳೆಂದು ಯಾರೂ ಅರಿತಿದ್ದಿಲ್ಲ" ಎಂದು ಪದ್ಮನಾಭ ನುಡಿದನು.

"ಹಾಡುವವರಿಗೆ ಮನಸ್ಸಿನ ಪ್ರಸನ್ನತೆ ಬೇಕು. ಯಾತರ ಬಗ್ಗೆ ಹಾಡುವರೋ ಅದರ ಮೇಲೆ ಪ್ರೇಮವಿರಬೇಕು. ಪ್ರೇಮದ ಪರವಾವಧಿಯೇ ಭಕ್ತಿ. ಪ್ರೇಮವಿಲ್ಲದ ಹಾಡು ರಸವಿಲ್ಲದ ಕಬ್ಬಿನಂತೆ, ಭಕ್ತಿಯಿಲ್ಲದ ಗೀತೆ ಕತ್ತೆಯ ತುತ್ತೂರಿ. ಭಕ್ತಿಯಿಲ್ಲದ ಹಾಡು ರಕ್ತವಿಲ್ಲದ ದೇಹದಂತೆ" ಎಂದು ಪ್ರೇಮನಂದಿನಿಯು ನುಡಿದಳು.

"ಇಂದೇಕೆ ಹಾಡುತ್ತಿದ್ದಿರಿ?"

"ನಾಳೆ ರಾಮನವಮಿ. ಶ್ರೀರಾಮಚಂದ್ರನ ಜನ್ಮದಿನ. ಜನನ ಕಾಲಕ್ಕೆ ಹಾಡಲು ನೆನಪು ಮಾಡಿಕೊಂಡೆ."

"ರಾಮನವಮಿಯನ್ನು ಎಂದಾದರೂ ನೀವು ಮಾಡಿರುವಿರೋ?" ಎಂದು ಕೇಳಿದಳು ಮಧುಮತಿ.

"ಮನು ಇಂದಿನವರೆಗೆ ನಾನು ರಾಮನವಮಿಯನ್ನು ಮಾಡಿಲ್ಲ, ದೇವಸ್ಥಾನದಲ್ಲಿ ರಾಮನ ಜನನ ಉತ್ಸವವನ್ನು ನೋಡಿರುವೆನು. ಜನರು ತಮ್ಮ ಮನಬಂದ ಯಾವದೇ ಹೆಸರಿನಿಂದ ನನ್ನನ್ನು ಕರೆದು ದೂಷಿಸಿದರೂ ಹೃದಯದಲ್ಲಿ ಮಾತ್ರ ರಾಮನಾಮ ಜಪವನ್ನು ಮಾಡುವದು ಬಿಟ್ಟಿಲ್ಲ. ಅಹಲ್ಯೆಯನ್ನು ಉದ್ಧಾರ ಮಾಡಿದನು ರಾಮನು ಎಂಬ ದೃಢವಾದ ನಂಬಿಗೆ ನನ್ನದು. ನನಗೆ ರಾಮನವಮಿಯನ್ನು ಮಾಡಲು ಇಂದಿನ ವರೆಗೆ ಎಲ್ಲಿಯೂ ಆಸ್ಪದ ದೊರೆಯಲಿಲ್ಲ. ಬೀದಿಯ ಭಿಕಾರಿಯಾಗಿ ಅಲೆಯುತ್ತಿದ್ದ ನನಗೆ ಮನೆಯೆಲ್ಲಿಂದ ಬರಬೇಕು? ನನ್ನವರು ಎಂಬುವವರು ಯಾರೂ ಇದ್ದಿಲ್ಲ; ಅಕ್ಕರತೆಯಿಂದ ಮುಂದೆ ಕರೆಯುವವರು ಯಾರು

ಇದ್ದಿಲ್ಲ. ಈಗ ನನಗೆ ಮನೆಯೆಂಬುದು ಇರುವದು. ಕಕುಲಾತಿಯಿಂದ ಮುಂದೆ ಕರೆದು ತಮ್ಮ ಕರುಣಾಛತ್ರದಲ್ಲಿ ನಿಂತು ಬದುಕಿ ಬಾಳಲು ಇವರು ನನಗೆ ಅನುವು ಮಾಡಿಕೊಟ್ಟಿರುವರು. ಈ ಮನೆ ನನ್ನ ಮನೆ ಯೆಂಬ ಭಾವನೆಯಾಗಿಬಿಟ್ಟಿದೆ. ರಾಮನವಮಿಯನ್ನು ಮಾಡಲಿಕ್ಕೆ ಅವರ ಆತಂಕವಿಲ್ಲವೆಂದು ತಿಳಿದು ನಾಳೆ ಮಾಡಬೇಕೆಂದು ಮಾಡಿರುವೆ."

"ನಾಳಿನ ಉತ್ಸವದಲ್ಲಿ ನಾನೂ ಭಾಗಿಯಾಗಿರುವೆ" ಅಂದನು ಪದ್ಮನಾಭ.

"ನನ್ನ ಬಾಯಿಂದ ಬಂದಕ್ಷಣವೇ ಅವರು ತಂಬೂರಿಯನ್ನು ತಂದು ಕೊಟ್ಟರು. ಅದೇಕೆಯೆಂಬ ಪ್ರಶ್ನೆಯನ್ನು ಕೂಡ ಹಾಕಲಿಲ್ಲ. ನನ್ನ ಮನೆಯೆಂದು ಅವರು ಹೇಳಿದ ಮಾತು ನನ್ನ ಮನದಲ್ಲಿ ದೃಢವಾಯಿತು" ಎಂದು ನುಡಿದಳು ಪ್ರೇಮನಂದಿನಿ.

"ನಾಳೆ ರಾಮಜನನ ಕಾಲಕ್ಕೆ ನಮ್ಮನ್ನು ಕರೆಯುವಿರೋ" ಕೇಳಿದಳು ಮಧುಮತಿ.

"ಮಗು ನಿನ್ನನ್ನೂ ಮೇಧಾವಿನಿಯನ್ನೂ ಬಿಟ್ಟು ಉತ್ಸವ ಹೇಗೆ ಮಾಡುವೆನು? ನಾನು ನಾಳೆ ಮುಂಜಾನೆ ನಿಮಗೆ ಹೇಳಿ ಕಳುಹಿಸತಕ್ಕವ ಳಿದ್ದೆ."

ಪ್ರೇಮನಂದಿನಿಯೆದುರಿಗೆ ಪದ್ಮನಾಭನೂ ಮಧುಮತಿಯೂ ಕುಳಿ ತುಕೊಂಡರು.

"ಶ್ರೀರಾಮಮಂದಿರದಲ್ಲಿ ನಾಳೆ ನೀವು ಗಾಯನ ಸೇವೆಯನ್ನು ಮಾಡಿದರೆ ಹೇಗೆ?" ಎಂದು ಮಧುಮತಿಯು ಕೇಳಿದಳು.

"ಮಗು ನಾನು ವಿಧವೆ; ಪತಿತಳು. ನಾಳೆ ನಾನು ಗಾಯನ ಸೇವೆ ಯನ್ನು ಮಾಡಿದರೆ ಜನರು ದೇವರನ್ನು ಮರೆತು ಮೂಗು ಮುರಿಯುತ್ತ ನನ್ನನ್ನೇ ಟೀಕಿಸುತ್ತ ಕುಳಿತುಕೊಳ್ಳುವರು. ನಾನು ಹೋದರೆ ಅವರ ಉತ್ಸವಕ್ಕೆ ತೊಂದರೆಯಾಗುವದು. ನನ್ನಿಂದ ತಮ್ಮ ಪವಿತ್ರತೆಯು ಹಾಳಾಯಿತೆಂದು ತಿಳಿದುಕೊಳ್ಳುವರು" ಎಂದು ಪ್ರೇಮನಂದಿನಿಯು ಖಿನ್ನಳಾಗಿ ನುಡಿದಳು.

"ದೇವರನ್ನೇ ಟೀಕಿಸುತ್ತಾರೆ. ಜನರನ್ನು ಟೀಕಿಸುವದರಲ್ಲೇನು

ಶ್ಚರ್ಯ ? ” ಪದ್ಮನಾಭನು ಅಂದನು.

“ ಶಕ್ಯವಾದರೆ ಹೋಗೋಣವಂತೆ. ಮಂದಿರಕ್ಕೆ ಹೋಗಿ ಬರಲು ಯಾರ ಆತಂಕವೂ ಇಲ್ಲ. ನಮ್ಮ ಗಾಯನ ಸೇವೆಯನ್ನು ಬಿಟ್ಟರಾಯಿತು” ಎಂದು ಮಧುಮತಿಯು ಪ್ರೇಮನಂದಿನಿಯ ಮೊಗವನ್ನು ನೋಡುತ್ತ ನುಡಿದಳು.

“ ನಾಳೆ ನೋಡಿದರಾಯಿತು. ಆಗ್ಗೆ ಏನು ಅನಿಸುವದೋ ಹಾಗೆ ಮಾಡಿದರಾಯಿತು ” ಎಂದು ಮಧುಮತಿಗೆ ಹೇಳಿದಳು.

“ ನೀವು ನಾಳೆ ಮಂದಿರಕ್ಕೆ ಹೋದರೆ ನಿಮ್ಮ ಸಂಗಡ ನಾನೂ ಬರುವೆ ” ಎಂದು ಪದ್ಮನಾಭನು ಅಂದನು.

ಮಧುಮತಿಯು ತಂಬೂರಿಯನ್ನೆತ್ತಿ ಮೂಲೆಯಲ್ಲಿಟ್ಟಳು.

“ ಮಗೂ, ನಾಳೆ ನೀನೂ ಹಾಡಬೇಕು. ”

“ ನಿಮ್ಮೆದುರಿಗೆ ನನ್ನ ಹಾಡೇನು ? ”

“ ದೇವರನಾಮಕ್ಕೆ ಶುದ್ಧ ಭಾವವಿದ್ದರೆ ಸಾಕು. ”

“ ನಾನು ಹಾಡಹತ್ತಿದರೆ ಅಮ್ಮನು ಮಾತ್ರ ಕೃಷ್ಣ ಕೃಷ್ಣ ಅನ್ನುತ್ತ ನಿದ್ರೆ ಹೋಗಿದ್ದಳು. ”

“ ಇಲ್ಲಿ ರಾಮಮಂದಿರವಿರುವದೇ ? ”

“ ಇಲ್ಲಿಯೇ ಸಮೀಪದಲ್ಲಿರುವದು. ನಾನು ಕರೆದುಕೊಂಡು ಹೋ-ಗುವೆ. ಶಕ್ಯವಾದರೆ ಅಣ್ಣನನ್ನೂ ಕರೆದುಕೊಂಡು ಬರುವೆನು. ಆತನಿಗೆ ದಿನಾಲು ಒಂದೆರಡು ಆಪರೇಶನ್ನ ಇದ್ದೇ ಇರುವವು. ಆದುದರಿಂದ ಆತ ನಿಗೆ ಬಿಡುವು ದೊರೆಯುವದು ಬಹಳ ಕಠಿಣ. ರೋಗಿಗಳ ಸೇವೆಯನ್ನು ಮಾತ್ರ ಬಿಡಬೇಡವೆಂದು ಅಮ್ಮನು ಹೇಳಿದ್ದಳು. ಆದರಂತೆಯೇ ಅಣ್ಣನು ನಡೆದುಕೊಂಡು ಬಂದಿದ್ದಾನೆ ” ಎಂದು ಮಧುಮತಿ ನುಡಿದಳು.

“ ನಿಮ್ಮ ಅಮ್ಮನಿಗೆ ವೇದವತಿಯೆಂಬುದನ್ನು ಬಿಟ್ಟು ಬೇರೆ ಏನಾದರೂ ಹೆಸರಿತ್ತೋ?” ಎಂದು ಪದ್ಮನಾಭನು ಕೇಳಿದನು.

“ ಅವಳಿಗೆ ಅದೊಂದೇ ಹೆಸರು, ಬೇರೆ ಹೆಸರಿದ್ದಿಲ್ಲ. ”

“ಅವಳಿಗೆ ನೀವಿಬ್ಬರೇ ಮಕ್ಕಳೋ” ಎಂದು ಪದ್ಮನಾಭನು ಕೇಳಿದನು.

“ ಹೌದು, ನಾನು ಹಾಗು ವಿದ್ಯಾಚರಣ. ”

ನಾನು ಮಂತ್ರ ಮುಗ್ಧನಾಗಿ ಕುಳಿತಿದ್ದೆ. ದೇವರ ಮುಂದೆ ಹಾಡಿದರೆ ನಿನಗೆ ಪುಣ್ಯ ಬರುವದು. ”

“ ಕಲ್ಲಿನ ಮುಂದೆ ಹಾಡಿದರೆ ಪುಣ್ಯವೂ ಬರುವದಿಲ್ಲ. ಪಾಪವೂ ತಟ್ಟುವದಿಲ್ಲ. ಕಲ್ಲು ಪುಣ್ಯಪಾಪಗಳನ್ನು ನಿರ್ಣಯ ಮಾಡಲಾರದು. ಜನರೇ ತಮತಮಗೆ ಬೇಕಾದಂತೆ ಪುಣ್ಯ ಪಾಪಗಳ ಅರ್ಥ ಹಚ್ಚುವರು. ಇರಲಿ. ಪುಣ್ಯ-ಪಾಪಗಳಿರುವವೆಂಬ ಮಾತು ಇಂದು ನಿಮಗೆ ಗೊತ್ತಾಯಿತೋ ? ” ಎಂದು ಮಧುಮತಿ ಕೇಳಿದಳು.

“ ಭಾವದಿಂದ ಹಾಡಿದರೆ ಕಲ್ಲು ದೇವರಾಗುವದು, ಭಾವವಿರದಿದ್ದರೆ ದೇವರು ಕಲ್ಲಾಗುವನು. ಪುಣ್ಯ–ಪಾಪಗಳಂತೆ ದೇವರು ನಮ್ಮ ಭಾವದಲ್ಲಿಯೇ ಅಡಗಿರುವನು ” ಎಂದು ಗಿರಿಧಾರಿಯು ನುಡಿದನು.

“ ಅಮ್ಮನು ಚನ್ನಾಗಿ ಹಾಡುವಳು. ಅವಳನ್ನು ಕರೆದರೆ ನೆಟ್ಟಗೆ ” ಎಂದು ಮಧುಮತಿಯು ನುಡಿದಳು.

“ ಸತ್ತ ವೇದವತಿಯನ್ನು ಕರೆಯಲು ನಾನು ಯಮಲೋಕಕ್ಕೆ ಹೋಗಲೋ ? ನಾನು ಹೋದರೆ ಯಮನು ನನ್ನನ್ನು ಕಟ್ಟಿ ಹಾಕುವನು ” ಎಂದು ಗಿರಿಧಾರಿಯು ಅಂದನು.

“ ಯಮನನ್ನು ಭೆಟ್ಟಿಯಾಗಿ ಬಂದರೆ ನೆಟ್ಟಗೆ. ಅಲ್ಲಿಯ ಸುದ್ದಿಯನ್ನು ಹೇಳುತ್ತ ಜನರನ್ನು ಹೆದರಿಸುತ್ತ ಹೋಗುವಿರಿ. ”

“ ಮೊದಲು ನಾನು ಸಾಯಬೇಕೆಂದು ನಿನ್ನ ಇಚ್ಛೆಯೋ ? ”

“ ಹಾಗೇನೂ ಅಲ್ಲ. ನೀವು ಸಾಯಬೇಕೆಂದು ನಾನು ಅನ್ನಲಿಲ್ಲ. ಯಮಲೋಕಕ್ಕೆ ಹೋಗಿ ಬರಬೇಕೆಂದು ಅಂದೆ. ಯಮಲೋಕಕ್ಕೂ ಹೋಗಿ ಬರಲು ಸರಕಾರದವರು ಸಮಾಜಸೇವಕರಿಗೆ ರಾಯಸವನ್ನು ಕೊಟ್ಟಿರುವರೆಂದು ಜನರು ಮಾತನಾಡುತ್ತಿದ್ದುದನ್ನು ಕೇಳಿರುವೆ. ತಾವು ಸಮಾಜಸೇವಕರು; ಅದಕ್ಕೇ ನಾನು ಅಂದದ್ದು."

“ ಮಧುಮತಿ, ಎಷ್ಟಾದರೂ ನಿನ್ನ ಚೇಷ್ಟೆ ತಪ್ಪುವದಿಲ್ಲ. ”

“ ನನ್ನ ಹುಟ್ಟು ಸ್ವಭಾವವೆಂದು ಎಂದೋ ನಿಮಗೆ ಹೇಳಿರುವೆನು. ಅಮ್ಮನೆಂದರೆ ವೇದವತಿಯೆಂದು ಹೇಗೆ ತಿಳಿದುಕೊಂಡಿರಿ. ”

“ ಪ್ರತಿಯೊಬ್ಬನಿಗೂ ಅಮ್ಮನು ಒಬ್ಬಳೇ ಇರುವಳು. ”

" ನಾನು ಪ್ರತಿಯೊಬ್ಬರಂತೆ ಅಲ್ಲ. "

" ಅಂದರೆ "

" ನಾನು ವಿಶಿಷ್ಟ ವರ್ಗದವಳು. "

" ನನಗೆ ತಿಳಿಯಲಿಲ್ಲ. "

" ನನಗೆ ಇಬ್ಬರು ಅಮ್ಮಂದಿರು, ಒಬ್ಬಳು ವೇದವತಿ; ಇನ್ನೊಬ್ಬಳು ಪ್ರೇಮನಂದಿನಿ. "

" ನಾಲ್ಕು ದಿನ ಪದ್ಮನಾಭರ ಮನೆಗೆ ಬಂದಕೂಡಲೇ ಪ್ರೇಮನಂದಿನಿಯವರನ್ನು ನಿಮ್ಮ ಅಮ್ಮನನ್ನಾಗಿ ಮಾಡಿಕೊಂಡಿರುವೆಯಾ ? ನಮ್ಮ ಮನೆಗೆ ಬರಹತ್ತಿ ಎಷ್ಟೋ ದಿವಸಗಳಾದವು. ನಮ್ಮ ಮನೆಯಲ್ಲಿ ನಿನಗೆ ಯಾರೂ ತಂದೆ ಸಿಗಲಿಲ್ಲವೇ ? " ಎಂದು ಗಿರಿಧಾರಿ ನಗುತ್ತ ಅಂದನು.

" ನಿಮ್ಮ ತಂದೆಯೇ ನನ್ನ ತಂದೆಯೆಂದು ಅನ್ನಬೇಕಾಗುವದು.

" ಅಂದಮೇಲೆ ನೀನು ನನ್ನ ತಂಗಿಯಾಗಬೇಕಾಗುವದು. "

" ತಿಳಿದುಕೊಂಡಮೇಲೆ ಸಹಜವಾಗಿ ಆಗಬೇಕಾಗುವದು. "

"ಮಾತಿನಲ್ಲಿ ಬಹು ಚತುರೆ ನೀನು.ಯಾರ ಕೈಯಲ್ಲಿ ಸಿಕ್ಕುವವಳಲ್ಲ."

" ಜಾಣ ಹುಡುಗಿ " ಎಂದು ಪ್ರೇಮನಂದಿನಿ ಅಂದಳು.

" ಇರಲಿ, ರಾಮಮಂದಿರದಲ್ಲಿ ನಾಳೆ ನೀನು ಕಾರ್ಯಕ್ರಮ ನಡೆಸುವಿಯೋ ಇಲ್ಲವೋ ? "

" ಪ್ರೇಮನಂದಿನಿಯು ಉತ್ತಮಳಾದ ಗಾಯಕಳು. ಅವಳ ಕಂಠ ಕೋಗಿಲದಂತೆ. ಅವರು ಹಾಡುವ ಭಕ್ತಿಗೀತೆಗಳನ್ನು ಕೇಳಿದರೆ ಎಲ್ಲರೂ ದಂಗುಬಡಿದು ಕುಳಿತುಕೊಳ್ಳುವರು. ಅವರು ಹಾಡಿದ್ದನ್ನು ಇಂದೇ ನಾನು ಕೇಳಿದ್ದು. ಅದಾದರೂ ಹದಿನೈದು ನಿಮಿಷಗಳ ಪೂರ್ವದಲ್ಲಿ. ನಾಳೆ ಅವರು ಮನೆಯಲ್ಲಿ ಶ್ರೀರಾಮನನ್ನು ತೊಟ್ಟಿಲದಲ್ಲಿ ಹಾಕುವರಂತೆ. ಆ ಕಾಲಕ್ಕೆ ಅವರು ಮನೆಯಲ್ಲಿ ಹಾಡುವರಂತೆ. ನೀವೂ ಬಂದು ಕೇಳಿದರೆ ಅವರ ಗಾನ ಮಧುರಸದ ಸವಿಯು ಗೊತ್ತಾಗುವದು. "

" ಅವರು ಸಂಗೀತಗಾರರೆಂಬುವದು ನನಗೆ ಗೊತ್ತಿರಲಿಲ್ಲ. ನಿನ್ನ ಹಾಡನ್ನು ನಾನು ಕೇಳಿರುವದರಿಂದ ನಿನ್ನನ್ನು ಹಾಡಲು ಕೇಳಿಕೊಂಡೆ. ಪದ್ಮನಾಭರೇ ನಾಳೆ ತಾವು ತಮ್ಮ ಮನೆಯವರನ್ನು ಕರೆದುಕೊಂಡು

ರಾಮಮಂದಿರಕ್ಕೆ ಜನನ ಕಾಲಕ್ಕೆ ಬರಬೇಕೆಂದು ನನ್ನ ಆಗ್ರಹದ ಬಿನ್ನಹವಿರುವದು. ಪ್ರೇಮನಂದಿನಿಯವರಿಗೆ ನಾಳೆ ಮಂದಿರದಲ್ಲಿ ಹಾಡಲು ಹೇಳಬೇಕೆಂದು ನಾನು ಬೇಡಿಕೊಳ್ಳುವೆ. ”

“ ಗಿರಿಧಾರಿಯವರೇ, ನಾಳೆ ತಾವು ಇಲ್ಲಿಗೆ ರಾಮ ಜನನ ಕಾಲಕ್ಕೆ ಬರಬೇಕು. ಇಲ್ಲಿಯ ಕಾರ್ಯಕ್ರಮ ತೀರಿಸಿಕೊಂಡು ಮುಂದೆ ತಾವು ರಾಮಮಂದಿರಕ್ಕೆ ಹೋಗಬಹುದು. ರಾಮನವಮಿ ಮಾಡುವದು ಇದು ನನ್ನ ಜನ್ಮದಲ್ಲಿ ಮೊದಲನೆಯದು. ಶ್ರೀರಾಮಚಂದ್ರನ ಮನಸ್ಸಿಗೆ ಬಂದುದರಿಂದ ನನಗೆ ಮಾಡಲು ಪ್ರೇರಣೆಯಾಯಿತು. ಅವರಾದರೂ ಮಾಡಲು ಸಮ್ಮತಿಸಿರುವರು ” ಎಂದು ಗಿರಿಧಾರಿಗೆ ಪ್ರೇಮನಂದಿನಿ ಹೇಳಿದಳು.

“ ಅವಶ್ಯವಾಗಿ ಬರುವೆನು. ಗುರುಗಳ ಮಾತನ್ನು ಮೀರಲಿಕ್ಕಾಗುವದಿಲ್ಲ. ”

ಗಿರಿಧಾರಿಯ ಮಾತನ್ನು ಕೇಳಿ ಮಧುಮತಿಯು ಆಶ್ಚರ್ಯಚಕಿತಳಾಗಿ,

“ ಏನಂದಿರಿ ಸಮಾಜಸೇವಕರೇ ? ಗುರುಗಳೆಂದು ಅನ್ನಲಿಲ್ಲವೇ ತಾವು ? ”

ಎಂದು ಕೇಳಿದಳು.

“ ಹೌದು. ಗುರುಗಳೆಂದು ನುಡಿದೆ. ”

“ ಅವರ್ಹೇಗೆ ಗುರುಗಳಾದರು ನಿಮಗೆ ? ”

“ ನೆಟ್ಟಗೆ. ”

“ ನಿಮಗೇನು ಕಲಿಸಿದರು ? ”

“ ಜೀವದ ಇಂಗಿತವನ್ನು. ”

“ ಎಂದು ಕಲಿಸಿದರು ? ”

“ ಅವರನ್ನು ನೋಡಿದ ದಿನವೇ ನನಗೆ ಅವರು ತಮ್ಮ ಮುಖದ ಭಾವದಿಂದ, ಕಣ್ಣಿನಲ್ಲಿಯ ಕಾಂತಿಯಿಂದ, ನನಗೆ ಜೀವನದ ಶಿಕ್ಷಣವನ್ನು ಕೊಟ್ಟರು. ”

“ ಒಮ್ಮೆ ತಾವು ಓರ್ವ ರೂಪಜೀವಿ ತಮ್ಮ ಗುರುವಾದಳೆಂದು ನಮ್ಮೆಲ್ಲರಿಗೆ ಹೇಳಿದ್ದಿರಿ. ಈ ಈರ್ವ ಗುರುಗಳಲ್ಲಿ ನಮ್ಮ ಅಮ್ಮನು ಹೆಚ್ಚೋ ಅವಳು ಹೆಚ್ಚೋ ” ಎಂದು ಮಧುಮತಿ ಕೇಳಿದಳು.

“ ಉಭಯರೂ ಸರಿಸಮಾನರು. ಇಬ್ಬರಲ್ಲಿಯೂ ನನಗೇನೂ ತಾರ ತಮ್ಯ ಭಾವ ತೋರುವದಿಲ್ಲ. ”

“ ತಾವು ಅಸ್ಪಷ್ಟ ಉತ್ತರವನ್ನು ಕೊಟ್ಟಿರಿ ” ಎಂದು ನುಡಿದಳು ಮಧುಮತಿ.

“ ನಾನು ಕೇಳಿದ್ದಕ್ಕೆ ತಾವು ಉತ್ತರವನ್ನೇ ಕೊಡಲಿಲ್ಲವಲ್ಲ ” ಎಂದು ಗಿರಿಧಾರಿಯು ಪ್ರೇಮನಂದಿನಿಗೆ ಕೇಳಿದನು.

“ ನಾನು ಹಾಡಬಲ್ಲೆನು. ಮನೆಯಲ್ಲಿ ಪ್ರಭಾತ ಗೀತೆಗಳನ್ನು ಹಾಡು ವವಳು ನಾನು. ಮಧುಮತಿಯು ಹೇಳುವಂತೆ ನಾನು ಸಂಗೀತಗಾರಳಲ್ಲ. ನಾನು ಜನಗಳ ಎದುರಿಗೆ ಎಂದೂ ಹಾಡಿದವಳಲ್ಲ ” ಎಂದು ಪ್ರೇಮನಂದಿ ನಿಯು ನುಡಿದಳು.

“ ಜನಗಳ ಮುಂದೆ ಹಾಡಲು ನಿಮ್ಮನ್ನು ಕರೆಯುವದಿಲ್ಲ. ದೇವರೆ ದುರಿಗೆ ಹಾಡಲು ನಿಮ್ಮನ್ನು ಕರೆಯುವೆನು. ”

“ ಅವಳನ್ನು ನಾನು ಕರೆದುಕೊಂಡು ಬರುವೆ. ಮಧುಮತಿಯು ನಮ್ಮ ಜತೆಯಲ್ಲಿ ಬರಬೇಕು ” ಎಂದು ಪದ್ಮನಾಭನು ಹೇಳಿದನು.

ಪದ್ಮನಾಭನು ಅಭಿವಚನ ಕೊಟ್ಟದ್ದು ಕಂಡು,

“ ರಾಮನಿಷ್ಠೆ. ನನ್ನದು ಇನ್ನೊಂದು ಸಂಶಯ. ನಾನು ವಿಧವೆ. ಜನನ ಕಾಲಕ್ಕೆ ವಿಧವೆ ಹಾಡುವದನ್ನು ಕರ್ಮಠರು ಮೆಚ್ಚರು. ಮೇಲಾಗಿ ನನ್ನನ್ನು ನೋಡಿ ಹೀಗಳೆಯಬಹುದು; ನನ್ನನ್ನು ಹಳಿದರೂ ಚಿಂತೆಯಿಲ್ಲ. ನಾನು ಹಾಡಿ ಕರ್ಮಠರ ಜನರ ಮನಸ್ಸನ್ನು ನೋಯಿಸುವದು ನನಗೆ ಬೇಕಾಗಿರುವದಿಲ್ಲ ” ಎಂದು ಪ್ರೇಮನಂದಿನಿಯು ದೀನವದನದಿಂದ ಗಿರಿ-ಧಾರಿಗೆ ಹೇಳಿದಳು.

“ ಕರ್ಮಠ ಜನರಿಗೆ ದಯೆ ಮಾಯೆ ಇರುವವೋ ಇಲ್ಲೋ ನನಗೆ ಗೊತ್ತಿಲ್ಲ. ಅವರು ಕಟುಕರಂತಿರುವರೆಂದು ಮಾತ್ರ ನಾನು ಖಂಡಿತ ಹೇಳಬಲ್ಲೆ. ನಮ್ಮ ಮನೆಯಲ್ಲಿ ಕರ್ಮಠತನದ ಮೂರ್ತಿಮಂತರಾಗಿಯೇ ನನ್ನ ತಂದೆಯವರಿರುವರು. ಅವರ ಬಾಹ್ಯಕ್ಕೂ ಅಂತರಂಗಕ್ಕೂ ಬಹಳ ವ್ಯತ್ಯಾಸ ” ಎಂದು ಗಿರಿಧಾರಿಯು ನುಡಿದನು.

“ ಅವಶ್ಯ, ವಿಧವೆಯ ಭಕ್ತಿಯನ್ನು ರಾಮನು ಸ್ವೀಕರಿಸುವದಿಲ್ಲವೋ? ”

" ರಾಮನು ಸ್ವೀಕರಿಸುವನು. ಆದರೆ ಜನರ ಮನಸ್ಸು ನೋಯಿಸ ಬಾರದು. ನಾವು ರಾಮಜನನಕ್ಕೆ ಹೋಗಿ ಬರೋಣ. ಆದರೆ ಹಾಡುವದಕ್ಕೆ ನನ್ನ ಮನಸ್ಸು ಏಕೋ ಒಪ್ಪಲೊಲ್ಲದು. ನನ್ನ ಮನಸ್ಸು ಒಪ್ಪದಿದ್ದರೂ ನನ್ನ ಪತಿಯಿಂದ ಇವರು ನಾನು ಹಾಡುವೆನೆಂದು ಒಪ್ಪಿಕೊಂಡಿರುವರು. ಅವರ ಋಣದಲ್ಲಿ ಇದ್ದವಳು ನಾನು. ಅವರ ಮಾತನ್ನು ನಾನು ಪಾಲಿಸಲೇ ಬೇಕಾಗುವದು. ರಾಮವದೇ ಏನಾದರೂ ಸಂಕೇತವಿರಬಹುದು. ಅದು ನಮಗೆ ಗೊತ್ತಾಗುವ ಬಗೆ ಹೇಗೆ " ಎಂದು ಪ್ರೇಮನಂದಿನಿಯು ಮಾತನಾಡಿದಳು.

" ಕುರುಡನು ಒಂದು ಕಣ್ಣು ಕೇಳಿದರೆ ದೇವರು ಎರಡು ಕಣ್ಣುಗಳನ್ನು ಕೊಟ್ಟಂತೆ. ರಾಮಮಂದಿರದಲ್ಲಿಯ ಉತ್ಸವವನ್ನು ತೀರಿಸಿಕೊಂಡು ನಾನು ನಿಮ್ಮ ಮನೆಗೆ ಬರುವೆನು. ಅಪ್ಪು ನೀವು ಅನುಗ್ರಹಿಸಬೇಕು. ಎಲ್ಲರೂ ಕೂಡಿಕೊಂಡು ನಿಮ್ಮ ಮನೆಗೆ ಬರೋಣವಂತೆ. ನಾಳೆ ನಿಮ್ಮನ್ನು ಕರೆಯಲು ಒಬ್ಬರನ್ನು ಕಳುಹಿಸಿ ಕೊಡುವೆ. ಮಧುಮತಿ ನಾಳೆ ನೀನು ಆ ಕಾಲಕ್ಕೆ ಇಲ್ಲಿದ್ದು ಕರೆದುಕೊಂಡು ಬಂದರೆ ನೆಟ್ಟಗೆ " ಎಂದು ಗಿರಿಧಾರಿಯು ನುಡಿದನು.

" ನಾನು ಹೋಗಿ ಬರುವೆನು " ಎಂದು ಅವರಿಗೆ ಹೇಳಿ ಗಿರಿಧಾರಿಯು ಹೊರಟನು.

ಅವನು ಹೋಗುತ್ತಿರುವದನ್ನು ಕಂಡು ಮಧುಮತಿಯು,

" ನೀನು ವೃತಧಾರಿಯಾಗಲಿಲ್ಲ; ಗಿರಿಧಾರಿಯಾದಿ " ಎಂದು ನಗುತ್ತ ನುಡಿದಳು.

ಅವಳ ಮಾತನ್ನು ಕೇಳಿ ಗಿರಿಧಾರಿಯು ನಗುತ್ತ ಹೊರಟುಹೋದನು

" ದೇವರ ಲೀಲೆ ಬಹು ವಿಚಿತ್ರ ! ಆತನ ಸಂಕಲ್ಪವೂ ವಿಚಿತ್ರ. "

ಎಂದು ಪ್ರೇಮನಂದಿನಿಯು ಮಧುಮತಿಗೆ ಹೇಳಿದಳು.

" ಮಗು, ನಿನ್ನ ದುನದಲ್ಲಿ ನಾನು ಸಂಗೀತ ಕಚೇರಿಯನ್ನು ನಾಳೆ ಮಾಡಬೇಕೆಂದಿತ್ತು. ಗಿರಿಧಾರಿಯು ನಿನ್ನನ್ನು ಕರೆಯಲು ಹುಡುಕುತ್ತ ಬಂದನು. ಕೊನೆಗೆ ನಿನ್ನ ಮನಸ್ಸಿನಂತಾಯಿತು " ಎಂದು ಪ್ರೇಮನಂದಿನಿಯು ನಗುತ್ತ ಮಧುಮತಿಗೆ ಅಂದಳು.

"ಯಾವಾಗಲೂ ಆತನು ಕಪಟ ನಾಟಕ ಸೂತ್ರಧಾರ" ಎಂದು ಪ್ರೇಮನಂದಿನಿಯು ಮೊಗವನ್ನು ನೋಡುತ್ತ ನುಡಿದಳು.

ಹೌದು ಆತನು ಸೂತ್ರಧಾರ. ಆತನ ಕೈಯಲ್ಲಿಯ ಗೊಂಬೆಗಳು ನಾವು. ಅವನು ಕುಣಿಸಿದಂತೆ ಕುಣಿಯುವೆವು" ಪ್ರೇಮನಂದಿನಿಯು ಅಂದಳು.



ಇಂದು ರಾಮನವಮಿ. ರವಿಯು ಕವಿಯುದೆ ತನ್ನ ಕಿರಣಗಳಿಂದ ದಿನವನ್ನು ಉತ್ಸಾಹಭರಿತ ಮಾಡುತ್ತ ಸಾಗಿದ್ದನು. ರಾಮನ ಜನನ ದಿನ ವೆಂದು ರವಿಯಾದರೂ ಆನಂದದಿಂದ ತುಂಬಿ ತುಳುಕುತ್ತಿದ್ದಂತೆ ಕಾಣು ತ್ತಿತ್ತು. ಪ್ರೇಮನಂದಿನಿಯು ತಳಿರುತೋರಣಗಳಿಂದ ತನ್ನ ಮನೆಯ ತಲೆಬಾಗಿಲಗಳನ್ನು ಅಲಂಕರಿಸಿದ್ದಳು. ನಡುಮನೆಯಲ್ಲಿ ಒಂದು ಎತ್ತರ ವಾದ ಪೀಠದ ಮೇಲೆ ಮಂಟಪದಲ್ಲಿ ಶ್ರೀರಾಮಚಂದ್ರನ ಭಾವಚಿತ್ರವನ್ನಿಟ್ಟು ಅದಕ್ಕೆ ನಾನಾತರದ ಬಣ್ಣ ಬಣ್ಣದ ಹೂಗಳಿಂದ ಹೆಣೆದ ಮಾಲೆಗಳನ್ನು ಹಾಕಿದ್ದಳು. ಮಂಟಪದ ಎದುರಿಗೆ ಆಕರ್ಷಕವಾದ ರಂಗವಲ್ಲಿಗಳನ್ನು ಹಾಕಿದ್ದಳು. ಅವಳು ಹಾಕಿದ ರಂಗವಲ್ಲಿಗಳೂ ಹೆಣೆದ ಹೂವಿನ ಮಾಲೆ ಗಳೂ ಅವಳ ಹೃದಯದಿಂದ ಹರಿಯುತ್ತಿದ್ದ ಭಕ್ತಿಭಾವವನ್ನು ಸ್ಫುಟಿಕ ವಾಗಿ ತೋರಿಸುತ್ತಿದ್ದವು. ಫಲಗಳನ್ನು ನೈವೇದ್ಯಕ್ಕೆಂದು ಒಂದು ತಟ್ಟೆ ಯಲ್ಲಿಟ್ಟಿದ್ದಳು. ಬಂದವರಿಗೆ ಕುಳಿತುಕೊಳ್ಳಲು ಪದ್ಮನಾಭನ ಕೋಣೆ ಯಲ್ಲಿ ವ್ಯವಸ್ಥೆಯನ್ನು ಮಾಡಿದಳು.

ಶುಭ್ರವಾದ ಪತ್ತಲವನ್ನುಟ್ಟು ಶುಭ್ರ ಕುಪ್ಪಸವನ್ನು ತೊಟ್ಟಿದ್ದಳು. ತಲೆಗೂದಲನ್ನು ಬಾಚಿಕೊಂಡಿದ್ದಳು; ಆದರೆ ಹೂಗಳನ್ನು ಮುಡಿದಿ

ದ್ದಿಲ್ಲ. ಕೈಯಲ್ಲಿ ಬಳೆಗಳಿಲ್ಲ; ಕೊರಳಲ್ಲಿ ತುಳಸಿಯ ಮಾಲೆ. ಈ ವೇಷ ಭೂಷಣದಿಂದ ಅವಳು ಜೋಗಿನಿಯಂತೆ ಕಾಣುತ್ತಿದ್ದಳು. ಅವಳ ಈ ರೂಪ ವನ್ನು ಕಂಡು ಪದ್ಮನಾಭನು ಆಶ್ಚರ್ಯಪಟ್ಟನು. ಲಗ್ನ ಮಾಡಿಕೊಂಡು ದಾಂಪತ್ಯ ಜೀವನ ಸಾಗಿಸಬೇಕೆನ್ನುವವಳು ಈ ಜೋಗಿನಿಯಂತೆ ವೇಷ ಧರಿಸಿದ್ದನ್ನು ಕಂಡು ಆತ ತನ್ನ ಕಣ್ಣುಗಳನ್ನೇ ನಂಬಲಾರದಾದ.

“ ಪ್ರೇಮನಂದಿನಿ, ಇದೇನು ಇಂದು ನಿನ್ನ ಇಂತಹ ವೇಷ ? ”

“ ತಾವು ಕೊಟ್ಟ ಆಶ್ವಾಸನವನ್ನು ಕಂಡು ದಾಂಪತ್ಯ ಜೀವನವನ್ನು ಸಾಗಿಸಬೇಕೆಂಬ ಆಶೆಯನ್ನು ಸುಟ್ಟು ನಾಶಮಾಡಿದೆ. ಶ್ರೀರಾಮಚಂದ್ರನೇ ನನಗೆ ಹಾಗೆ ಪ್ರೇರಣೆ ಮಾಡಿದ್ದು. ಇಂದು ನಾನು ರಾಮಮಂದಿರಕ್ಕೆ ತಮ್ಮ ಆಜ್ಞಾನುಸಾರವಾಗಿ ಸಂಗೀತ ಕಚೇರಿಯನ್ನು ನಡೆಸಲು ಹೋಗ ತಕ್ಕವಳು. ವಿಧವೆ ವಿಧವೆಯ ವೇಷದಲ್ಲಿಯೇ ಇರತಕ್ಕದ್ದು. ನನ್ನ ವೈಧ ವ್ಯವನ್ನು ಮುಚ್ಚಿಕೊಂಡು ದೇಹವನ್ನು ಸಿಂಗರಿಸಿಕೊಂಡು ಹೋಗುವದು ಉಚಿತವೇ ? ರಾಮಮಂದಿರಕ್ಕೆ ನನ್ನ ರೂಪದರ್ಶನ ಮಾಡಲು ಹೋಗುವ ದಿಲ್ಲ; ಅಲ್ಲಿ ನನ್ನ ಆಕರ್ಷಣ ಶಕ್ತಿಯನ್ನು ತೋರಿಸಲು ಹೋಗುವದಿಲ್ಲ, ನಾನು ಹೋಗುವದು ರಾಮನ ಸೇವೆಗಾಗಿ. ಅಭಿರಾಮನ ಜನನ ನೋಡು ವದಕ್ಕಾಗಿ ” ಎಂದು ಪ್ರೇಮನಂದಿನಿಯು ನುಡಿದಳು.

“ ಪ್ರೇಮನಂದಿನೀ ಎಷ್ಟೊಂದು ಪರಿವರ್ತನೆ ! ”

“ ಪರಿವರ್ತನೆಯೇನೂ ಅಲ್ಲ. ಜೀವನದಲ್ಲಿ ಹೇಸಿಗೆಯನ್ನು ಹುಟ್ಟಿ ಸಿದ ರಾಮ. ಈ ಹೇಸಿ ಮನಸ್ಸು ನನ್ನನ್ನು ಘಾಸಿಮಾಡುವದನ್ನು ತಪ್ಪಿಸ ಬೇಕೆಂದು ಮಾಡಿರುವೆ. ಶ್ರೀರಾಮನ ಪ್ರೇರಣೆ; ಆತನ ಅನುಗ್ರಹ ” ಎಂದು ಪ್ರೇಮನಂದಿನಿಯು ಅಂದಳು.

“ ಕಾಣದವನಿಗೆ ಕೈಮುಗಿದು ದೇವರೆಂದು ಕರೆಯುವದರಲ್ಲಿಯೇ ನಮ್ಮ ಆಯುಷ್ಯ ಹೋಯಿತು ” ಎಂದು ಪದ್ಮನಾಭನು ನಕ್ಕನು.

“ ನಿಮ್ಮ ಕರುಣೆಯಲ್ಲಿಯೇ ನಾನು ದೇವರನ್ನು ಕಂಡಿರುವೆನು. ನಾನು ಹೀಗೆ ನಡೆಯಲು ಹಚ್ಚಿರುವದು ಒಂದು ಅವ್ಯಕ್ತ ಶಕ್ತಿಯಲ್ಲವೇ? ಆ ಅವ್ಯಕ್ತ ಶಕ್ತಿಯೇ ದೇವರು ” ಎಂದು ಪ್ರೇಮನಂದಿನಿಯು ಶ್ರೀರಾಮ ಚಂದ್ರನ ಪಟಕ್ಕೆ ನಮಸ್ಕರಿಸುತ್ತ ಹೇಳಿದಳು.

"ನೀನು ಹೇಳುವದು ನನ್ನ ಮನಸ್ಸಿಗೆ ಸರಿಯೆನಿಸಲೊಲ್ಲದು" ಎಂದು ನುಡಿದು ಪದ್ಮನಾಭನು ತನ್ನ ಕೋಣೆಗೆ ಹೋದನು.

ಮಧುಮತಿಯು ಹೊಸ ಸೀರೆ ಕುಪ್ಪಸಗಳನ್ನು ತೊಟ್ಟುಕೊಂಡು ಆಭರಣಗಳನ್ನು ಧರಿಸಿದ್ದಳು. ನಿತಂಬದ ವರೆಗೆ ಅಲೆಯುವ ನಾಗವೇಣಿಯಲ್ಲಿ ಹೂವಿನ ಮಾಲೆಯನ್ನು ಮುಡಿದಿದ್ದಳು, ಮಧುಮತಿ ನೋಡುವವರಿಗೆ ಮನಮೋಹಿನಿ.

ಮೇಧಾವಿನಿಯು ಅಂದವಾದ ಸೀರೆಯನ್ನುಟ್ಟು ದೇಹಕ್ಕೆ ಒಪ್ಪುವ ಬಣ್ಣದ ಕುಪ್ಪಸವನ್ನು ತೊಟ್ಟಿದ್ದಳು. ಹೆರಳಿನಲ್ಲಿ ಒಂದು ಅರಳಿದ ಗುಲಾಬಿ ಹೂ. ವೇಷಭೂಷಣ ಸಾಮಾನ್ಯವಾಗಿದ್ದರೂ ಅವಳ ಸೌಂದರ್ಯಕ್ಕೆ ಹೆಚ್ಚಿನ ಸೊಬಗನ್ನು ನೀಡುತ್ತಿತ್ತು.

ಪ್ರೇಮನಂದಿನಿಯು ಅವರನ್ನು ಬರಮಾಡಿಕೊಂಡಳು. ಅವರನ್ನು ವ್ಯಾಸಪೀಠದ ಮೇಲೆ ಅಲಂಕರಿಸಿದ್ದ ಶ್ರೀರಾಮಚಂದ್ರನ ಭಾವಪಟದ ಎದುರಿಗೆ ಕುಳ್ಳಿರಿಸಿದಳು. ಧೂಪವನ್ನು ಹಾಕಿದಳು. ದೀಪವನ್ನು ಹಚ್ಚಿದಳು.

ಪ್ರೇಮನಂದಿನಿಯ ವೇಷವನ್ನು ಕಂಡು;

"ಅಮ್ಮಾ, ಇಂದು ಏನಿದು ನಿನ್ನ ವೇಷ?" ಎಂದು ಮಧುಮತಿ ನುಡಿದಳು.

"ರಾಮನ ಇಚ್ಛೆಯಂತೆ ವೇಷ ಮಾಡಿರುವೆನು. ಇದರಲ್ಲಿ ಮತ್ತೇನೂ ಹೆಚ್ಚಿಲ್ಲ. ಈ ವೇಷವನ್ನು ಕಂಡು ನಿನಗೆ ಸೋಜಿಗವೆನಿಸಬಹುದು."

"ಅಮ್ಮಾ, ನಿನ್ನನ್ನು ತಿಳಿಯುವದು ನನಗೆ ಅಸಾಧ್ಯ."

ಪದ್ಮನಾಭನು ಮತ್ತೆ ತಿರುಗಿ ಕೋಣೆಯಿಂದ ನಡುಮನೆಗೆ ಬಂದು ಅವರೆಲ್ಲರನ್ನು ಕಣ್ಣುತುಂಬಾ ನೋಡುತ್ತ ಪ್ರೇಮನಂದಿನಿಗೆ,

"ತೊಟ್ಟಿಲವನ್ನು ಕಟ್ಟಿರುವಿಯಾ ? ತೊಟ್ಟಿಲದಲ್ಲಿ ಹಾಕಲು ರಾಮನ ಮೂರ್ತಿಯನ್ನು ತಂದಿರುವಿಯಾ ?"

ಎಂದು ಕೇಳಿದನು.

"ಅಮ್ಮನು ತೊಟ್ಟಿಲವನ್ನು ಕಟ್ಟಿರುವಳು. ರಾಮನ ಮೂರ್ತಿಯನ್ನು ಸಿಂಗರಿಸಿ ಇಟ್ಟಿರುವಳು. ಜನನ ಕಾಲವಾದ ಕೂಡಲೇ ತೊಟ್ಟಿಲದಲ್ಲಿ ಹಾಕಿ ಹೆಸರಿಡುವದೊಂದೇ ಬಾಕಿ." ಎಂದು ಮಧುಮತಿಯು

ಪದ್ಮನಾಭನಿಗೆ ಹೇಳಿದಳು.

" ಮಗು, ನಿನ್ನ ಅಣ್ಣ ವಿದ್ಯಾಚರಣನನ್ನು ಕರೆದುಕೊಂಡೇಕೆ ಬರಲಿಲ್ಲ ? "

" ಅವನಿಗೆ ಆಸ್ಪತ್ರೆಯಲ್ಲಿ ಬಹಳೇ ಅಗತ್ಯದ ಕೆಲಸವಿತ್ತು. ಜನನ ಕಾಲಕ್ಕೆ ಕಾರು ತೆಗೆದುಕೊಂಡು ಬರುವೆನೆಂದು ಹೇಳಿರುವನು. ಆತನು ತಪ್ಪದೆ ಬರಬಹುದು. "

ಸಿಂಗರಿಸಿಕೊಂಡು ನಗುತ್ತ ತನ್ನ ಬದಿಯಲ್ಲಿ ಕುಳಿತ ಮಧುಮತಿಯ ಬೆನ್ನಮೇಲೆ ಮಮತೆಯಿಂದ ಪ್ರೇಮನಂದಿನಿಯು ಕೈಯಾಡಿಸುತ್ತ "ಮಗು, ನೀನು ಜಾಣ ಹುಡುಗಿ" ಎಂದು ನುಡಿದದ್ದು ಕೇಳಿ ಪದ್ಮನಾಭನು,

" ಮಧುಮತಿ, ನೀನು ಪ್ರೇಮನಂದಿನಿಯ ಮಗಳಾಗಿದ್ದರೆ ಚೆನ್ನಾಗಿತ್ತು. " ಎಂದು ನುಡಿದನು.

" ಆಗಿದ್ದರೇಕೆ ? ಆಗಿರುವೆನೆಂದು ತಿಳಿದುಕೊಂಡರೆ ಏನು ತಪ್ಪಾಗುವದು " ಎಂದು ಮಧುಮತಿಯು ಉತ್ತರ ಕೊಟ್ಟಳು.

" ಏನೂ ತಪ್ಪಾಗುವದಿಲ್ಲ " ಪದ್ಮನಾಭ ನುಡಿದನು.

" ತಪ್ಪಾಗದಿದ್ದರೆ ತಿಳಿದುಕೊಳ್ಳುವದು ಒಳಿತಲ್ಲವೇ ? " ಮಧುಮತಿ ಅಂದಳು.

" ನಿಮ್ಮೀರ್ವರಲ್ಲಿಯ ತದ್ರೂಪ ಹೋಲಿಕೆಯನ್ನು ಕಂಡು ನುಡಿದೆ; ಮತ್ತೇನೂ ಇಲ್ಲ. ಇದೊಂದು ವಿಜ್ಞಾನಿಗಳಿಗೆ ಪರಮಾಶ್ಚರ್ಯದ ಸಂಗತಿ" ಅಂದನು ಪದ್ಮನಾಭ.

ಪ್ರೇಮನಂದಿನಿಯು ಅವರ ಮಾತುಗಳನ್ನು ಕಿವಿಯಲ್ಲಿ ಹಾಕಿಕೊ-ಳ್ಳಲಿಲ್ಲ.

" ಮಗು, ಅಲ್ಲಿದ್ದ ತಂಬೂರಿಯನ್ನು ತೆಗೆದುಕೊಂಡು ಬಾ "ಎಂದು ನುಡಿದಳು.

ಮಧುಮತಿಯು ತಂಬೂರಿಯನ್ನು ತೆಗೆದುಕೊಂಡು ಪ್ರೇಮನಂದಿನಿಗೆ ಕೊಟ್ಟು,

" ಅಮ್ಮಾ, ತಂಬೂರಿಯ ನಾದವೇ ನಮ್ಮ ಜೀವನದ ನಾದವಾಗಲಿ " ಎಂದು ಮುಗುಳುನಗೆಯಿಂದ ನಗುತ್ತ ಮಧುಮತಿಯು ನುಡಿದಳು.

“ ಇಂದು ತಂಬೂರಿಯು ಅಪಸ್ವರ ನುಡಿಯದಿದ್ದರೆ ಸಾಕು. ರಾಮನ ಅನುಗ್ರಹವಿರುವದೆಂದು ನಾನು ಅರಿತುಕೊಳ್ಳುವೆನು ” ಎಂದು ಅಂದಳು ಪ್ರೇಮನಂದಿನಿ.

ತಂಬೂರಿಯನ್ನು ತೆಗೆದುಕೊಂಡು ಶ್ರೀರಾಮಚಂದ್ರನ ಭಾವಪಟದ ಎದುರಿಗೆ ಕುಳಿತು ಹಾಡುತ್ತಿದ್ದಳು. ಅವಳ ಸಂಗೀತ ಕೇಳಿ ಎಲ್ಲರೂ ಮುಗ್ಧರಾಗಿ ಕುಳಿತರು. ಆ ಗಾನದಲ್ಲಿ ಹರಿಯುತ್ತಿರುವ ಭಕ್ತಿರಸವನ್ನು ಕಂಡು ಪದ್ಮನಾಭನಿಗೆ ತಾನು ಎಲ್ಲಿರುವೆನೆಂಬುವದು ತಿಳಿಯದಾಯಿತು. ಇಂದು ಪಟ್ಟಂಥ ಆನಂದವನ್ನು ಜೀವನದಲ್ಲಿ ಒಂದು ನಿಮಿಷವಾದರೂ ಪಡೆಯಲಿಲ್ಲವೆಂದು ಆತನಿಗೆ ಅನಿಸಹತ್ತಿತು. ಈ ಆನಂದವೇ ದೇವರೋ ಎಂಬ ಸಂಶಯು ಮನದಲ್ಲಿ ಮೂಡಿತು.

ಗಿರಿಧಾರಿಯು ವಿದ್ಯಾಚರಣನನ್ನು ಕರೆದುಕೊಂಡು ಕಾರಿನಲ್ಲಿಬಂದನು. ಒಳಗೆ ಬರುತ್ತಲೇ ಪ್ರೇಮನಂದಿನಿಯ ಇಂಪಾದ ಗಾನದನಿಯನ್ನು ಕೇಳಿ ಅವರಿಬ್ಬರೂ ಮೆಲ್ಲಗೆ ಬಂದು ಪದ್ಮನಾಭನ ಕೋಣೆಯಲ್ಲಿ ಕುಳಿತುಕೊಂಡರು. ಒಂದು ನಿಮಿಷದ ಮೇಲೆ ವಿದ್ಯಾಚರಣನು ಅಲ್ಲಿಂದೆದ್ದು ಒಳಗೆ ಹೋಗಿ ಶ್ರೀರಾಮಚಂದ್ರನ ಭಾವಪಟಕ್ಕೂ ಪ್ರೇಮನಂದಿನಿಗೂ ನಮಸ್ಕರಿಸಿದನು. ಅವನು ಹೊರಗೆ ಹೋಗುವದನ್ನು ಕಂಡು ಪ್ರೇಮನಂದಿನಿಯು ಹಾಡನ್ನು ನಿಲ್ಲಿಸಿದಳು.

“ ಮಗು ಹೋಗಬೇಡ; ಇಲ್ಲಿ ಕುಳಿತುಕೋ ” ಎಂದು ಹೇಳಿದಳು.

ವಿದ್ಯಾಚರಣನು ಅವಳ ಹತ್ತಿರ ಕುಳಿತುಕೊಳ್ಳಲು ನಾಚಿದನು.

“ ಮಗು, ನಿನ್ನ ತಾಯಿ ವೇದವತಿ ನಾನು. ನನ್ನ ಹತ್ತಿರ ಕುಳಿತುಕೊಳ್ಳಲು ನಿನಗೆ , ಚಿಕೆಯೋ ” ಎಂದು ವಾತ್ಸಲ್ಯಭಾವದಿಂದ ನುಡಿದಳು. ನಿರುಪಾಯನಾಗಿ ಅವಳ ಹತ್ತಿರ ಕುಳಿತುಕೊಂಡನು. ಪ್ರೇಮನಂದಿನಿಯು ತಂಬೂರಿಯನ್ನು ತೆಗೆದಿಡಲು ಮಧುಮತಿಯ ಕೈಯಲ್ಲಿ ಕೊಟ್ಟು ಅಲ್ಲಿಂದ ಎದ್ದಳು. ಸಿಂಗರಿಸಿದ ಗೊಂಬೆಯನ್ನು ತೊಟ್ಟಿಲದಲ್ಲಿ ಮಲಗಿಸಿ,

“ ಮೇಧಾವಿನಿ ಇತ್ತ ಬಾ ” ಎಂದು ಕರೆದಳು.

ಮೇಧಾವಿನಿಯು ತೊಟ್ಟಿಲದ ಬದಿಯಲ್ಲಿ ನಿಂತಿದ್ದ ಪ್ರೇಮನಂದಿನಿಯ ಬಳಿಯಲ್ಲಿ ಹೋಗಿ ನಿಂತಳು. ಒಮ್ಮೆ ಪ್ರೇಮನಂದಿನಿಯನ್ನೂ ಮತ್ತೊಮ್ಮೆ

ವಿದ್ಯಾಚರಣನನ್ನೂ ಪಿಳಿಪಿಳಿ ನೋಡಹತ್ತಿದಳು. ಇದನ್ನು ಕಂಡು ಮಧುಮತಿಯು ಮನದಲ್ಲಿ ನಗುತ್ತ ಕುಳಿತಳು.

ಪ್ರೇಮನಂದಿನಿಯು ವಿದ್ಯಾಚರಣನನ್ನು ಕರೆದು ಆತನ ಕೈಯಲ್ಲಿ ಮೇಧಾವಿನಿಯ ಕೈಯನ್ನು ಕೊಟ್ಟು " ಇನ್ನು ನೀವು ಕೂಸಿಗೆ ಹೆಸರನ್ನಿಡಿರಿ " ಎಂದು ನುಡಿದಳು.

ಇದನ್ನು ಕಂಡು ಮಧುಮತಿಯು,

" ನಮ್ಮ ಅಮ್ಮನು ಮರಣದ ಕಾಲಕ್ಕೆ ಮಾಡಿದಂತೆ ಮಾಡಿದೆಯಲ್ಲ. " ಎಂದು ಆನಂದದಿಂದ ನುಡಿದಳು.

" ಮೇಧಾವಿನಿ ವಿದ್ಯಾಚರಣರು ಅದನ್ನು ಮರೆತಂತೆ ತೋರುವದು. ಈ ಶುಭಪ್ರಸಂಗದಲ್ಲಿ ಹೆಸರಿಡಲು ಸತಿಪತಿಯರೇ ಬೇಕೆಂದು ನಾನು ಹೀಗೆ ಮಾಡಿದ್ದು. ರಾಮನನ್ನು ತೊಟ್ಟಿಲದಲ್ಲಿ ಹಾಕಿ ಮಗುವನ್ನು ಮುಂದ್ಮಾಡಿ ತೊಟ್ಟಿಲವನ್ನು ಅವರಿಬ್ಬರೂ ತೂಗುವದು ಶುಭವಲ್ಲವೇ ? ತಾಯಿ, ವೇದಪತಿಯ ಸೂಚನೆಯನ್ನು ನಾನು ನೆನಪು ಮಾಡಿಕೊಡುತ್ತಿದ್ದೇನೆ " ಎಂದು ಪ್ರೇಮಾನಂದಿನಿಯು ನುಡಿದಳು.

ಪ್ರೇಮನಂದಿನಿಯ ಎದುರಿಗೆ ಅವರೀರ್ವರೂ ತಲೆ ಬಗ್ಗಿಸಿಕೊಂಡು ನಿಂತರು.

" ಅವರು ನೆನಪಿದ್ದರೂ ಹೇಳಲಾರರು. ಒಬ್ಬರೊಬ್ಬರನ್ನು ನೋಡಿಯೂ ನೋಡದಂತೆ ಕುಳಿತುಕೊಳ್ಳುವರು " ಎಂದು ಮಧುಮತಿಯು ನುಡಿದಳು.

" ಹೇಳದಿರುವದೇ ಜೀವನದ ಗುಟ್ಟು " ಅಂದಳು ಪ್ರೇಮನಂದಿನಿ.

" ಮೌನದಲ್ಲಿಯೇ ಪ್ರೇಮದ ಕರೆಯಿರುವದೋ ? " ಕೇಳಿದಳು ಮಧುಮತಿ.

ಹೊರಗೆ ಕೋಣೆಯಲ್ಲಿ ಕುಳಿತಿದ್ದ ಗಿರಿಧಾರಿಯನ್ನೂ ಪದ್ಮನಾಭನನ್ನೂ ಹೆಸರಿಡುವ ಮೋಜನ್ನು ನೋಡುವದಕ್ಕಾಗಿ ಮಧುಮತಿಯು ಕರೆದುಕೊಂಡು ಬಂದಳು.

ಮೇಧಾವಿನಿ–ವಿದ್ಯಾಚರಣರು ತೊಟ್ಟಿಲದ ಎದುರುಬದಿರು ನಿಂತಿ

ದ್ದರು. ಏನೆಂದು ಹೆಸರಿಡಬೇಕೆಂದು ಮೇಧಾವಿನಿ ಪ್ರೇಮನಂದಿನಿಗೆ ಕೇಳಿದಳು.

" ಕೌಸಲ್ಯಾತನಯ ಶ್ರೀರಾಮಚಂದ್ರ, ಅಹಲ್ಯೋದ್ಧಾರಕ ರಾಮ ಚಂದ್ರ, ದೀನಬಂಧು ಶ್ರೀರಾಮಚಂದ್ರ, ಭಕ್ತವತ್ಸಲ ಶ್ರೀರಾಮಚಂದ್ರ, ಸೀತಾರಮಣ ಶ್ರೀರಾಮಚಂದ್ರ " ಎಂದು ಹೆಸರಿಡಲು ಹೇಳಿದಳು.

ತಾನು ಹೇಳಿದ ಐದು ಹೆಸರುಗಳೂ ಇಡತಕ್ಕದ್ದೆಂದು ಅವರಿಗೆ ಮತ್ತೆ ಹೇಳಿದಳು. ಮೇಧಾವಿನಿ ವಿದ್ಯಾಚರಣರು ಐದು ಸಲ ನಾಮಕರಣ ಮಾಡಿದರು. ನಂದಿನಿಯ ಹೇಳಿಕೆಯಂತೆ ಅವರಿಬ್ಬರೂ ಹೆಸರಿಟ್ಟರು. ಗಿರಿಧಾರಿಯು ಇದನ್ನು ಕಂಡು ' ನನ್ನ ತಂಗಿಯು ಪುಣ್ಯವಂತೆ ' ಎಂದು ನುಡಿದು ಪದ್ಮನಾಭನ ಮೊಗವನ್ನು ನೋಡಿದನು. ಪ್ರೇಮನಂದಿನಿಯನ್ನು ನೋಡಿ ' ನನಗೆ ಮಾತನಾಡಲು ಶಬ್ದಗಳೇ ಬರಲೊಲ್ಲವು ' ಎಂದು ಗಿರಿ ಧಾರಿಯು ನುಡಿದನು. ಮನದಲ್ಲಿ ಒಂದು ತರಹದ ಅನುರಾಗ ಹುಟ್ಟಿ ಪದ್ಮನಾಭನು ವಿದ್ಯಾಚರಣನ ಬೆನ್ನಮೇಲೆ ಕೈಯಾಡಿಸಿದನು. ಕೈಯಾಡಿ ಸಿದ ಕೂಡಲೇ ಆತನ ದೇಹದಲ್ಲಿ ವಾತ್ಸಲ್ಯದ ವಿದ್ಯುಚ್ಛಕ್ತಿಯು ಹರಿದಾಡ ಹತ್ತಿತು.

ವಿದ್ಯಾಚರಣನು ಅಲ್ಲಿಂದ ಪದ್ಮನಾಭನ ಕೋಣೆಯಲ್ಲಿ ಒಂದು ಕುಳಿತನು.

" ಮೇಧಾವಿನಿ, ನೀನೇ ಪ್ರಸಾದವನ್ನು ಕೊಟ್ಟರೆ ನೆಟ್ಟಗಲ್ಲವೇ' ಎಂದು ಪ್ರೇಮನಂದಿನಿಯು ಹೇಳಿದಳು.

ಎಲ್ಲರಿಗೂ ಪ್ರಸಾದವನ್ನು ಕೊಟ್ಟು ಮೇಧಾವಿನಿಯು ಪ್ರೇಮನಂದಿ ನಿಗೆ ನಮಸ್ಕಾರ ಮಾಡಿದಳು.

" ಮಗು ನಿನ್ನ ಜೀವನವು ಸುಗಮವಾಗಿ ಸಾಗಲಿ " ಪ್ರೇಮನಂದಿನಿ ಹರಸಿದಳು.

ಮಂದಿರಕ್ಕೆ ಹೋಗಲು ತಡವಾಗುವದು; ಎಲ್ಲರೂ ತ್ವರಿತದಿಂದೆ ದ್ದರೆ ನೆಟ್ಟಗೆಂದು ಗಿರಿಧಾರಿಯು ಗಡಿಬಿಡಿಯನ್ನು ಮಾಡಹತ್ತಿದ್ದನು. ತನಗೆ ಆಸ್ಪತ್ರೆಯಲ್ಲಿ ಕೆಲಸವಿರುವದೆಂದು ವಿದ್ಯಾಚರಣನು ಹೊರಡಲು

ಸಿದ್ಧನಾದನು. ಪದ್ಮನಾಭನು ನೆಟ್ಟ ನೋಟದಿಂದ ಅವನನ್ನು ನೋಡು ತ್ತಲೇ ನಿಂತಿದ್ದನು. ಎಷ್ಟು ನೋಡಿದರೂ ಮನದಣಿಯಲಿಲ್ಲ; ಕಣ್ಣುಗಳು ತೃಪ್ತಿಪಡಲಿಲ್ಲ.

" ಡಾಕ್ಟರರೇ, ನಮ್ಮನ್ನು ನೀವು ನಿಮ್ಮ ಕಾರಿನಲ್ಲಿ ಕರೆದುಕೊಂಡು ರಾಮಮಂದಿರಕ್ಕೆ ಬಿಟ್ಟರೆ ಒಳಿತು. ಈಗ ವೇಳೆಯಾಗಿರುವದು " ಎಂದು ಗಿರಿಧಾರಿಯು ವಿದ್ಯಾಚರಣನಿಗೆ ಬಿನ್ನಹಮಾಡಿಕೊಂಡನು.

ಎಲ್ಲರೂ ಲಗುಬಗೆಯಿಂದ ಕಾರಿನಲ್ಲಿ ಕುಳಿತುಕೊಂಡರು. ವಿದ್ಯಾ ಚರಣನ ಬದಿಯಲ್ಲಿ ಮೇಧಾವಿನಿ ಮಧುಮತಿಯರು ಕುಳಿತುಕೊಂಡರು. ಹಿಂಬದಿಯ ಸ್ಥಳದಲ್ಲಿ ಪ್ರೇಮನಂದಿನಿ, ಪದ್ಮನಾಭ ಹಾಗೂ ಗಿರಿಧಾರಿ ಕುಳಿತುಕೊಂಡರು. ಕಾರು ಇನ್ನು ಹೊರಡಕ್ಕದ್ದು. ತಂಬೂರಿಯನ್ನು ಮರೆತು ಬಂದದ್ದು ಮಧುಮತಿಗೆ ನೆನಪಾಗಿ, ಇಳಿದು ಒಳಗೆ ಹೋಗಿ ತಂಬೂರಿಯನ್ನು ತಂದು ಪ್ರೇಮನಂದಿನಿಯ ಕೈಯಲ್ಲಿ ಕೊಟ್ಟಳು. ಪದ್ಮ ನಾಭನ ತಲೆಯಲ್ಲಿ ತನ್ನ ಹಿಂದಿನ ಆಯುಷ್ಯದ ಘಟನೆಗಳ ಚಿತ್ರಗಳು ದೃಷ್ಟಿಪಟಲದಲ್ಲಿ ಕುಣಿಯಹತ್ತಿದ್ದರಿಂದ ವಿಚಾರದ ಸುಂಟರಗಾಳಿಯಲ್ಲಿ ಸಿಲುಕಿ ತೇಲಾಡಹತ್ತಿದನು. ಒಂದು ಅದೃಷ್ಟ ವ್ಯಕ್ತಿಯ ಚಿತ್ರವು ತಲೆ ಯಲ್ಲಿ ಮೂಡಿತು. ಒಮ್ಮೆ ವಿದ್ಯಾಚರಣನ ಮೊಗ ಮತ್ತೊಮ್ಮೆ ಪ್ರೇಮನಂ ದಿನಿಯ ಮೊಗ ಹೀಗೆ ನೋಡುತ್ತ ಕುಳಿತುಕೊಂಡಿದ್ದನು. ರಾಮಮಂದಿ ರಕ್ಕೆ ಕಾರು ಬಂದಿತು. ಎಲ್ಲರೂ ಇಳಿದರು. ಪದ್ಮನಾಭನು ಹಾಗೇ ಕುಳಿತುಕೊಂಡನು. ಅವನು ಇಳಿದು ಬರುವನೆಂದು ಎಲ್ಲರೂ ತಿಳಿದು ಕೊಂಡು ಲಗುಬಗೆಯಿಂದ ಮಂದಿರದ ಒಳಗೆ ಹೋದರು. ಎಲ್ಲರೂ ಇಳಿದರೆಂದು ತಿಳಿದು ಆಸ್ಪತ್ರೆಗೆ ಹೋಗಲು ವೇಳೆಯಾದದ್ದರಿಂದ ವಿದ್ಯಾ ಚರಣನು ವೇಗದಿಂದ ಕಾರನ್ನು ನಡೆಸಿಕೊಂಡು ಆಸ್ಪತ್ರೆಗೆ ಬಂದನು.

ಕಾರಿನ ಹಿಂಬದಿಯಲ್ಲಿ ಪದ್ಮನಾಭನು ಕುಳಿತದ್ದು ವಿದ್ಯಾಚರಣನಿಗೆ ಗೊತ್ತೇ ಇಲ್ಲ. ಅವನು ಕಾರಿನಿಂದಿಳಿದು ಲಗುಬಗೆಯಿಂದ ಆಸ್ಪತ್ರೆಯೊ ಳಗೆ ಹೋದನು. ಪದ್ಮನಾಭನು ವಿಚಾರ ಮಾಡುತ್ತ ತಾನು ಎಲ್ಲಿರುವೆ ನೆಂಬುವ ಅರಿವು ಕೂಡ ಇರದೆ ಕಾರಿನಲ್ಲೇ ಕುಳಿತಿದ್ದನು.

ತಂಬೂರಿಯನ್ನು ತೆಗೆದುಕೊಂಡು ಮುಂದೆ ನಡೆದಿದ್ದ ಗಿರಿಧಾರಿಯ ಹಿಂದೆ ಪ್ರೇಮನಂದಿನಿ, ಮೇಧಾವಿನಿ ಹಾಗೂ ಮಧುಮತಿ ಇವರು ಬರುತ್ತಿದ್ದರು. ಆಬಾಲವೃದ್ಧರಿಂದ ಮಂದಿರವು ಕಿಕ್ಕಿರಿದು ತುಂಬಿತ್ತು. ಸುವಾಸಿನಿಯರು ಹೊಸ ಸೀರೆ ಕುಪ್ಪಸಗಳನ್ನು ತೊಟ್ಟುಕೊಂಡು ಸಾಲಂಕೃತರಾಗಿ ತೆಂಗು, ಬಾಳೆ ಮುಂತಾದ ಹಣ್ಣು ಹಂಪಲಗಳನ್ನು ಉಡಿ ತುಂಬಲು ತಟ್ಟೆಗಳಲ್ಲಿ ತೆಗೆದುಕೊಂಡು ಬಂದಿದ್ದರು. ಪ್ರೇಮನಂದಿನಿಯಾದರೂ ಹಣ್ಣು ಹಂಪಲಗಳಿಂದ ತುಂಬಿದ ತಾಟನ್ನು ಉಡಿತುಂಬಲು ಮಧುಮತಿಯು ಕೈಯಲ್ಲಿ ಕೊಟ್ಟಿದ್ದಳು. ನೂರಾರು ಸಣ್ಣ ಪೂಮಾಲೆಗಳಿದ್ದ ಮತ್ತೊಂದು ತಾಟನ್ನು ಮೇಧಾವಿನಿಯು ಕೈಯಲ್ಲಿ ಕೊಟ್ಟು ಸುವಾಸಿನಿಯರಿಗೆ ಆ ಪೂಮಾಲೆಗಳನ್ನು ಹಂಚಲು ಅವಳಿಗೆ ಹೇಳಿದ್ದಳು.

ಸಂಗೀತ ಕಾರ್ಯಕ್ರಮಕ್ಕೆ ಏರ್ಪಾಟು ಮಾಡಿದ ಸ್ಥಳದಲ್ಲಿ ಅವರನ್ನು ಕರೆದುಕೊಂಡು ಹೋಗಿ ಗಿರಿಧಾರಿಯು ಕುಳ್ಳಿರಿಸಿದನು. ಆ ಸ್ಥಳದ ಸಮೀಪದಲ್ಲಿಯೇ ಕಟ್ಟಿದ ತೊಟ್ಟಿಲದ ಹತ್ತರ/ವೇದ ಘೋಷ ಮಾಡುವವರಿದ್ದರು. ವೇದಘೋಷ ಮಾಡುವ ಅಧ್ವರ್ಯು ಕುಮಾರಿಲಭಟ್ಟರು. ಲಲಾಟದಲ್ಲಿ ಭಸ್ಮ, ಕೊರಳಲ್ಲಿ ರುದ್ರಾಕ್ಷಿ ಮಾಲೆ ಧರಿಸಿದ ಕುಮಾರಿಲಭಟ್ಟರು ಪಾಟಲೀ ಬಣ್ಣದ ಶಾಲನ್ನು ಹೊದ್ದುಕೊಂಡು ನಿಂತಿದ್ದರು. ಟೊಂಕದಲ್ಲಿಯ ನಾಸೀಪುಡಿಯ ಡಬ್ಬಿಯನ್ನು ತೆಗೆದು ಎಡಗೈಯಲ್ಲಿ ಹಿಡಿದುಕೊಂಡು, ಬಲಗೈ ಮಧ್ಯ ಬೆರಳಿನಿಂದ ಅದರ ಮುಚ್ಚಳಿಕೆಯನ್ನು ಟಪ ಟಪನೆ ಬಡೆದು ನಾಸೀಪುಡಿಯನ್ನು ತೆಗೆದು ಮೂಗಿನ ಸೊಳ್ಳೆಗಳಲ್ಲಿ ತುಂಬುತ್ತಿದ್ದರು. ಮೇಲಿಂದ ಮೇಲೆ ಕೈಯಲ್ಲಿಯ ನೀರಪಂಜೆಯಿಂದ ನಾಸಿಕವನ್ನು ಊದಿ ಸ್ವಚ್ಛ ಮಾಡುತ್ತಿದ್ದರು.

ಸಂಗೀತ ಕಾರ್ಯಕ್ರಮದ ಸ್ಥಾನದಲ್ಲಿ ಕುಳಿತ ಪ್ರೇಮನಂದಿನಿಯನ್ನು ಕಂಡು ಕೆಲವರು ಮಹಾನಗರಕ್ಕೆ ಹೊಸದಾಗಿ ಬಂದ ವಾರಂಗನೆಯನ್ನು ಗಿರಿಧಾರಿಯು ತನ್ನ ಜಾಲದಲ್ಲಿ ಬಲೆಹಿಡಿದು ತಂದಿರಬಹುದೆಂದೂ ಮತ್ತೆ ಕೆಲವರು ತಾನು ಈ ನಗರಕ್ಕೆ ಹೊಸದಾಗಿ ಬಂದದ್ದನ್ನು ಜನರಿಗೆ ತನ್ನ ರೂಪದಿಂದ ಅರುಹಲು ಇಂದಿನ ಸಂಗೀತ ಕಾರ್ಯಕ್ರಮಕ್ಕೆ ಬಂದಿರುವಳೆಂದೂ ತರ್ಕವಿತರ್ಕ ಹಾಕುತ್ತ ಮಾತನಾಡುತ್ತಿದ್ದರು. ಜೀವನದ

ಕಷ್ಟಕ್ಕೆ ಬೇಜಾರುಪಟ್ಟ ನೊಂಗ ಜೀವಿಯು ಪರಮಾರ್ಥ ಮಾರ್ಗವನ್ನು ಹಿಡಿದಿರಬಹುದೆಂದು ಮೊಗದೊಬ್ಬರು ನುಡಿಯುತ್ತಿದ್ದರು. ಅವಳ ಚಿತ್ತಾಕರ್ಷಕ ರೂಪ ಕಂಡು ಎಲ್ಲರೂ ಎವೆಬಡಿಯದೆ ಅವಳನ್ನೇ ನೋಡುತ್ತಿದ್ದರು. ಇಷ್ಟು ಜನಗಳೆದುರಿಗೆ ಸಂಗೀತ ಹೇಳಲು ಕುಳಿತದ್ದು ಇದೇ ಮೊದಲ ಸಲ. ಜನಗಳನ್ನು ನೋಡಿ ಮನದಲ್ಲಿ ಅಧೈರ್ಯ ಹುಟ್ಟಿದರೂ ಇಂದಿನ ಸಂಗೀತ ಸೇವೆಯನ್ನು ಮಾಡುವದು ಶ್ರೀರಾಮಚಂದ್ರನ ಆಜ್ಞೆಯೆಂದು ಧೈರ್ಯದಿಂದ ಪ್ರೇಮನಂದಿನಿಯು ಕುಳಿತಿದ್ದಳು.

ರಾಮಜನನವಾಯಿತು. ಮೇಧಾವಿನಿ ಹಾಗೂ ಮಧುಮತಿಯರು ಸುವಾಸಿನಿಯರಿಗೆ ಉಡಿಯನ್ನು ತುಂಬಿ ಹೂವಾಲೆಯನ್ನು ಮುಡಿಯಲು ಕೊಟ್ಟರು.

ಕುಮಾರಿಲಭಟ್ಟರು ಉಪನಿಷತ್ತಿನ ಘೋಷಣೆಯನ್ನು ಮಾಡಿದರು.

"ಆನಂದೋ ಬ್ರಹ್ಮೇತಿ ವ್ಯಜಾನಾತ್ | ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೆ | ಆನಂದೇನ ಜಾತಾನಿ ಜೀವಂತಿ | ಆನಂದಮ್ ಪ್ರಯಂ ತ್ಯಭಿಸಂವಿಶಂತೀತಿ | ಸೈಷಾ ಭಾರ್ಗವಿ | ವಾರುಣೀ ವಿದ್ಯಾಪರಮೇ ವ್ಯೋಮನ್ ಪ್ರತಿಷ್ಠಿತಾ | ಸ ಯ ಏವಂ ವೇದ ಪ್ರತಿತಿಷ್ಠತಿ | ಅನ್ನವಾನನ್ನಾದೋ ಭವತಿ | ಮಹಾನ್‌ಭವತಿ; ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ| ಮಹಾನ್‌ಕೀರ್ತ್ಯಾ || ಯ ಏವಂ ವೇದ | ಇತ್ಯುಪನಿಷತ್ | "

ಎಂದು ಉಪನಿಷತ್ತಿನ ಪಠಣವನ್ನು ಮಾಡಿ ' ಸಂಗೀತಸೇವಾಮಧಾರಯೇತ " ಎಂದು ಕುಮಾರಿಲಭಟ್ಟರು ನುಡಿದರು.

ಪ್ರೇಮನಂದಿನಿಯು ಪತಿತಪಾವನ ಸೀತಾರಾಮನನ್ನೂ, ನೀಲಮೇಘಶ್ಯಾಮನನ್ನೂ ಮನದಲ್ಲಿ ವಂದಿಸಿ ಹಾಡಲು ಪ್ರಾರಂಭ ಮಾಡಿ ತಂಬೂರಿಯ ತಂತಿಗಳನ್ನು ಮೀಟುತ್ತ ಹಾಡಹತ್ತಿದಳು.

ಭಕ್ತಿಯೊಂದೆ ಸಾಧನಾ | ಈಶನಡಿಯ |
ಭಕ್ತಿಯೊಂದೆ ಸಾಧನಾ ||ಪ||
ಸೂಕ್ತ ಸುಖದ ಸರಕು ಕೊಳಲು
ಬಳಸಿಕೋಯಿದೇ ಧನಾ || ಅ || ಪ ||
ಅಡಿಯು ಸೋಂಕೆ ಶಿಲೆಗೆ ಜೀವ !

ಅಡಿಯೆ ಬಲಿಗೆ ಮೋಕ್ಷ ! ಸರ್ವ !
ಅಡಿಯೊಳುದಿಸಿ ಹರಿವಳಲ್ಲೆ
ತಾಯಿ ಗಂಗೆ ಯನುದಿನಾ ||೧||

ಸರುವ ಸುಖದ ಮೂಲ ಭಕ್ತಿ !
ಮರೆತರಹುದೆ ನಿತ್ಯ ಶಾಂತಿ !
ಸರಿವ ಸುಖದ ಬೆನ್ನಹತ್ತಿ
ಕಳೆಯಲೇಕೆ ಜೀವನಾ ||೨||

ಜನನ ಮರಣ ಜಾಲಹರಣ |
ಅನುಪಮೇಯ ಪದ ನಿಧಾನ |
ಶ್ರೀನಿವಾಸನಡಿಯ ಭಕುತಿ
ಗಿಲ್ಲ ಸರಿಸಮಾನ ||೩||

ಅವಳ ಸುಮಧುರವಾದ ಇಂಪಾದ ಸ್ವರದ ಪ್ರವಾಹದಲ್ಲಿ ಕುಳಿತವರೆಲ್ಲರೂ ತಮ್ಮನ್ನೇ ತಾವು ಮರೆತು ತೇಲಹತ್ತಿದರು. ತಮ್ಮ ತರ್ಕ ವಿತರ್ಕಗಳನ್ನು ಬದಿಗೊತ್ತಿ ಅವಳು ಹಾಡಿದ ಹಾಡಿನ ರಸವನ್ನು ಆಸ್ವಾದಿಸಹತ್ತಿದರು. ಅವಳು ಮೀರಾಬಾಯಿಯ ಅವತಾರಳೋ ಎಂದು ಕೆಲವರು ತಿಳಿದುಕೊಳ್ಳಹತ್ತಿದರು. ಪ್ರೇಮನಂದಿನಿಯು ಶ್ರೀರಾಮಚಂದ್ರನಲ್ಲಿ ಶ್ರದ್ಧೆಯಿಟ್ಟು ಆತನ ಸಂಗೀತ ಸೇವೆಯನ್ನು ಮಾಡಿದಳು.

ಗಿರಿಧಾರಿಯು ಅವಳ ಸಂಗೀತವನ್ನು ಕೇಳಿದ್ದು ಇಂದೇ. ಅವಳು ಉಟ್ಟದ್ದು ಶುಭ್ರಪತ್ತಲ, ತೊಟ್ಟದ್ದು ಶುಭ್ರ ಕುಪ್ಪಸ, ಕೊರಳಲ್ಲಿ ತುಳಸಿಯ ಮಾಲೆ— ಇವುಗಳನ್ನು ಗಿರಿಧಾರಿಯು ಕಂಡು ಅವಳು ಯೋಗಿನಿಯೆಂದು ತಿಳಿದುಕೊಂಡನು. ಸೀನಪ್ಪನಾಯಕನು ಹೆಂಡತಿಯು ತಿರುಗಿಕೊಟ್ಟ ಮೂಗುತಿಯನ್ನು ಕಂಡು ಅದೇ ಕ್ಷಣವೇ ಎಲ್ಲವನ್ನೂ ತ್ಯಾಗಮಾಡಿ ದಾಸರಾದದ್ದು ಇಂದು ಅವನಿಗೆ ಸತ್ಯವೆನಿಸಿತು. ಮತದೊರಕಿಸಿ ಕೊಡಬೇಕೆಂದು ಕೇಳಲು ಹೋದಾಗ್ಗೆ ಅವಳಲ್ಲಿ ಉಂಟಾದ ಪರಿವರ್ತನೆಯು ಇಷ್ಟು ಅಗಾಧವಾದುದೆಂದು ಅವನು ಎಂದೂ ನಂಬಿದ್ದಿಲ್ಲ. ಆಗಿನ ಸಮಯದಲ್ಲಿ ಏನೋ ಒಂದು ಆವೇಶದಿಂದ ಮಾತನಾಡಿರಬಹುದೆಂದು ಗಿರಿಧಾರಿಯು

ತಿಳಿದುಕೊಂಡಿದ್ದನು. ಅವಳನ್ನು ಹೀಯಾಳಿಸುತ್ತಿದ್ದ ಜನರು ಅವಳನ್ನು ಕಾಣಲು ಮುಗಿಬೀಳಹತ್ತಿದರು.

ಕುಮಾರಿಲಭಟ್ಟರು ಮಾತ್ರ ಅವಳ ಮೊಗವನ್ನು ಕಂಡು ದಂಗು ಬಡಿದು ನಿಂತರು. ಅವಳನ್ನು ಎಲ್ಲಿಯೋ ಬಹಳ ವರುಷಗಳ ಹಿಂದೆ ನೋಡಿದಂತೆ ಅವರಿಗೆ ಅನಿಸಹತ್ತಿತು. ಎಲ್ಲಿ ಎಂಬುವದು ಸ್ಪಷ್ಟವಾಗಿ ಅವರ ಸ್ಮರಣೆಯಲ್ಲಿ ಬರಲೊಲ್ಲದು. ಮಧುಮತಿಯು ಪ್ರೇಮನಂದಿನಿಯ ಹತ್ತರ ಬಂದು,

"ಅಮ್ಮಾ ನೀನು ಇನ್ನೊಂದು ಪದವನ್ನು ಹಾಡಿದರೆ ಚನ್ನಾಗುವದಿಲ್ಲವೇ ?" ಎಂದು ಕೇಳಿಕೊಂಡಳು.

ಪ್ರೇಮನಂದಿನಿಯು ಹಾಡನ್ನು ಮುಗಿಸಿದಳೆಂದು ಎಲ್ಲರೂ ತಿಳಿದುಕೊಂಡರು.

"ಮಗೂ, ನೀನೇ ಒಂದು ಹಾಡನ್ನು ಹಾಡು" ಎಂದು ಮಧುಮತಿಗೆ ಹೇಳುತ್ತ ಅವಳ ಕೈಯಲ್ಲಿ ತನ್ನ ತಂಬೂರಿಯನ್ನು ಕೊಟ್ಟಳು. ಅವಳ ಮಾತನ್ನು ಮಧುಮತಿಗೆ ಮೀರಲಿಕ್ಕಾಗಲಿಲ್ಲ.

"ಆಗಲಮ್ಮ, ನಿನ್ನ ಅನುಗ್ರಹವಿದ್ದರೆ ನಾನು ಚೆನ್ನಾಗಿ ಹಾಡುವೆ" ಎಂದು ಮಧುಮತಿಯು ನುಡಿದು ತಂಬೂರಿಯನ್ನು ಹಿಡಿದುಕೊಂಡು ಹಾಡತೊಡಗಿದಳು. ಮಧುಮತಿಯು ಹಾಡಲು ಕುಳಿತದ್ದು ಕಂಡು ಗಿರಿಧಾರಿಗೆ ಬಹಳೇ ಆನಂದವಾಯಿತು. ಅವಳ ಕಡೆಯಿಂದ ಇಂದು ಹಾಡಿಸಬೇಕೆಂದು ಮಾಡಿದ್ದನ್ನು ಪ್ರೇಮನಂದಿನಿಯು ಕೈಗೂಡಿಸಿದಳೆಂದು ಸಂತೋಷಪಟ್ಟನು. ಅವಳು ಹಾಡುವದನ್ನು ಕೇಳಿದ್ದನು. ಅವಳು ಚನ್ನಾಗಿ ಹಾಡುವಳೆಂದು ಅವನಿಗೆ ಸಂಪೂರ್ಣ ನಂಬಿಕೆಯಿತ್ತು.

ಮಧುಮತಿಯು ಹಾಡಲಿಕ್ಕೆ ಕುಳಿತದ್ದು ಕಂಡು ಕುಮಾರಿಲಭಟ್ಟರು ಬೆಪ್ಪಾದರು. ಅವಳ ಹಿಂದೆಯೇ ಪ್ರೇಮನಂದಿನಿಯ ಹತ್ತರ ಮೇಧಾವಿನಿಯು ಕುಳಿತದ್ದನ್ನು ಕಂಡು ಸೋಜಿಗವೆನಿಸಿತು; ಹಾಗೂ ಆಶ್ಚರ್ಯವೆನಿಸಿತು. ಮೇಧಾವಿನಿಯೂ ಹಾಡುವಳೆಂದು ಆತ ತಿಳಿದುಕೊಂಡಿದ್ದ.

ಮಧುಮತಿಯು ಮನದಲ್ಲಿ ಮತ್ತೊಮ್ಮೆ ಶ್ರೀರಾಮಚಂದ್ರನಿಗೂ ಪ್ರೇಮನಂದಿನಿಗೂ ನಮಸ್ಕರಿಸಿ ಹಾಡಹತ್ತಿದಳು.

ಬಹು ದೂರ ಬಹು ದೂರ
ಜೀವನದ ದಾರಿ ||ಪ||

ಹಿಂದೆ ನೋಡದ ದಾರಿ
ಮುಂದೆ ಕಾಣದ ದಾರಿ
ಬಹುದೂರ ಬಹುದೂರ
ಜೀವನದ ದಾರಿ ||೧||

ಮಂಜು ಮುಸುಕಿದ ದಾರಿ
ನಂಜು ನೀಡುವ ದಾರಿ
ಬಹುದೂರ ಬಹುದೂರ
ಜೀವನದ ದಾರಿ ||೨||

ಮುಳ್ಳು ಚುಚ್ಚುವ ದಾರಿ
ಕಳ್ಳ ಹೊಡೆಯುವ ದಾರಿ
ಬಹುದೂರ ಬಹುದೂರ
ಜೀವನದ ದಾರಿ ||೩||

ಆದಿ ಅರಿಯದ ದಾರಿ
ತುದಿಯು ನೋಡದ ದಾರಿ
ಬಹುದೂರ ಬಹುದೂರ
ಜೀವನದ ದಾರಿ ||೪||

ಹುಟ್ಟು ಇಲ್ಲದ ದಾರಿ
ಗುಟ್ಟು ತೋರದ ದಾರಿ
ಬಹುದೂರ ಬಹುದೂರ
ಜೀವನದ ದಾರಿ ||೫||

ಕರ್ಮಕೂಡಿದ ದಾರಿ
ಮರ್ಮ ತೋರದ ದಾರಿ
ಬಹುದೂರ ಬಹುದೂರ
ಜೀವನದ ದಾರಿ ||೬||

ನೊಂದ ಜೀವದ ದಾರಿ
ಬೆಂದ ಕುರುಡನ ದಾರಿ
ಬಹುದೂರ ಬಹುದೂರ
ಜೀವನದ ದಾರಿ ||೭||

ತ್ರಾಣ ಹಿಂಡುವ ದಾರಿ
ಪ್ರಾಣ ಹೀರುವ ದಾರಿ
ಬಹುದೂರ ಬಹುದೂರ
ಜೀವನದ ದಾರಿ ||೮||

ಕಣ್ಣು ಮುಚ್ಚುವ ದಾರಿ
ಮಣ್ಣು ತೂರುವ ದಾರಿ
ಬಹುದೂರ ಬಹುದೂರ
ಜೀವನದ ದಾರಿ ||೯||

ಮುಂದೆ ಹೋದರು ಕೆಲರು
ಹಿಂದೆ ಬರುವರು ಕೆಲರು
ಬಹುದೂರ ಬಹುದೂರ
ಜೀವನದ ದಾರಿ ||೧೦||

ಮಧುಮತಿಯು ರಾಗಾಲಾಪಗಳಿಂದ ಹಾಡಿದ ಈ ಹಾಡನ್ನು ಕಂಡು ಪ್ರೇಮನಂದಿನಿಯು ಆನಂದ ಭರಿತಳಾಗಿ ಮೈದಡವಿದಳು. ತಂಬೂರಿಯನ್ನು ಅಲ್ಲಿಯೇ ಕೆಳಗಿಟ್ಟು ವಿಗ್ರಹಕ್ಕೆ ನಮಸ್ಕರಿಸಿ ಪ್ರೇಮನಂದಿನಿಗೆ ನಮಸ್ಕಾರ ಮಾಡಿದಳು.

" ಮಗು, ನಿನ್ನ ಹೆತ್ತ ತಾಯಿಯು ಭಾಗ್ಯವಂತಳು " ಎಂದು ಪ್ರೇಮನಂದಿನಿಯು ಮೆಲ್ಲಗೆ ನುಡಿದಳು.

" ಭಾಗ್ಯವತಿಯೋ ಅಭಾಗ್ಯವತಿಯೋ ಎನ್ನುವದು ನನಗೆ ಗೊತ್ತಿಲ್ಲ" ಮಧುಮತಿಯು ಮೆಲ್ಲಗೆ ಉತ್ತರ ಕೊಟ್ಟಳು.

ಗಿರಿಧಾರಿಯು ಅವರೆಲ್ಲರನ್ನು ಮಂದಿರದಿಂದ ಹೊರಗೆ ಕರೆದು ಕೊಂಡು ಬಂದನು.

" ಮಧುಮತಿ, ನಿಮ್ಮಿಬ್ಬರ ಸಂಗೀತ ಕೇಳಿ ಎಲ್ಲರೂ ಆನಂದ ಪಟ್ಟರು. ಎಲ್ಲರ ಬಾಯಿಯಲ್ಲಿ ನಿಮ್ಮ ಗುಣಗಾನ " ಎಂದು ಗಿರಿಧಾರಿಯು ನುಡಿದನು.

" ಅಣ್ಣನು ಇಂದು ರಾಮುಜನನವನ್ನು ಬಹಳೇ ಚನ್ನಾಗಿ ಮಾಡಿಸಿದನು " ಎಂದು ಮೇಧಾವಿನಿಯು ಬದಿಯಲ್ಲಿದ್ದ ಮಧುಮತಿಯ ಹೆಗಲ ಮೇಲೆ ಕೈಯಿಟ್ಟು ನುಡಿದಳು.

ಮಂದಿರದ ಹೊರಗೆ ಬಂದು ಎಲ್ಲರೂ ಪದ್ಮನಾಭನ ದಾರಿಯನ್ನು ಕಾಯುತ್ತ ನಿಂತರು. ಮಂದಿರದಲ್ಲಿ ಹೋಗಿ ಗಿರಿಧಾರಿಯು ಪದ್ಮನಾಭನನ್ನು ಹುಡುಕಿಬಂದನು. ಅವನಿಗೆ ಅಲ್ಲಿ ಕಾಣಲೇ ಇಲ್ಲ. ಗಿರಿಧಾರಿಯು ಗಾಬರಿಯಾಗಿ ಬಂದು,

" ನಿಮಗೆ ಹೇಳಿ ಮನೆಗೆ ಹೋಗಿರುವರೋ ? ಇಲ್ಲಿ ಎಲ್ಲಿಯೂ ಕಾಣಲಿಲ್ಲ " ಎಂದು ಪ್ರೇಮನಂದಿನಿಗೆ ಹೇಳಿದನು.

ತನಗೆ ಹೇಳಿಲ್ಲವೆಂದೂ, ವಿದ್ಯಾಚರಣನ ಜತೆಯಲ್ಲಿ ಹೋಗಿರಬಹುದೆಂದೂ ಪ್ರೇಮನಂದಿನಿಯು ಗಿರಿಧಾರಿಗೆ ಹೇಳಿದಳು.

" ನಾಲ್ಕೈದು ದಿನಗಳಿಂದ ಅವರ ಮೈಯಲ್ಲಿ ನೆಟ್ಟಗಿಲ್ಲ. ಯಾವಾಗಲೂ ಸುಂದಾಗಿಯೇ ಇರುವರು. ಇಲ್ಲಿ ಇಳಿಯುವದನ್ನು ಮರೆತು ವಿದ್ಯಾಚರಣರ ಕಾರಿನಲ್ಲಿಯೇ ಹೋಗಿರಬಹುದು " ಎಂದು ಪ್ರೇಮನಂದಿನಿಯು ನುಡಿದಳು.

" ಅವರು ಹಾಗೆ ಹೋಗುವವರಲ್ಲ. ಹೋಗುವದಾದರೂ ಅವರು ಹೇಳಿ ಹೋಗುತ್ತಿದ್ದರು. ಮಂದಿರದಲ್ಲಿ ಬಂದು ಮತ್ತೆ ಎಲ್ಲಿಯಾದರೂ ಹೋದರೋ " ಎಂದು ಮಧುಮತಿಯು ಅಂದಳು.

" ಅವರು ವಿದ್ಯಾಚರಣನ ಜತೆಯಲ್ಲಿಯೇ ಹೋಗಿರಬಹುದು " ಅಂದನು ಗಿರಿಧಾರಿ.

ಪುಟಚಂಡಿನ ಹೆಜ್ಜೆಯನ್ನು ಹಾಕುತ್ತ ಮಂದಿರದ ಹೊರಗೆ ಬಂದು ಕುಮಾರಿಲಭಟ್ಟರು ಅನತಿದೂರದಲ್ಲಿಯೇ ನಿಂತು ಕುತೂಹಲ ದೃಷ್ಟಿಯಿಂದ ಪ್ರೇಮನಂದಿನಿಯನ್ನು ನೋಡಹತ್ತಿದರು. ಅವಳು ಯಾರಿರಬಹುದೆಂದು ನೆನಪು ಮಾಡಿಕೊಳ್ಳಲು ಯತ್ನಿಸತೊಡಗಿದರು. ನೋಡಿದ

ಹಾಗೆ, ಮಾತನಾಡಿದ ಹಾಗೆ, ಕೂಡಿ ಇದ್ದು ಕಾಲಕಳೆದ ಹಾಗೆ ಅನಿಸಹತ್ತಿತು ಕುಮಾರಿಲಭಟ್ಟರಿಗೆ. ಮಂಜು ಮುಸುಕಿದ ಸ್ಮರಣೆಯಲ್ಲಿ ಅವಳು ಅಸ್ಪಷ್ಟವಾಗಿ ಕಾಣಿಸಹತ್ತಿದಳು. ಪ್ರೇಮನಂದಿನಿಯು ದೃಷ್ಟಿಯನ್ನು ತಮ್ಮ ಕಡೆಗೆ ಸೆಳೆಯಬೇಕೆಂದು ನಸ್ಯ ತುಂಬಿದ ನಾಸಿಕವನ್ನು ಪಾಂಚಜನ್ಯದಂತೆ ಊದಿದರು. ಆದರೆ ಪ್ರೇಮನಂದಿನಿಯು ತಿರುಗಿ ನೋಡಲಿಲ್ಲ.

ಪದ್ಮನಾಭನು ಮನೆಗೆ ಹೋಗಿರಬಹುದೆಂದು ಗಿರಿಧಾರಿಯು ಆ ಮೂವರನ್ನೂ ಮನೆಯ ಕಡೆಗೆ ಕರೆದುಕೊಂಡು ಹೊರಟನು. ಅವರ ಬೆನ್ನು ಹತ್ತಬೇಕೆಂದು ಭಟ್ಟರಿಗೆ ಅನಿಸಹತ್ತಿತು. ಬೆನ್ನು ಹತ್ತುವದಕ್ಕೆ ಮನದಲ್ಲಿ ನಾಚಿಕೆ, ಬಿಡಬೇಕೆಂದರೆ ಕುತೂಹಲವು ಮುಂದೆ ಜಗ್ಗುತ್ತಿತ್ತು. ಇತಿ–ಮಿತಿಯಲ್ಲಿ ಸಿಕ್ಕು ಒಂದೆರಡು ನಿಮಿಷ ಸುಮ್ಮನೆ ನಿಂತುಕೊಂಡರು. ಕೊನೆಗೆ ಕುಮಾರಿಲಭಟ್ಟರು ಧೈರ್ಯವನ್ನು ತೆಗೆದುಕೊಂಡು ಎದೆಯನ್ನು ಗಟ್ಟಿಯಾಗಿ ಹಿಡಿದುಕೊಂಡು ಅವರ ಬೆನ್ನು ಹತ್ತಿ ಅವರನ್ನು ಕೂಡಿಕೊಂಡರು.

ಹೋಗುತ್ತಿದ್ದ ಪ್ರೇಮನಂದಿನಿಯೆದುರಿಗೆ ಬಂದು ಕಂಬದಂತೆ ಕುಮಾರಿಲಭಟ್ಟರು ನಿಂತುಬಿಟ್ಟರು.

" ನನ್ನ ಪರಿಚಯು ಸಿಗುವದೋ ? " ಎಂದು ಪ್ರೇಮನಂದಿನಿಯನ್ನು ಕುಮಾರಿಲಭಟ್ಟರು ಹುಬ್ಬು ಏರಿಸುತ್ತ ಕೇಳಿದರು.

ಎದುರಿಗೆ ನಿಂತ ಕುಮಾರಿಲಭಟ್ಟರನ್ನು ಕಂಡು ಪ್ರೇಮನಂದಿನಿಯು ಏನೂ ಉತ್ತರ ಕೊಡದೆ ದುರುಗುರನೆ ಅವನನ್ನು ನೋಡುತ್ತ ನಿಂತಳು.

" ಭಟ್ಟರೇ ಏನು ನಡೆಸಿರುವಿರಿ ? " ಮಧುಮತಿ ಕೇಳಿದಳು.

ಅವಳ ಮಾತಿಗೆ ಲಕ್ಷ್ಯ ಕೊಡದೆ ಕುಮಾರಿಲಭಟ್ಟರು,

" ತಾವು ಉತ್ತರಕನ್ನಡದವರಲ್ಲವೇ ? ತಮ್ಮ ಹೆಸರು ಮಾಯಾದೇವಿಯಲ್ಲವೇ " ಎಂದು ಪ್ರೇಮನಂದಿನಿಗೆ ಕೇಳಿದರು.

" ಅವರ ಹೆಸರು ಮಾಯಾದೇವಿಯಲ್ಲ, ಪ್ರೇಮನಂದಿನಿ ತಾವು ಏನೋ ತಪ್ಪು ಕಲ್ಪನೆ ಮಾಡಿಕೊಂಡು ಕೇಳುತ್ತೀರಿ " ಎಂದು ಮಧುಮತಿ ನುಡಿದಳು.

ತುಸು ಮುಂದಕ್ಕೆ ಹೋಗಿ ಗಿರಿಧಾರಿಯು ಇವರ ಮಾತುಕತೆಗಳನ್ನು

ಕೇಳಿ ತಿರುಗಿ ಬಂದು "ಅಪ್ಪನ ಉಪನ್ಯಾಸ ಎಲ್ಲಿ ಹೋದರೂ ಇರುವದು" ಅಂದನು.

ಮಗನ ಮಾತನ್ನು ಕೇಳಿ ಭಟ್ಟರು ಹಿಂಜರಿದರು. ಮೇಧಾವಿನಿ ಖಿನ್ನವದನವುಳ್ಳವಳಾಗಿ ಸುಮ್ಮನೆ ನಿಂತಳು. "ನಿಮ್ಮ ತಂದೆಯೆ ಇವರು?" ಎಂದು ಮೇಧಾವಿನಿಗೆ ಪ್ರೇಮನಂದಿನಿಯು ಕೇಳಿದಳು. ಹೌದೆಂದು ಮೇಧಾವಿನಿ ಉತ್ತರ ಕೊಟ್ಟಳು.

"ಭಟ್ಟರೇ, ನಾನು ಮಾಯಾದೇವಿಯಲ್ಲ. ನನ್ನ ಹೆಸರು ಪ್ರೇಮ ನಂದಿನಿ. ನಿಮ್ಮ ಮಾಯಾದೇವಿ ಬೇರೆಯವರು ಯಾರಾದರೂ ಇರಬ ಹುದು. ಮಾಯೆ ಮಾಡುವ ದೇವಿ ಎಂದೋ ಸತ್ತು ಹೋಗಿರಬಹುದು. ಮಾಯಾದೇವಿಯೆಂದರೆ ಯಾರು ? ಅವಳು ನಿಮ್ಮ ಲಗ್ನದ ಹೆಂಡತಿಯೋ" ಎಂದು ಪ್ರೇಮನಂದಿನಿ ಕೇಳಿದಳು.

ಉತ್ತರವನ್ನು ಕೊಡದೆ ಕುಮಾರಿಲಭಟ್ಟರು ಆಕಾಶವನ್ನು ನೋಡುತ್ತ ನಿಂತರು.

## ೧೨

" ರಂಜನೀ, ಮೊನ್ನೆ ಕುಮಾರಿಲಭಟ್ಟರು ರಾಮಮಂದಿರದ ಹೊರಗೆ ಪ್ರೇಮನಂದಿನಿಗೆ ಹೀಗೇಕೆ ಕೇಳಿದರು ? ಅವಳಿಗೆ ಮಾಯಾದೇವಿಯೆಂದು ಕರೆದು ಮಂಗನಂತೆ ಮೊಸಡೆಯನ್ನು ಮಾಡಿಕೊಂಡು ಅವಳ ಮೊಗ ವನ್ನು ನೋಡುತ್ತ ನಿಂತರು. ಅವರ ನಡತೆ ನನಗೆ ಏನೂ ಸರಿ ಬರಲಿಲ್ಲ " ಎಂದು ಮಧುಮತಿಯು ಅಂದಳು.

" ನಮಗೆ ಸರಿಬರದಿದ್ದರೂ ಸಹನ ಮಾಡಿಕೊಳ್ಳಬೇಕಾಗುವದು. "

" ಸಹನ ಮಾಡಿಕೊಂಡೇ ಬಂದೆ. ನಾನು ಅವರಿಗೇನೂ ಉತ್ತರ

ಕೊಡಲಿಲ್ಲ. ಗಿರಿಧಾರಿಯು ತಂದೆಯ ಅಸಡ್ಡಾಳತನವನ್ನು ಕಂಡು ಮನಸ್ಸಿನಲ್ಲಿ ವ್ಯಥೆ ಪಟ್ಟು ಸ್ವಲ್ಪ ಸಿಟ್ಟಿನ ಮಾತುಗಳನ್ನು ಭಟ್ಟರಿಗೆ ಆಡಿದನು.

" ಪ್ರೇಮನಂದಿನಿಯು ಅವರಿಗೇನಂದಳು ? "

" ಪಾಪ ! ಅವಳೇನೂ ಅನ್ನಲಿಲ್ಲ. ತಾವು ಕೇಳುವ ಮನುಷ್ಯಳು ತಾನು ಅಲ್ಲವೆಂದು ಹೇಳಿ ಸುಮ್ಮನೆ ಬಂದಳು. ಬವಳು ಬಹಳ ತಾಳ್ಮೆಯನ್ನು ತಾಳಿದಳು. ಅವಳ ಮನದಲ್ಲಿಯ ಆನಂದದ ಝರಿಯು ಬತ್ತಿ ಹೋಯಿತು. "

" ಕುಮಾರಿಲಭಟ್ಟರು ಹಾಗೆ ಮಾತಾಡಬಾರದಿತ್ತು. ಏನೋ ತಿಳಿಯದೆ ತಪ್ಪಿ ಮಾತಾಡಿರಬೇಕು. "

"ರಂಜನೀ, ಅವರು ತಿಳಿಯದೆ ಮಾತಾಡಿರಬೇಕೆಂದು ನಾನು ಅನ್ನುವದಿಲ್ಲ. ಅವರು ತಾವು ಏನು ಮಾಡುತ್ತೇವೆಂದು ಚನ್ನಾಗಿ ಅರಿತು ಮಾಡಿರುವರು. ಅರಿಯದೆ ಮಾಡಿದವರು ಹಿಂದುಗಡೆಗೆ ತಪ್ಪಾಯಿತೆಂದು ಹೇಳುವರು. ಅವರಲ್ಲಿ ಇಂತಹ ಪ್ರವೃತ್ತಿ ನನಗೆ ಕಂಡು ಬರಲಿಲ್ಲ. ಒಟ್ಟಿನಲ್ಲಿ ಹೇಳಬೇಕೆಂದರೆ ಅವರು ಪಕ್ಕಾ ನಂಬರ ಒಂದು. "

" ನಾವು ಅದನ್ನು ಅಲ್ಲಿಯೇ ಮರೆತು ಬಿಡುವದು ನೆಟ್ಟಗೆ. "

ಅಷ್ಟರಲ್ಲಿ ಹೊರಗೆ ಪ್ರೇಮನಂದಿನಿಯು ದನಿಯನ್ನು ಕೇಳಿ ಮಧುಮತಿಯು ಹೊರಗೆ ಓಡಿಬಂದು,

' ಬಾ ಅಮ್ಮಾ, ಬಾ ' ಎಂದು ಪ್ರೇಮನಂದಿನಿಯನ್ನು ಒಳಗೆ ಕರೆದು ಕೊಂಡು ಹೋದಳು.

" ವಿದ್ಯಾಚರಣರು ಇರುವರೋ ? ಆಸ್ಪತ್ರೆಯಿಂದ ಬಂದಿರುವರೋ " ಎಂದು ಕೇಳಿದಳು ಪ್ರೇಮನಂದಿನಿ.

" ಬಂದು ಬಹಳೇ ವೇಳೆ ಆಯಿತು. ಅಣ್ಣಾ ಪ್ರೇಮನಂದಿನಿಯವರು ಬಂದಿರುವರು " ಮಧುಮತಿಯು ಹೇಳಿದಳು.

" ಬಂದೆ " ಎಂದು ಉತ್ತರವಿತ್ತನು ವಿದ್ಯಾಚರಣ.

" ಪದ್ಮನಾಭರಿಗೆ ಹೇಗಿರುವದು ? " ಎಂದು ಕೇಳಿದಳು ಮಧುಮತಿ.

" ಪ್ರಕೃತಿ ಚೆನ್ನಾಗಿದೆ " ಎಂದು ಹೇಳಿದಳು ಪ್ರೇಮನಂದಿನಿ.

ವಿದ್ಯಾಚರಣನು ಒಳಗಿನಿಂದ ಬಂದು ಕುಳಿತುಕೊಂಡನು.

" ಅವರು ಈಗ ಕ್ಷೇಮದಿಂದಿರುವರು. ತಾವು ಪ್ರಕೃತಿಯನ್ನು ನೋಡಲು ಬರಬಾರದೆಂದು ತಮಗೆ ಬಿನ್ನಹವಮಾಡಿಕೊಂಡಿರುವರು. ತಮ್ಮ ಪ್ರಕೃತಿಯಲ್ಲಿ ಏನಾದರೂ ವ್ಯತ್ಯಾಸವಾದರೆ ತಿಳಿಸುತ್ತಾರಂತೆ. " ಎಂದು ಪ್ರೇಮನಂದಿನಿಯು ವಿದ್ಯಾಚರಣನಿಗೆ ಹೇಳಿದಳು.

" ಅವರ ಪ್ರಕೃತಿಯ ಬಗ್ಗೆ ಏನೂ ಚಿಂತೆಯನ್ನು ಮಾಡಬೇಡಿರಿ. "

" ಏನಾಗಿತ್ತು ಅಂದು ಅವರಿಗೆ ? "

" ಅಂದು ತಮ್ಮನ್ನು ರಾಮಮಂದಿರಕ್ಕೆ ಬಿಟ್ಟು ನೇರವಾಗಿ ಆಸ್ಪತ್ರೆಗೆ ಬಂದೆನು. ಅವರು ಮಂದಿರದಲ್ಲಿ ಇಳಿಯದೆ ಹಿಂದಿನ ಸ್ಥಳದಲ್ಲಿ ಕುಳಿತದ್ದು ನನಗೆ ಗೊತ್ತಿದ್ದಿಲ್ಲ. ಕಾರನ್ನು ಬಿಟ್ಟು ನಾನು ಕೆಲಸಕ್ಕೆ ಹೋದೆ. ಅಂದು ಕೆಲಸವಾದರೂ ವಿಶೇಷವಾಗಿದ್ದಿಲ್ಲ. ಅರ್ಧ ಗಂಟೆಯಲ್ಲಿ ಕೆಲಸವನ್ನು ಮುಗಿಸಿಕೊಂಡು ಮನೆಗೆ ಬಂದೆ. ಮನೆಯಲ್ಲಿ ಕಾರು ಬಿಡುವ ಕಾಲಕ್ಕೆ ಚಂದ್ರಿಯು ಕಾರಿನ ಹಿಂದುಗಡೆಯಲ್ಲಿ ಯಾರೋ ಮಲಗಿಕೊಂಡಿರುವರೆಂದು ನನಗೆ ಹೇಳಿದಳು. ನಾನು ಗಾಬರಿಯಾಗಿ ನೋಡಿದೆ. ಪದ್ಮನಾಭರು ಸ್ಮೃತಿಯಿಲ್ಲದೆ ಮಲಗಿಕೊಂಡಿದ್ದರು. ನಾನು ಹಾಗೇ ಕಾರನ್ನು ಆಸ್ಪತ್ರೆಗೆ ತೆಗೆದುಕೊಂಡು ಬಂದೆ. ಆಸ್ಪತ್ರೆಯಲ್ಲಿ ಉಪಚಾರ ಮಾಡಿದ ಮೇಲೆ ಅವರಿಗೆ ಪ್ರಜ್ಞೆ ಬಂದಿತು. "

" ಹೀಗೇಕೆ ಆಯಿತು " ಎಂದು ಪ್ರೇಮನಂದಿನಿಯು ಕೇಳಿದಳು.

" ಮನುಷ್ಯನು ಮನೋವಿಕಾರ ಪರವಶನಾಗಿ ಅಂತರಂಗವು ಬೇಡವೆಂದು ಹೇಳಿದರೂ ಲೆಕ್ಕಿಸದೆ ಪರರನ್ನು ಪೀಡಿಸಿ ಹಿಂಸೆ ಮಾಡುವದರ ಪರಿಣಾಮವಾಗಿ ಒಮ್ಮೊಮ್ಮೆ ಹೀಗಾಗುವದು. ತಾನು ಚಿತ್ರಹಿಂಸೆ ಮಾಡಿದ ಸನ್ನಿವೇಶಗಳಾಗಲೀ ಇಲ್ಲವೆ ಪಶ್ಚಾತ್ತಾಪ ಪಟ್ಟು ಹೃದಯದಲ್ಲಿ ಹುದುಗಿದ್ದ ವಿಚಾರಗಳಾಗಲೀ ಸ್ಮೃತಿಪಥದಲ್ಲಿ ಬಂದು ಕುಣಿಯಹತ್ತಿದರೆ ಬುದ್ಧಿಯು ತನ್ನ ಕ್ರಿಯೆಯನ್ನು ಬಂದು ಮಾಡಿ ಸುಮ್ಮನೆ ಕುಳಿತುಕೊಳ್ಳುವದು. ಹೀಗಾದರೆ ಪ್ರಜ್ಞೆ ತಪ್ಪುವದು " ಎಂದು ವಿದ್ಯಾಚರಣನು ನುಡಿದನು.

" ತಾವು ಹೇಳಿದ್ದು ನನಗೆ ತಿಳಿಯುವದಿಲ್ಲ. ನಾನೇನು ಡಾಕ್ಟರಳಲ್ಲ. ಮೇಲಾಗಿ ಓದಿದವಳಲ್ಲ " ಅಂದಳು ಪ್ರೇಮನಂದಿನಿ.

" ಬುದ್ಧಿಯಿರುವದಿಲ್ಲವೊ ? " ಎಂದು ಕೇಳಿದಳು ಮಧುಮತಿ.

" ಬುದ್ಧಿಯಿದ್ದರೆ ತಿಳಿಯುವದೋ ? " ಎಂದು ಪ್ರೇಮನಂದಿನಿ ಪ್ರಶ್ನೆ ಮಾಡಿದಳು.

" ಮಧುಮತಿ ಮಾತನ್ನು ಬೆಳೆಸಲು ಚತುರ... " ಎಂದಳು ರಂಜನಿ.

" ಅಮ್ಮನು ಸಾಯುವ ಮುಂದೆ ನಿನಗೆ ಹೇಳಿಹೋದಳೆಂದು ತೋರುವದು " ಮಧುಮತಿ ನುಡಿದಳು.

" ಅವಳು ಇದೊಂದೇ ಏಕೆ ಎಷ್ಟೋ ಹೇಳಿ ಹೋಗಿರುವಳು. "

" ರಂಜಿನಿ, ಮತ್ತೇನು ಹೇಳಿರುವಳು ? "

" ಸಮಯ ಬಂದ ಹಾಗೆ ನಾನು ಹೇಳುವೆನು ? "

" ರಂಜನಿಯು ಚೇಷ್ಟೆ ಮಾಡುವದು ನಿನಗೆ ತಿಳಿಯಲಿಲ್ಲವೇ ? " ಎಂದು ವಿದ್ಯಾಚರಣನು ನುಡಿದನು.

" ರಂಜನಿ ಚೇಷ್ಟೆ ಮಾಡುವಳೆಂದು ನನಗೆ ಅನಿಸಿದ್ದಿಲ್ಲ. "

" ಪದ್ಮನಾಭನನ್ನು ಇತ್ತ ಕಡೆಗೆ ಕರೆದುಕೊಂಡು ಬರಬೇಕಾಗಿತ್ತು" ಎಂದು ರಂಜನಿಯು ಪ್ರೇಮನಂದಿನಿಗೆ ಕೇಳಿದಳು.

" ತಮ್ಮೆಲ್ಲರನ್ನು ಕಾಣಲು ಒಮ್ಮೆ ಬರುವೆನೆಂದು ಹೇಳಿರುವರು. ಮಧುಮತಿ ಹಾಗೂ ವಿದ್ಯಾಚರಣರ ಬಗ್ಗೆ ಅವರು ಯಾವಾಗಲೂ ಕೇಳುತ್ತಿರುವರು. ನನಗೆ ಹೆಚ್ಚಾಗಿ ಗೊತ್ತಿಲ್ಲದ ವಿಷಯವಾಗಿದ್ದರಿಂದ ನಾನಾದರೂ ಅವರಿಗೇನು ಹೇಳಬೇಕು? ಕಾಲೇಜಿನಲ್ಲಿ ಉಪನ್ಯಾಸ ಕೊಟ್ಟು ಬಂದ ಮೇಲೆ ಅವರಲ್ಲಿ ಒಂದು ಬಗೆಯ ವಿಚಿತ್ರ ಪರಿವರ್ತನೆಯಾಗುತ್ತಿರುವದೆಂದು ನನಗೇನೋ ಅನಿಸಹತ್ತಿರುವದು. ನಾನು ರಾಮನವಮಿಯನ್ನು ಮಾಡಿದ ಮೇಲೆ ಅವರ ಮುಖದ ಮೇಲೆ ಒಂದು ತರಹದ ಗಂಭೀರಭಾವ ಕಾಣಹತ್ತಿರುವದು. ಒಮ್ಮೊಮ್ಮೆ ಏನೂ ಸಂದರ್ಭವಿಲ್ಲದೆ ವೇದವತಿಯು ಆ ದುಷ್ಟನ ಕೈಯಿಂದ ಮರಣ ಹೊಂದಿದಳಲ್ಲ ! ಎಂದು ಗುಣಗುಡುವರು " ಎಂದು ಪ್ರೇಮನಂದಿನಿಯು ಮಾತನಾಡಿದಳು.

" ಯಾರ ಯಾರ ಜೀವನದಲ್ಲಿ ಏನೇನು ಮಾರ್ಪಾಟವಾಗುವದೋ ಯಾರಿಗೂ ಹೇಳಲಿಕ್ಕೆ ಶಕ್ಯವಿಲ್ಲ " ಎಂದು ರಂಜನಿಯು ಅಂದಳು.

" ಇಂದು ದುಷ್ಟನಿದ್ದ ಮನುಷ್ಯನು ನಾಳೆ ಶಿಷ್ಯನಾಗಬಹುದು,

ಶಿಷ್ಟನು ದುಷ್ಟನಾಗಬಹುದು " ಎಂದಂದನು ವಿದ್ಯಾಚರಣ.

" ಹಾವು ಹಾವಾಗಿಯೇ ಕೊನೆಯುವರೆಗೆ ಉಳಿಯುವಂತೆ ಕೆಲವು ದುಷ್ಟರು ಮರಣದವರೆಗೆ ದುಷ್ಟರಾಗಿಯೇ ಉಳಿಯುವರು " ಎಂದು ಮಧುಮತಿ ನುಡಿದಳು.

" ನೀನು ಹೇಗೆ ಉಳಿಯುವಿ ? " ಎಂದು ಕೇಳಿದಳು ರಂಜನಿ.

" ನಾನು ದುಷ್ಟಳೂ ಅಲ್ಲ; ಶಿಷ್ಟಳೂ ಅಲ್ಲ; ಆದರೆ ಅಸ್ಪಷ್ಟಳು. "

" ಅಸ್ಪಷ್ಟಳೆಂದರೇನು ? " ಎಂದು ಕೇಳಿದಳು ಪ್ರೇಮನಂದಿನಿ.

" ಯಾವುದನ್ನು ನಿರ್ದಿಷ್ಟವಾಗಿ ಹೇಳಲು ಬರುವದಿಲ್ಲವೋ ಅದೇ ಅಸ್ಪಷ್ಟ. ಇದು ಸಹಜವಾದ ಅರ್ಥ " ಮಧುಮತಿ ಉತ್ತರ ಕೊಟ್ಟಳು.

" ಮಾತಿನಲ್ಲಿ ಸಿಗದ ಹುಡುಗಿ " ಅಂದಳು ರಂಜನಿ.

" ವಿದ್ಯಾಚರಣನು ತನ್ನ ಹೆಂಡತಿಯನ್ನು ಎಂದು ಕರೆದುಕೊಂಡು ಬರುವನು ? " ಎಂದು ಪ್ರೇಮನಂದಿನಿಯು ನಗುತ್ತ ಕೇಳಿದಳು.

" ವಿದ್ಯಾಚರಣನ ಲಗ್ನವೆಂದಾಯಿತು " ರಂಜನಿ ಕೇಳಿದಳು.

" ನಿನಗೆ ಗೊತ್ತಿಲ್ಲವೇ ? ಮೊನ್ನೆ ರಾಮನವಮಿಯ ದಿನ " ಎಂದಳು ಮಧುಮತಿ.

" ಎಲ್ಲಿ ? ಯಾರ ಸಂಗಡ ? "

" ಅಮ್ಮನ ಮನೆಯಲ್ಲಿ. ಒಮ್ಮೆ ನಿಶ್ಚಯ ಮಾಡಿದ ಕನ್ಯೆಯೊಡನೆ " ಎಂದು ಮಧುಮತಿ ನುಡಿದಳು.

" ಮೇಧಾತಿನಿಯೊಡನೆಯೋ " ಅಂದಳು ರಂಜನಿ.

" ಅಣ್ಣನನ್ನೇ ಕೇಳು ಯಾರ ಸಂಗಡವೆಂದು ? "

ವಿದ್ಯಾಚರಣನು ಉತ್ತರ ಕೊಡದೆ ಸುಮ್ಮನಿದ್ದನು.

" ರಾಮ ನವಮಿಯ ದಿವಸ ನಾವೆಲ್ಲರೂ ರಾಮಜನನಕ್ಕೆಂದು ಪ್ರೇಮ ನಂದಿನಿಯವರ ಮನೆಗೆ ಹೋಗಿದ್ದೆವು. ಅಂದು ಅಮ್ಮನು ವಿದ್ಯಾಚರಣನ ಕೈಯಲ್ಲಿ ಮೇಧಾವಿನಿಯ ಕೈಯನ್ನು ಕೊಟ್ಟಳು. "

" ಮೇಧಾವಿನಿಯು ಸುಮ್ಮನಿದ್ದಳೋ? " ಕೇಳಿದಳು ರಂಜನಿ.

" ಅಣ್ಣ ಕೈಯನ್ನು ಹಿಡಿದ ಮೇಲೆ ಅವಳು ತಲೆಬಗ್ಗಿಸಿದಳು. ಈರ್ವರೂ ಶ್ರೀರಾಮಚಂದ್ರನ ಭಾವಪಟಕ್ಕೆ ನಮಸ್ಕರಿಸಿದರು. ಮೇಧಾವಿ

ನಿಯು ಅಮ್ಮನಿಗೆ ನಮಸ್ಕಾರ ಮಾಡಿದಳು. ನಾನು ಅವಳ ಜತೆಯಲ್ಲಿ ಹೂವನ್ನು ಮುಡಿಸಿದೆ. "

" ವೇದವತಿಯು ಮರಣ ಕಾಲದಲ್ಲಿ ವ್ಯಕ್ತಮಾಡಿದ ಆಶೆಯನ್ನು ಶ್ರೀರಾಮಚಂದ್ರನು ನನ್ನಿಂದ ಈಡೇರಿಸಿದನು. ಒಬ್ಬರಿಗೊಬ್ಬರು ಒಪ್ಪುವ ದಂಪತಿಗಳು. ಇಬ್ಬರಲ್ಲಿಯೂ ಏನೂ ತೆಗೆಯುವ ಹಾಗಿಲ್ಲ. ಆ ಕಾಲಕ್ಕೆ ಮೇಧಾವಿನಿಯ ಅಣ್ಣ ಗಿರಿಧಾರಿಯು ನಮ್ಮನ್ನು ಕರೆಯಲಿಕ್ಕೆ ಬಂದಿದ್ದನು. ಆತನು ' ಮೇಧಾವಿನಿ ಪುಣ್ಯವಂತಿ ' ಎಂದು ನುಡಿದು ಸಂತೋಷಪಟ್ಟನು. ಬೇಕಾದರೆ ವಿದ್ಯಾಚರಣರನ್ನು ಕೇಳಬಹುದು " ಎಂದು ಪ್ರೇಮನಂದಿನಿಯು ವಿದ್ಯಾಚರಣನನ್ನು ನೋಡಿ ಅಂದಳು.

ವಿದ್ಯಾಚರಣನು ಉತ್ತರ ಕೊಡದೆ ಅಲ್ಲಿಂದೆದ್ದು ಹೋಗಬೇಕೆಂದು ಮಾಡಿದನು. ಇದನ್ನು ಕಂಡು ರಂಜನಿಯು ' ಚರೂ ' ನಿನಗೆ ನಮ್ಮ ಮಾತು ಬೇಜಾರವಾಯಿತೋ " ಎಂದು ಕೇಳಿದಳು.

"ಹಾಗೇನೂ ಇಲ್ಲ, ನಿಮ್ಮ ಮಾತಿನಲ್ಲಿ ನಾನೇನು ಮಾತನಾಡಬೇಕು?"

" ನೀನು ಮಾತನಾಡದಿದ್ದರೆ ಬಿಡು. ಮೇಧಾವಿನಿಯನ್ನಾದರೂ ಕರೆಯಿಸಿ ಮಾತನಾಡಲಿಕ್ಕೆ ಹಚ್ಚು. ಆಮೇಲೆ ನೀನು ಸುಮ್ಮನೆ ಕುಳಿತರೂ ನಡೆಯುವದು " ಎಂದು ಮಧುಮತಿಯು ನಗುತ್ತ ಹೇಳಿದಳು.

" ರಂಜನಿ, ನೀನು ವಿದ್ಯಾಚರಣನಿಗೆ ಏನೆಂದು ಕರೆದೆ ?" ಕೇಳಿದಳು ಪ್ರೇಮನಂದಿನಿ.

" ನಾನು ಚರೂ ಎಂದು ಕರೆದೆ. "

" ವೇದವತಿಯು ಮರಣದ ಸಮಯಕ್ಕೆ ನುಡಿದ ಮೂರು ಅಕ್ಷರಗಳು ನಿನಗೆ ನೆನಪಿಗೆ ಬರುವವೋ ? " ಎಂದು ಪ್ರೇಮನಂದಿನಿಯು ರಂಜನಿಗೆ ಕೇಳಿದಳು.

" ಅವಳು ಚ-ರೂ-ಮೆ ಅಂದದ್ದು ನೆನಪಿಗೆ ಬಂದಿತು. "

" ಅದರ ಅರ್ಥವಾಯಿತೋ ನಿನಗೆ ? "

" ಪೂರ್ಣವಾಗಿಲ್ಲ. "

" ಚರೂ ಅಂದರೆ ವಿದ್ಯಾಚರಣ, ಮೇ ಅಂದರೆ ಮೇಧಾವಿನಿ "ಎಂದು ಪ್ರೇಮನಂದಿನಿಯು ಹೇಳಿದಳು.

ಇದನ್ನು ಕೇಳಿ ಮಧುಮತಿಯು ಆನಂದದಿಂದ ಕುಣಿಯುಹತ್ತಿದಳು.

" ಅಮ್ಮಾ, ನೀನು ಇಂದು ನಮ್ಮಮ್ಮನ ಇಚ್ಛೆಯನ್ನು ಪೂರ್ಣ ಮಾಡಿದೆ. ಚ–ರೂ–ಮೋ ಎಂಬುದನ್ನು ರಂಜನಿಯೂ ಕೇಳಿದ್ದಳು; ನಾನೂ ಕೇಳಿದ್ದೆ. ಆದರೆ ನನಗೆ ಅರ್ಥವಾಗಿದ್ದಿಲ್ಲ. ಅದರ ಅರ್ಥವನ್ನು ತಿಳಿದು ಕೊಂಡು ಹೇಳಿದವಳು ನೀನು. ಅಮ್ಮಾ, ಒಂದು ಮಾತು ನೀನು ವಿಚಾರ ಮಾಡಬೇಕಾಗಿತ್ತು " ಎಂದು ಮಧುಮತಿಯು ನುಡಿದಳು.

ವಿದ್ಯಾಚರಣನು ಆಸ್ಪತ್ರೆಗೆ ವೇಳೆಯಾಯಿತೆಂದು ಅಲ್ಲಿಂದೆದ್ದು ಹೊರಟುಹೋದನು. ಮುಂದೆ ತನ್ನ ಬಗ್ಗೆ ವಿಚಾರ ಮಾಡುವರೋ ಏನೋ ಎಂದು ಊಹಿಸಿ ಹೋದನು.

" ಏನು ವಿಚಾರ ಮಾಡಬೇಕಾಗಿತ್ತು " ಎಂದು ಕೇಳಿದಳು ಪ್ರೇಮ ನಂದಿನಿ.

" ಮೇಧಾವಿನಿಯ ಸಮ್ಮತಿಯನ್ನು ನೀನು ಕೇಳಬೇಕಾಗಿತ್ತು. "

" ನಾನು ಮೊದಲೇ ಕೇಳಿದ್ದೆ. "

" ಎಂದು ? "

" ನೀನು ಒಂದು ದಿನ ವೇದವತಿಯು ಮೇಧಾವಿನಿಯ ಕೈಯನ್ನು ವಿದ್ಯಾಚರಣನ ಕೈಯಲ್ಲಿ ಕೊಟ್ಟು ಅವರ ಕೈಗಳನ್ನು ಗಟ್ಟಿಯಾಗಿ ಹಿಡಿದು ನೋಡಿದಳೆಂದು ನನಗೆ ಹೇಳಿದ್ದಿ. ಅದು ನಿನ್ನ ನೆನಪಿನಲ್ಲಿರಬಹುದು. ಅಂದೇ ಮೇಧಾವಿನಿಯ ಸಮ್ಮತಿಯಿರುವದೆಂದು ತಿಳಿದುಕೊಂಡೆ. ತಿರುಗಿ ಅನುಮತಿಯನ್ನು ಕೇಳುವ ಪ್ರಯೋಜನವೇ ಉಳಿಯುವದಿಲ್ಲ " ಎಂದು ಪ್ರೇಮನಂದಿನಿಯು ನುಡಿದಳು.

" ಇಷ್ಟು ಮಾತ್ರದಿಂದ ಅವಳ ಸಮ್ಮತಿ ಇದೆಯೆಂದು ತಿಳಿಯ ಬೇಕೆ ? "

" ಅದಕ್ಕೆ ಅವಳದು ಅಸಮ್ಮತಿಯಿದ್ದರೆ ರಾಮನವಮಿಯಂದು ನಗುತ್ತ ನಿನ್ನ ಕೈಯಿಂದ ತನ್ನ ನಾಗವೇಣಿಯಲ್ಲಿ ಪೂಮಾಲೆಯನ್ನು ಎಂದೂ ಮುಡಿಸಿಕೊಳ್ಳುತ್ತಿದ್ದಿಲ್ಲ. ಅನುಮತಿಯಿರದಿದ್ದರೆ ವಿದ್ಯಾಚರಣನ ಜೊತೆ ಯಲ್ಲಿ ಅಂದು ನಾಮಕರಣವನ್ನೇ ಮಾಡುತ್ತಿದ್ದಿಲ್ಲ. ಅವಳು ಅಂದು ಅವನ ಸತಿಯಂತೆಯೇ ನಾಮಕರಣ ಮಾಡಲಿಲ್ಲವೇ ? ಅವಳ ಅನುಮತಿ

ಇರುವದೆಂಬುದಕ್ಕೆ ಇಷ್ಟು ಸಾಕಾಗಲಿಲ್ಲವೇ ? ನೀನೇ ಹೇಳು ? ನಿನ್ನ ಮನಸ್ಸಿಗೆ ಒಬ್ಬ ವರನು ಬಂದಿದ್ದರೆ ನೀನು ಶಬ್ದಗಳಿಂದ ಮನಸ್ಸಿಗೆ ಬಂದಿರುವನೆಂದು ಹೇಳುವಿಯಾ ? ಎಂದೂ ಹೇಳುವದಿಲ್ಲ. ಮೌನದಿಂದಲೇ ನಿನ್ನ ಸಮ್ಮತಿಯನ್ನು ತೋರಿಸುವಿ. ಇದು ಹೆಂಗಸರ ಗುಣಧರ್ಮ. ಶಬ್ದಗಳಿಂದಾಡಿ ತೋರಿಸುವವರು ಹೆಂಗಸರಲ್ಲ; ಗಂಡು ಬೀರಿಗಳು" ಎಂದು ಪ್ರೇಮನಂದಿನಿಯು ನುಡಿದಳು.

"ಹೆಂಗಸರಂತೆ ನಯ ಭಯಗಳನ್ನು ತೋರಿಸುತ್ತ ಗಂಡಸರು ನಡೆಯಬೇಕೆಂದು ಪ್ರಯತ್ನ ಮಾಡುವರು. ಹೆಂಗಸರು ಮಾನ ಮರ್ಯಾದೆಗಳನ್ನು ಬಿಟ್ಟು ಗಂಡಸರಂತೆ ನಡೆಯಬೇಕೆಂದು ಅನುಕರಣ ಮಾಡಹತ್ತಿರುವರು" ಎಂದು ಮಧುಮತಿ ಅಂದಳು.

"ಗಂಡು ಹೆಣ್ಣಾಗಬೇಕೆಂದು ಬಯಸುವದು; ಹೆಣ್ಣು ಗಂಡಾಗಬೇಕೆಂದು ಇಚ್ಛಿಸುವದು— ನನಗೆ ತಿಳಿಯದ ಮಾತು. ಯಾವದೇ ಜೀವಕ್ಕೆ ಹೆಣ್ಣು ಎಂಬ ಪಟ್ಟಿಯನ್ನು ಕಟ್ಟಿದರೆ ನಯ, ಭಯ, ಮಾನ ಮರ್ಯಾದೆಗಳು ಬೇಕೇಬೇಕಾಗುವವು. ಸೀತಾಮಾತೆಯಲ್ಲಿ ನಯ ಭಯಗಳಿದ್ದಿಲ್ಲವೋ, ಮಾನಮರ್ಯಾದೆಗಳಿದ್ದಿಲ್ಲವೋ" ಪ್ರೇಮನಂದಿನಿ ನುಡಿದಳು.

"ಅಮ್ಮಾ, ಮಾನ-ಮರ್ಯಾದೆಗಳನ್ನು ಕಲ್ಪಿಸಿದವರು ನಾವಲ್ಲವೇ? ಅವು ನಮ್ಮ ಜನ್ಮದಿಂದ ಬಂದ ಗುಣಗಳೋ ? "

"ಮಾನವು ಜನ್ಮದಿಂದ ಬಂದ ಗುಣ, ಅಹಂಕಾರಕ್ಕೂ ಮಾನಕ್ಕೂ ನಿಕಟ ಸಂಬಂಧ. ಅಹಂಕಾರ ಕವುರಿಸಿದ ಮನುಷ್ಯನು ಯೋಗಿಯಾಗಿರುವನು, ಇಲ್ಲವೆ ಹುಚ್ಚನಾಗಿರುವನು. ಮಾನದ ಮೂಲವೇ ಅಹಂಕಾರ. ಪ್ರತಿಯೊಬ್ಬ ಮನುಷ್ಯನಿಗೆ ಅಹಂಕಾರ ಬೇಕು. ಅಹಂಕಾರವನ್ನು ತ್ಯಜಿಸಿ ಕಾರ್ಯ ಮಾಡಬೇಕೆಂದು ನಾನು ಹೇಳುವದಿಲ್ಲ. ಮಾನ ಬಿಟ್ಟು ನಡೆದರೆ ಹಾನಿ ತಪ್ಪದೆ ಬಿಡದು. ಮಾನವನ್ನು ಕಾಪಾಡಿಕೊಳ್ಳುವದರಲ್ಲಿಯೇ ಮನುಷ್ಯನ ಪ್ರಗತಿ. ಮಾನವಂತನು ಧನವಂತನು. ಮಾನ ಕಳೆದುಕೊಂಡ ಹೆಂಗಸು ಹೀನ, ದೀನ, ಶ್ವಪಚನಾರಿಯಾಗುವಳು. ಮಾನ ಕಳೆದುಕೊಂಡ ನರನು ಕಾಂತಿಹೀನ, ಬುದ್ಧಿಶೂನ್ಯ, ಪ್ರೇತದಂತಾಗುವನು.

ದುರಭಿಮಾನವಾಗಬಾರದು. ದುರಭಿಮಾನವೇ ಮಾನವನ ಪುರುಷಾರ್ಥ ವನ್ನು ನಾಶಮಾಡತಕ್ಕದ್ದು" ಎಂದು ಪ್ರೇಮನಂದಿನಿಯು ಮಾತನಾಡಿ ದಳು.

"ಅಮ್ಮಾ, ನೀನು ಕಾಲೇಜ ಕಟ್ಟೆಯನ್ನು ಏರದವಳು. ಎಲ್ಲಿಂದ ಇಷ್ಟು ಕಲಿತೆ? ನಿನ್ನ ಮಾತುಗಳು ನಮ್ಮಲ್ಲಿಯ ಪ್ರಾಧ್ಯಾಪಕರಿಗಾದರೂ ತಿಳಿಯು ವವೋ ಇಲ್ಲವೋ ಎಂಬುದು ಸಂಶಯ."

"ಮಗೂ, ಇದೆಲ್ಲ ಜೀವನದ ಅನುಭವದಿಂದ ಬರುವದು. ಓದಿ ಕಲಿತರೆ ಬರುವದಿಲ್ಲ. ಅದಕ್ಕಾಗಿಯೇ ಹಿರಿಯರ ಅನುಭವದ ಮಾತುಗ ಳನ್ನು ಕೇಳಬೇಕೆಂದು ಹೇಳಿದ್ದು. ಮರ್ಯಾದೆ ಜೀವನಕ್ಕೆ ಅಂಟಿ ಕೊಂಡದ್ದು. ದೇವರು ಪ್ರತಿಯೊಂದಕ್ಕೆ ಮಿತಿಯನ್ನು ಹಾಕಿರುವನು. ಸಜ್ಜನರು ಮಿತಿಯನ್ನು ದಾಟುವದಿಲ್ಲ. ಮಿತಿಯನ್ನು ಮೀರುವವರು ದುರ್ಜನರು."

"ಹೆಂಗಸಿಗೆ ಮಿತಿಯನ್ನು ದಾಟಿ ನಡೆಯಲಿಕ್ಕೆ ಹಚ್ಚುವವನು ಗಂಡ ಸಲ್ಲವೇ?"

"ಹೆಂಗಸು ದಾಟುವೆನೆಂದು ಅನುಮತಿಯನ್ನಿತ್ತರೆ ಮಾತ್ರ ಗಂಡಸು ಮಿತಿಯನ್ನು ದಾಟಲಿಕ್ಕೆ ಹಚ್ಚುವನು. ಗಂಡಸಿನಲ್ಲಿ ತಪ್ಪು ಇರುವದು, ಇಲ್ಲವೆನ್ನುವದಿಲ್ಲ. ಆದರೆ ಹೆಂಗಸಿನಲ್ಲಿ ತಪ್ಪು ಹೆಚ್ಚಾಗಿರುವದು. ಸುವಾ ಸನೆಯ ಹೂವನ್ನು ಕಂಡರೆ ಹರಿಯಬೇಕೆಂದು ಪ್ರತಿಯೊಬ್ಬನಿಗೆ ಆಶೆ ಹುಟ್ಟುವದು. ಅದನ್ನು ಹರಿದರೆ ಯಜಮಾನನು ಬೈಯುವದಿಲ್ಲವೆಂದು ಗೊತ್ತಾದರೆ ಕಂಡವರು ಅದನ್ನು ಹರಿಯುವರು. ಆದರೆ ಅದರ ಹತ್ತರ ಒಂದು ಸರ್ಪ ಕುಳಿತಿದ್ದರೆ ಆ ಹೂವಿನ ಸಮೀಪಕ್ಕೆ ಹೋಗುವದಂತೂ ದೂರ ಉಳಿಯಿತು. ದೂರದಿಂದಲೇ ಓಡಿ ಹೋಗುವರು. ಇದು ಪ್ರತಿ ಯೊಬ್ಬ ಮನುಷ್ಯನ ಗುಣಧರ್ಮ. ನಯ, ಭಯ, ಮಾನ, ಮರ್ಯಾದೆ– ಇವು ನಾರಿಯ ಹತ್ತರ ಒಂದು ಸರ್ಪವಿದ್ದಂತೆ. ಮಿತಿಗೆಟ್ಟ ಹೆಂಗಸರು ಅಸ್ವಾಮಿತ್ವ ಹೂವಿದ್ದಂತೆ."

"ಪ್ರೇಮಕ್ಕೆ ಮಾನ ಮರ್ಯಾದೆ ಇರುವವೋ?" ಕೇಳಿದಳು ಮಧು ಮತಿ.

" ಮಾನ-ಮರ್ಯಾದೆ ಇರುವವು. "

" ಕೃಷ್ಣನ ಗೋಪಿಯರಿಗೆ ಮಾನಮರ್ಯಾದೆಗಳಿದ್ದವೋ ? "

" ಲೈಂಗಿಕ ಆಕರ್ಷಣೆಗೆ ನೀವು ಪ್ರೇಮವೆನ್ನುವಿರಿ. ಇಂದ್ರಿಯಗಳ ದಾಹಕ್ಕೂ ನೀವು ಪ್ರೇಮವೆನ್ನುವಿರಿ. ಅದು ಪ್ರೇಮವಲ್ಲ, ಅದು ವಿಕಾರ, ವಿಷಯಲೋಲುಪತೆ. ದೇಹದ ಆಕರ್ಷಣೆಯಿಂದ ಉದ್ಭವಿಸಿದ್ದು ಪ್ರೇಮ ವಲ್ಲ. ದೇಹದ ಆಕರ್ಷಣೆ ಅತಿ ಅನಿಶ್ಚಿತ, ಅತಿನಶ್ವರ. ಪ್ರೇಮ ಅನಿಶ್ಚಿ ತವಲ್ಲ, ನಶ್ವರವಲ್ಲ. ಜೀವನದ ಕೊನೆಯ ಉಸುರಿನಲ್ಲಿ ಪ್ರೇಮದ ಲೀನ. ಹುಗನ ದೇಹವನ್ನು ಕಂಡು ತಾಯಿಯು ತನ್ನ ಪ್ರೇಮವನ್ನು ತೋರಿಸು ವಳೋ ? ಮಗನಲ್ಲಿ ಎಷ್ಟೇ ದುರ್ಗುಣಗಳಿದ್ದರೂ, ಮಗನು ಎಷ್ಟೇ ವಿಕೃತ ನಿದ್ದರೂ ತಾಯಿಯು ತನ್ನ ಮಗನನ್ನು ಪ್ರೀತಿಸುವದಿಲ್ಲವೋ? ಪುತ್ರ ಪ್ರೇಮ ದಿಂದ ನೋಡುವದಿಲ್ಲವೋ ? ಪ್ರೇಮದಲ್ಲಿ ಗುಣಾವಗುಣಗಳ ಅಂಶವಿರುವ ದಿಲ್ಲ. ಪ್ರೇಮದಲ್ಲಿ ವಿಕೃತಿ-ಸುಕೃತಿಗಳ ಸಂಚಾರವಿರುವದಿಲ್ಲ. ಅದು ಹೃದಯದಿಂದ ಹರಿಯುವ ಝರಿ. ಜೀವವಿರುವವರೆಗೆ ಬತ್ತಲಾರದ ಝರಿ. "

" ದಾಂಪತ್ಯ ಜೀವನದಲ್ಲಿ ಪ್ರಥಮ ದೃಷ್ಟಿಯಲ್ಲಿ ಪ್ರೇಮ ಹುಟ್ಟಿತೆಂದು ತಿಳಿಯುವದು ಮನುಷ್ಯನ ಅಧೋಗತಿಗೆ ಕಾರಣ. ಹೆಣ್ಣಿನಲ್ಲಿ ಒಳ್ಳೇ ಪರಿ ಚಯವಿರಬೇಕು. ದಿನಗಳು ಗತಿಸಿದಂತೆ ಅನುಕಂಪ ಹುಟ್ಟುವದು; ಅನು ಕಂಪದಿಂದ ಅನುರಾಗಬರುವದು. ಅನುರಾಗದಿಂದ ಪ್ರೀತಿ, ಪ್ರೀತಿಯಿಂದ ಪ್ರೇಮ— ಹೀಗೆ ಬೆಳೆಯುತ್ತ ಹೋದರೆ ಪ್ರೇಮ ಬರುವದು.

ಮೇಧಾವಿನಿ-ವಿದ್ಯಾಚರಣರಲ್ಲಿ ಮೊದಲು ಪರಿಚಯವಾಯಿತು. ಅನು ಕಂಪದಿಂದ ಪರಸ್ಪರರನ್ನು ನೋಡಹತ್ತಿದರು. ಈ ಪರಸ್ಪರ ಅನುಕಂ ಪವೇ ಅವರಲ್ಲಿ ಅನುರಾಗ ಹುಟ್ಟಿಸಿತು. ಅನುರಾಗ ದೃಷ್ಟಿಯಿಂದಲೇ ಅವ ರೀರ್ವರಲ್ಲಿ ಒಂದು ತರಹದ ಪ್ರೀತಿ ಬೆಳೆಯತೊಡಗಿತು. ಈ ಪ್ರೀತಿಯಿಂ ದಲೇ ಅವರಿಬ್ಬರೂ ಅಂದು ನನ್ನ ಮಾತಿಗೆ ಸಮ್ಮತಿಸಿದರು. "

ಎಂದು ಪ್ರೇಮನಂದಿನಿಯು ಮಾತನಾಡಿದಳು.

" ಇಷ್ಟು ಸೂಕ್ಷ್ಮವಾಗಿ ನಾನು ನಿರೀಕ್ಷಿಸಿಲ್ಲ; ನಿರೀಕ್ಷಿಸಿದರೂ ನನಗೆ ತಿಳಿಯುವ ಹಾಗಿಲ್ಲ; ಹೊಳೆಯುವಂತಿಲ್ಲ. ನನಗೆ ಜೀವನದ ಅನುಭವ

ವಿಲ್ಲ" ಎಂದು ಮಧುಮತಿಯು ಪ್ರೇಮನಂದಿನಿಯ ಮೊಗವನ್ನು ನೋಡುತ್ತ ನುಡಿದಳು.

" ಇದನ್ನು ಮೇಧಾವಿನಿಯು ಅರಿತಿದ್ದಳೋ ಇಲ್ಲೋ ನನಗೆ ಗೊತ್ತಿಲ್ಲ. " ನುಡಿದಳು ಪ್ರೇಮನಂದಿನಿ.

" ಮಧುಮತಿ " ಎಂದು ಕರೆಯುತ್ತ ಗಿರಿಧಾರಿಯು ಬಂದನು.

" ಬನ್ನಿ; ಬನ್ನಿ; ಮೃತಧಾರಿಗಳೇ ಒಳಗೆ ಬನ್ನಿ " ಎಂದು ಮಧುಮತಿ ಕರೆದಳು.

ಗಿರಿಧಾರಿಯು ಅವಸರದಿಂದ ಬಂದ ಹಾಗೆ ಕಂಡಿತು. ಅತ್ತಿತ್ತ ಆತ ನೋಡಿದನು. ಆತನಿಗೆ ಬೇಕಾದದ್ದು ವಿದ್ಯಾಚರಣ.

" ಏನು ಸಮಾಜಸೇವಕರೇ ಇಷ್ಟೇಕೆ ಗಾಬರಿಯಾಗಿ ಸುತ್ತಲೂ ನೋಡುತ್ತೀರಿ. ಕುಳಿತುಕೊಳ್ಳಿ " ಎಂದು ಮಧುಮತಿಯು ಹೇಳಿದಳು.

" ಪದ್ಮನಾಭರ ಪ್ರಕೃತಿಯ ಬಗ್ಗೆ ವಿಚಾರಿಸಲು ಅವರ ಮನೆಗೆ ಹೋಗಿದ್ದೆ. ಪದ್ಮನಾಭರು ಓದುತ್ತ ಹಾಸಿಗೆಯ ಮೇಲೆ ಮಲಗಿಕೊಂಡಿದ್ದರು. ಅವರಿಗೆ ಪ್ರಕೃತಿಯ ಬಗ್ಗೆ ಕೇಳಿದೆ. ಅಷ್ಟು ಉತ್ತೇಜನಕರ ಉತ್ತರ ಅವರಿಂದ ನನಗೆ ಸಿಗಲಿಲ್ಲ. ನನ್ನ ನಾಲ್ಕು ಮಾತುಗಳಿಗೆ ಅವರು ಒಂದೇ ಶಬ್ದ ಉತ್ತರ ಕೊಟ್ಟರು. ಮುಖವು ಗಂಭೀರವಾಗಿತ್ತು. ಪ್ರೇಮನಂದಿನಿಯು ಮನೆಯಲ್ಲಿ ಇರಲಿಲ್ಲ. ವಿದ್ಯಾಚರಣನನ್ನಾದರೂ ಕೇಳಿಕೊಂಡು ಹೋಗಬೇಕೆಂದು ಇಲ್ಲಿಗೆ ಬಂದೆನು " ಎಂದು ಗಿರಿಧಾರಿಯು ನುಡಿದನು.

" ಅವರ ಪ್ರಕೃತಿಯು ಚನ್ನಾಗಿರುವದು. ನಾನು ಅದನ್ನೇ ಹೇಳಲಿಕ್ಕೆಂದು ಇಲ್ಲಿಗೆ ಬಂದೆನು " ಎಂದು ಪ್ರೇಮನಂದಿನಿಯು ಅಂದಳು.

" ಇನ್ನು ಮೇಲೆ ನಾನು ನಿಮಗೆ ಸಮಾಜಸೇವಕರೆಂದು ಕರೆಯಬೇಕೋ ಸಮಾಜ ಭೂಷಣರೆಂದು ಕರೆಯಬೇಕೋ ತಿಳಿಯದು." ಎಂದು ಮಧುಮತಿ ಗಿರಿಧಾರಿಗೆ ಹೇಳಿದಳು.

" ನಿನ್ನ ಮನಸ್ಸು ಯಾವುದರಿಂದ ತೃಪ್ತಿಯಾಗುವದೋ ಅದನ್ನು ನೀನು ಕರೆಯಬೇಕು. ನನಗೆ ಏನು ಕರೆದರೂ ಅಷ್ಟೇ. "

- " ಪ್ರೇಮನಂದಿನೀ, ನನ್ನ ತಂದೆಯನ್ನು ತಾವು ಕ್ಷಮಿಸಬೇಕು " ಎಂದು ಗಿರಿಧಾರಿಯು ಕೇಳಿಕೊಂಡನು.

ಪ್ರೇಮನಂದಿನಿಯು ಗಾಬರಿಯಾಗಿ 'ಏಕೆ' ಎಂದು ಕೇಳಿದಳು.

" ಮೊನ್ನೆ ರಾಮಮಂದಿರದ ಹೊರಗೆ ಕುಮಾರಿಲಭಟ್ಟರು ನಿನ್ನ ಸಂಗಡ ಅಯೋಗ್ಯ ರೀತಿಯಿಂದ ನಡೆದುಕೊಂಡದ್ದಕ್ಕೆ ಕೇಳುತ್ತಿರಬಹುದು " ಎಂದು ಮಧುಮತಿ ಅಂದಳು.

" ಅವರೇನು ಅಯೋಗ್ಯರೀತಿಯಿಂದ ನಡೆದುಕೊಂಡಿಲ್ಲ. ಅವರಿಗೆ ಅನಿಸಿದ್ದನ್ನು ಅವರು ಕೇಳಿದರು. ಅದರಲ್ಲಿ ಅವರದೇನು ತಪ್ಪು? " ಪ್ರೇಮನಂದಿನಿ ನುಡಿದಳು.

" ಅವ್ವಾ, ವೇದಘೋಷ ಮಾಡಿ ಭಟ್ಟರು ದಣಿದಂತೆ ತೋರಿತು. ಬುದ್ಧಿಯು ವೇದದಲ್ಲಿ ಓಡಿ ಹೋಗಿದ್ದಂತೆ ಕಂಡಿತು. ಹೆಂಗಸರ ಮೋರೆಯನ್ನು ಎಂದೂ ನೋಡದ ಬೆಪ್ಪನಂತೆ ನಿನ್ನನ್ನು ನೋಡುತ್ತ ನಿಂತರು. ಇದೇ ಒಂದು ಅನಪೇಕ್ಷಿತ ಸಂಗತಿ " ಎಂದು ಮಧುಮತಿಯು ಅಂದಳು.

" ಅವರು ನನ್ನನ್ನು ನೋಡಿದರೆ ಅವರ ಮೇಲೇಕೆ ತಪ್ಪು ಹೊರಿಸುವದು ? "

" ಅವರ ಕಣ್ಣುಗಳ ತಪ್ಪೋ ? "

" ನನ್ನ ತಂದೆಯ ಬುದ್ಧಿಯ ತಪ್ಪು " ಎಂದು ಗಿರಿಧಾರಿ ನುಡಿದನು.

" ಮನುಷ್ಯನಿಗೆ ಒಮ್ಮೊಮ್ಮೆ ಬುದ್ಧಿ ಕುಂಠಿತವಾಗುವದು " ಎಂದು ಪ್ರೇಮನಂದಿನಿಯು ಉತ್ತರವಿತ್ತಳು.

" ಇತ್ತೀಚೆಗೆ ಅವರ ಬುದ್ಧಿ ಯಾವಾಗಲೂ ಶೂನ್ಯದಲ್ಲಿಯೇ ಚಕ್ರ ಹೊಡೆಯುತ್ತಿರುವದು " ಎಂದು ಮಧುಮತಿ ನುಡಿದಳು.

" ನನ್ನ ತಂದೆಯ ಗುಟ್ಟು ಜನಗಳಾಡುವದರ ಮೇಲಿಂದ ಗೊತ್ತಾಯಿತು. ಅವರು ತಮ್ಮ ಪೂರ್ವಾಶ್ರಮದಲ್ಲಿ ಹೀನ ಕೃತ್ಯ ಮಾಡಿದರೆಂದು ಅವರ ಹಿಂದೆ ಗುಜುಗುಜು ಮಾತನಾಡುತ್ತಿದ್ದರು. ಅವರ ಮಾತುಗಳನ್ನು ನಾನು ಕಿವಿಯಲ್ಲಿ ಹಾಕಿಕೊಳ್ಳಲಿಲ್ಲ. ಕೇಳಿದರೂ ಕೇಳದವನಂತೆ ನಾನು ಹೋಗುತ್ತಿದ್ದೆನು. "

" ಜನಗಳೇನು ಎಲ್ಲರ ಬಗ್ಗೆ ಏನಾದರೊಂದು ಮಾತನಾಡುವವರೇ. ಕಾಲಕಳೆಯಲು ಅವರಿಗೆ ಏನಾದರೊಂದು ವಿಷಯ ಬೇಕಲ್ಲವೇ " ಎಂದು ಪ್ರೇಮನಂದಿನಿ ನುಡಿದಳು.

" ಜನಗಳ ಮಾತುಗಳು ಒಂವೇ ಠಾನದಲ್ಲಿ ಕೂಡಿದರೆ ಅವಕ್ಕೆ ಮಹತ್ವ ಕೊಡಬೇಕಾಗುವದಿಲ್ಲವೇ ? "

"ಎಷ್ಟೋ ಅಷ್ಟೇ ಕೊಡಬೇಕಾಗುವದು" ಅಂದಳು ಪ್ರೇಮನಂದಿನಿ.

" ವಿಷಯದ ಮಹತ್ವದಂತೆ ಸ್ಥಾನಬೇಕಲ್ಲವೇ ? "

" ಸಣ್ಣ ವಿಷಯವನ್ನು ಅತಿದೊಡ್ಡದಾಗಿ ಮಾಡಿ ಹೇಳುವದು ಜನ ಸಾಮಾನ್ಯರ ಸಹಜವಾದ ಸ್ವಭಾವ. ಎಷ್ಟು ದೊಡ್ಡದಾಗಿ ಮಾಡಿ ಹೇಳುವರೋ ಅಷ್ಟು ನಂಬಲು ಸುಲಭವೆಂದು ತಿಳಿದುಕೊಳ್ಳುವರು. ಇದು ಸಾಮಾನ್ಯ ಮನುಷ್ಯನ ವಿಷಯ " ಎಂದು ಪ್ರೇಮನಂದಿನಿಯು ಗಿರಿಧಾರಿಗೆ ಹೇಳಿದಳು.

" ಆವರು ಹಿಂದೆ ಏನು ಮಾಡಿರುವರೆಂದು ವದಂತಿಯಿರುವದು " ಎಂದು ಗಿರಿಧಾರಿಗೆ ಮಧುಮತಿಯು ಕೇಳಿದಳು.

" ಅವರೇನು ಮಾಡುವದು, ಯೌವನದಲ್ಲಿ ಲೈಂಗಿಕ ವ್ಯವಹಾರ. "

" ಇದನ್ನು ಯಾರೂ ನಂಬದ ಮಾತು " ಅಂದಳು ಮಧುಮತಿ.

" ಮಾಡಿದ್ದು ಮಾಡದವನಂತೆ ನಟಿಸುವದೇ ಈಗಿನ ಸಜ್ಜನರ ನಡಾವಳಿ. ಪಾಪವನ್ನು ಮಾಡಿ ಪುಣ್ಯಪಡೆದವರಂತೆ ವರ್ತಿಸುವದು ಈಗಿನ ಸಜ್ಜನರ ನಡತೆ. ಅಪ್ಪನ ನಡತೆ, ಅಪ್ಪನ ಗತ್ತುಗಾರಿಕೆ ಅಮ್ಮನಿಗೆ ಗೊತ್ತಿರಬಹುದು " ಎಂದು ಗಿರಿಧಾರಿ ನುಡಿದನು.

" ಕುಮಾರಿಲಭಟ್ಟರ ಅಂತಹ ನಡತೆಯಾದರೂ ಯಾವದು ? "

" ಅಂದು ವೇದಘೋಷ ಮಾಡಿದವರು ಇವರ ತಂದೆಯೋ ? " ಕೇಳಿದಳು ಪ್ರೇಮನಂದಿನಿ.

" ಭಸ್ಮ ಬಡಿದುಕೊಂಡ ಭಸ್ಮಾಸುರ ಭಟ್ಟರೇ ಗಿರಿಧಾರಿಯ ತಂದೆ. ಮೇಧಾವಿನಿಯ ತಾತ " ಎಂದು ಮಧುಮತಿ ಹೇಳಿದಳು.

" ವೇದ ಪಾರಂಗತರೆಂದು ಕಾಣುವದು " ಅಂದಳು ಪ್ರೇಮನಂದಿನಿ.

" ವೇದ ಪಾರಂಗತರು, ಬಾಹ್ಯದಲ್ಲಿ ನಿಪುಣರು, ವೆಜ್ಜದಲ್ಲಿ ಜಿಪುಣರು ಜೀವಹಂತಕರು, ಹೆಂಗಸರನ್ನು ಹೀಯಾಳಿಸುವದರಲ್ಲಿ ಹಿರಿಯರು, ಗಂಡಸರನ್ನು ಹೊಗಳುವದರಲ್ಲಿ ಹೆಗ್ಗಾಳಿಗಳು " ಎಂದು ಕುಮಾರಿಲಭಟ್ಟರನ್ನು ಮಧುಮತಿ ಹೊಗಳಿದಳು.

" ನನ್ನ ತಂದೆಯನ್ನು ಕಂಡರೆ ಮಧುಮತಿಗೆ ಬೆಂಕಿ. ನೀರನ್ನು ಹಾಕಲು ಮೇಧಾವಿನಿಯೇ ಬರಬೇಕು. "

" ನಿಮ್ಮ ತಂದೆಯವರು ಚಳವಳಿಯಲ್ಲಿ ಭಾಗ ತೆಗೆದುಕೊಂಡಿದ್ದರೆಂದು ಅನ್ನುವದು " ಎಂದು ರಂಜನಿ ನುಡಿದಳು.

" ಚಳವಳಿಯಲ್ಲಿ ಭಾಗ ತೆಗೆದುಕೊಂಡಿದ್ದು ಬಹಳೇ ಹಳೆಯ ಮಾತು. ತಮ್ಮ ಯೌವನದಲ್ಲಿ ಮನೆಬಿಟ್ಟು ಓಡಿ ಹೋಗಿ ಭಾಗತೆಗೆದುಕೊಂಡಿದ್ದರೆಂದು ಅಮ್ಮ ಹೇಳುವಳು. ನಾನು ಆಗ್ಗೆ ಇನ್ನೂ ಚಿಕ್ಕವನಿದ್ದೆನಂತೆ " ಅಂದನು ಗಿರಿಧಾರಿ.

" ಚಳವಳಿಯಲ್ಲಿ ದೇಶಭಕ್ತರಾದದ್ದು ಭಟ್ಟರು ನಿನಗೆ ಒಮ್ಮೆಯಾದರೂ ಹೇಳಿಲ್ಲವೇ ? ತಮ್ಮ ಪೌರುಷವನ್ನು ನಿನ್ನೆದುರಿಗೆ ಕೊಚ್ಚಿಲ್ಲವೇ ? "

" ತಂದೆ ಮಗನೆದುರಿಗೆ ಎಂದೂ ಪೌರುಷವನ್ನು ಹೇಳಲಾರನು. "

" ಅವರಿಗೆ ಜೇಲು ವಾಸವಾಗಿರುವದೋ " ಕೇಳಿದಳು ಮಧುಮತಿ.

" ಐದು ತಿಂಗಳು ಜೇಲಿಗೆ ಹೋಗಿದ್ದರಂತೆ. "

" ಅಂತೂ ಪೂರ್ಣ ದೇಶಭಕ್ತರಾದರು " ನುಡಿದಳು ಮಧುಮತಿ.

" ಆಗಿನ ಕಾಲಕ್ಕೆ ಜೇಲಿನ ಮುಂದಿನ ನಾಯಿಯೂ ದೇಶಭಕ್ತವಾಯಿತು. ಆ ನಾಯಿಯು ಇಂದು ಎಲ್ಲರನ್ನು ಕಚ್ಚುತ್ತ ತಿರುಗಾಡುವದು " ಗಿರಿಧಾರಿ ಅಂದನು.

" ಅವರು ನಾಯಿ ಆದರೇನು ? " ಕೇಳಿದಳು ಮಧುಮತಿ.

" ಅವರಲ್ಲ, ಅವರ ಹಾಗೆ ಜೇಲಿಗೆ ಹೋಗಿ ಇಂದು ಮೆರೆಯುವ ದೇಶಭಕ್ತರು " ಗಿರಿಧಾರಿ ನುಡಿದನು.

" ಎಲ್ಲರಿಗೂ ಒಂದು ಕಾಲ, ಚಳವಳಿಯಲ್ಲಿ ಕುಮಾರಿಲಭಟ್ಟರು ಏನು ಮಾಡಿದರು ? ಅಲ್ಲಿ ತಮ್ಮ ವೈದಿಕ ವೃತ್ತಿಯನ್ನು ಮಾಡಿದರೋ ? " ಕೇಳಿದಳು ಮಧುಮತಿ.

" ಅವರು ಅಲ್ಲಿ ಏನು ಮಾಡಿದರೆಂಬುದು ನನಗೆ ಗೊತ್ತಿಲ್ಲ. ಅವರು ಹೋದದ್ದು ಉತ್ತರ ಕನ್ನಡ ಜಿಲ್ಲೆಗೆ. ಅಲ್ಲಿ ಹಳ್ಳಿಗರಲ್ಲಿ ಸತ್ಯಾಗ್ರಹ ಪ್ರಚಾರ ಮಾಡುವದಕ್ಕಾಗಿ ಹೋಗಿದ್ದರಂತೆ. ಹಳ್ಳಿಯಿಂದ ಹಳ್ಳಿಗೆ ಅಲೆಯುತ್ತಿದ್ದಾಗ ಪೋಲೀಸರ ಕೃಪಾಕಟಾಕ್ಷ ಅವರ ಮೇಲೆ ಬಿದ್ದಿತು.

" ಅಲ್ಲಿ ಕುಮಾರಿಲಭಟ್ಟರು ಚೆನ್ನಾಗಿ ಹೆಸರನ್ನು ಪಡೆದಿರಬಹುದು. ಅವರ ಪರಿಚಯು ಹಳ್ಳಿಗರಿಗೆ ಚೆನ್ನಾಗಿ ಆಗಿರಬಹುದು. "

" ಅಲ್ಲಿಯು ಜನರಿಗೆ ಇವರು ತಮ್ಮ ಹೆಸರು ಕುಮಾರಿಲಭಟ್ಟರೆಂದು ಹೇಳಿದಂತೆ ತೋರುವದಿಲ್ಲ. ಅವರು ಅಲ್ಲಿ ಬೇರೆ ಯಾವದೋ ಒಂದು ಹೆಸರಿನಿಂಧ ಕೆಲಸ ಮಾಡುತ್ತಿದ್ದರೆಂದು ನನಗೆ ಗೊತ್ತಾಯಿತು. ಆ ಹೆಸರು ಯಾವುದೆಂಬುದು ನನಗೆ ನೆನಪಾಗಲೊಲ್ಲದು " ನುಡಿದನು ಗಿರಿಧಾರಿ.

" ಭಟ್ಟರು ಸುಳ್ಳು ಹೇಳುವ ತಮ್ಮಾಟವನ್ನು ಅಲ್ಲಿಯೂ ಬಿಡಲಿಲ್ಲ ವೆಂಬು ತೋರುವದು. ಭಟ್ಟರು ಬಲು ಗಟ್ಟಿಗರು " ಮಧುಮತಿ ಅಂದಳು.

" ಒಬ್ಬ ಬಾಲವಿಧವೆಯನ್ನು ತಮ್ಮ ಜಾಲದಲ್ಲಿ ಎಳೆದುಕೊಂಡರೆಂದು ದಟ್ಟವಾದ ವದಂತಿ ಇದೆ. ಪಾಪ ! ಆ ವಿಧವೆಯೊಡನೆ ಸರಸ ಸಲ್ಲಾಪದಲ್ಲಿ ಲೀನರಾಗಿ ಚಳವಳಿಯನ್ನೂ ಮರೆತರು. ದೇಶಭಕ್ತಿಯನ್ನು ತಮ್ಮ ಕಾಮ ಕುಂಡದಲ್ಲಿ ಹೋಮಮಾಡಿ ವಿಧವೆಯ ಭಕ್ತರಾದರು " ಗಿರಿಧಾರಿ ಹೇಳಿದನು.

ಈ ಮಾತುಗಳನ್ನು ಕೇಳುತ್ತಿದ್ದ ಪ್ರೇಮನಂದಿನಿಯು ಆತುರದಿಂದ ಕುಳಿತುಕೊಂಡಳು. ಮುಂದೇನೆಂದು ಕೇಳಲು ಮನದಲ್ಲಿ ಹಾತೊರೆದಳು.

" ಪಾಪ ! ಆ ಬಾಲವಿಧವೆ ಗರ್ಭಿಣಿಯಾದಳು. ಲಗ್ನವಾಗುವೆನೆಂದು ಆ ಬಾಲ ಮುಂಡೆಗೆ ಹೇಳಿದ್ದನೆಂದು ಆ ಹಳ್ಳಿಯ ಜನರು ಇವತ್ತಿಗೂ ಆಡಿ ಕೊಳ್ಳುತ್ತಾರೆ. ಮುಂದ ಆವರಿಗೆ ಏದು ತಿಂಗಳ ಜೇಲುವಾಸವಾಯಿತು."

" ಜೇಲಿನಲ್ಲಿ ಊಟಕ್ಕೇನು ಮಾಡಿದರು ? " ಮಧುಮತಿ ಕೇಳಿದಳು.

" ಜೇಲಿನ ಊಟವನ್ನೇ ಮಾಡಿದರು. "

" ಕುಲವು ಕೆಟ್ಟು ಹೋಗಲಿಲ್ಲವೇ ಆ ಊಟದಿಂದ. "

" ಈಗಿನ ಕಾಲದಲ್ಲಿ ಕುಲವು ಕೆಡುವದಿಲ್ಲ. ಯಾರಿಗೂ ಕುಲವೇ ಇರುವದಿಲ್ಲ, ಕೆಡುವ ಬಗೆ ಹೇಗೆ ? "

" ಕುಮಾರಿಲಭಟ್ಟರು ನಿನ್ನ ಆ ಇನ್ನೊಬ್ಬ ತಾಯಿಯನ್ನು ಕರೆದು ಕೊಂಡು ಬರಲಿಲ್ಲವೇ ? ಅವಳು ತನ್ನ ಪಾದಧೂಳಿಯನ್ನು ನಿಮ್ಮ ಮನೆ ಯಲ್ಲಿ ಹಾಕಲಿಲ್ಲವೇ. " ಎಂದು ಕೇಳಿದಳು ಮಧುಮತಿ.

" ಜೇಲಿನಿಂದ ಬಿಡುಗಡೆಯಾಗಿ ಬಂದಮೇಲೆ ಆ ವಿಧವೆಯ ಊರಿಗೆ ಅವಳನ್ನು ಭೆಟ್ಟಿಯಾಗಲು ಹೋದರು. "

" ಮುಂದೇನು ಮಾಡಿದರು ? "

" ಅವಳಿಗೆ ದಿನಗಳು ತುಂಬಿದ್ದವು. ಅದನ್ನು ಕಂಡು ಬೆರಗಾದರು. ವಿಧವೆಗೆ ಏನೋ ಸುಳ್ಳು ನೆವ ಹೇಳಿ ತಮ್ಮೂರಿಗೆ ಪಲಾಯನ ಮಾಡಿದರೆಂದು ಜನರು ಮಾತನಾಡುವರು. "

" ಅವಳನ್ನು ಬಿಟ್ಟು ಓಡಿ ಬಂದರೋ ? " ಎಂದು ಆಶ್ಚರ್ಯದಿಂದ ಮಧುಮತಿ ಕೇಳಿದಳು.

" ಮೈಮೇಲೆ ಬರುವದೆಂದು ಓಡಿಬಂದಿರಬಹುದು. "

ಪ್ರೇಮನಂದಿನಿಯ ಕಣ್ಣೊಳಗಿಂದ ಹನಿಗಳು ಪಟಪಟನೆ ಉದುರಹತ್ತಿದವು. ಉದುರುವ ಹನಿಗಳನ್ನು ಕಂಡು ' ಅಮ್ಮಾ ದುಃಖವೇಕೆ ?' ಎಂದು ಕೇಳಿದಳು.

" ಜೀವನದಲ್ಲಿ ದುಃಖಿಗಳ ಗತಿಯನ್ನು ಕಂಡು " ಅಂದಳು ಪ್ರೇಮನಂದಿನಿ.

" ಮುಂದೆ ಆ ವಿಧವೆಯ ಗತಿ ? " ಎಂದು ಮಧುಮತಿ ಗಿರಿಧಾರಿಗೆ ಕೇಳಿದಳು.

" ಅವಳಿಗೆ ದೇವರೇ ಗತಿ. ಹಳ್ಳಿಯ ಜನರು ಇದನ್ನು ಕಂಡು ಮಿಡುಕಿದರು. ಆ ವಿಧವೆಗೆ ಯಾರೂ ಸಹಾಯ ಮಾಡಲು ಮುಂದೆ ಬರಲಿಲ್ಲವಂತೆ. ವಿಧವೆ ಆತನು ತಿರುಗಿ ಬರುವದಿಲ್ಲವೆಂದು ಮನವರಿಕೆಯಾದ ಮೇಲೆ ಗೋಳಿಟ್ಟು ಅತ್ತಳು. ತನ್ನ ದೈವವನ್ನು ಶಪಿಸಿದಳು. "

"ನಿರ್ಜೀವ ದೈವಕ್ಕೆ ಶಪಿಸಿದರೇನಾಗಬೇಕು? ಜೀವಿಗಳಿಗೇ ಶಾಪದಿಂದ ಏನೂ ಆಗುವದಿಲ್ಲ..." ಮಧುಮತಿ ಅಂದಳು.

" ಆ ಹಳ್ಳಿಯಲ್ಲಿಯ ಒಬ್ಬ ಗೃಹಸ್ಥನ ಹೊಟ್ಟೆಯಲ್ಲಿ ದೇವರು ಹೊಕ್ಕನು. ಆತನು ಆ ವಿಧವೆಯ ಬೆಂಬಲಕ್ಕೆ ನಿಂತು ಅವಳಿಗೆ ಧೈರ್ಯವನ್ನು ಕೊಟ್ಟನು. ಆ ವಿಧವೆಯ ಕಡೆಯಿಂದ ಎಲ್ಲವನ್ನು ಕೇಳಿಕೊಂಡು ಅವಳನ್ನು ಕರೆದುಕೊಂಡು ನಮ್ಮ ಊರಿಗೆ ಬಂದನಂತೆ. ಆ ವಿಧವೆಯನ್ನು ಮನೆಯ ತಲೆಬಾಗಿಲ ಮುಂದೆ ಕುಳ್ಳಿರಿಸಿಕೊಂಡು ತಾನೂ ಧರಣೀ ಹಿಡಿದು ಕುಳಿತನಂತೆ. ಆ ವಿಧವೆಯು ತನ್ನ ಗಂಟನ್ನು ಮುಂದಿಟ್ಟುಕೊಂಡು ಹೊಸ್ತಿಲಕ್ಕೆ ಹಣೆಯನ್ನು ಬಡಿಯುತ್ತ ಆಕ್ರೋಶ ಮಾಡುವದನ್ನು ಕಂಡು

ತನ್ನ ಮಾನ ಮುಕ್ಕಾಗುವದೆಂದು ಅಪ್ಪನು ಹೆದರಿದನಂತೆ ” ಎಂದು ಗಿರಿಧಾರಿ ಹೇಳಿದನು.

“ ಮಾಡಿದ್ದಕ್ಕೆ ಹೆದರಬೇಕೇ ? ಒಳ್ಳೆಯ ಭಟ್ಟರು ! ತಾವು ಕಲಿತ ವೇದಾಂತವನ್ನು ತಿಪ್ಪೆಯಲ್ಲಿ ಉರುಳಾಡುವ ಕತ್ತೆಯ ಕೊರಳಲ್ಲಿ ಕಟ್ಟಿದಂತಾಯಿತು. ಅವರ ನೀತಿಯು ಹಾವಿನ ನೀತಿಯಂತಾಯಿತು. ಅವರ ನಡತೆ ಕೋಣನ ನಡತೆಯಂತಾಯಿತು ” ಮಧುಮತಿ ನುಡಿದಳು.

“ ಆಗ್ಗೆ ನನಗೆ ಐದು ಇಲ್ಲವೆ ಆರು ವರುಷ. ಸ್ವಲ್ಪ ತಿಳಿಯುತ್ತಿತ್ತು. ಸೂರ್ಯ ಮುಣುಗಿ ಅದೇ ಸ್ವಲ್ಪ ನಸುಗತ್ತಲೆಯಾಗಿತ್ತು. ಅವಳು ನಮ್ಮ ಮನೆಯ ಹೊಸ್ತಿಲಕ್ಕೆ ತಲೆಕೊಟ್ಟು ಬಿಕ್ಕಿ ಬಿಕ್ಕಿ ಅಳುತ್ತಿದ್ದದ್ದು ನನಗೆ ನೆನಪಿರುವದು. ಪಡಸಾಲೆಯ ಒಂದು ಮೂಲೆಯಲ್ಲಿ ನನ್ನನ್ನು ಅಮ್ಮನು ಮಲಗಿಸಿದ್ದಳು. ಆ ವಿಧವೆ ಅಳುವದನ್ನು ಕಂಡು ಗಾಬರಿಯಾಗಿ ನಾನು ಎದ್ದು ಕುಳಿತೆ. ಅಮ್ಮನು ಬಹಳೇ ಗಾಬರಿಯಾಗಿ ನಡಗುತ್ತಿದ್ದಳು. ಧೈರ್ಯ ತೆಗೆದುಕೊಂಡು ಅಮ್ಮನು ಹೊರಗೆ ಹೋದಳು. ಬಂದವನು ವಿಧವೆಯನ್ನು ಬಿಟ್ಟು ಕದಲಲಿಲ್ಲ. ಅವರಿಗೆ ಸಮಾಧಾನ ಹೇಳಿ ಅಮ್ಮನು ಮನೆಯೊಳಗೆ ಕರೆದುಕೊಂಡು ಬಂದಳು. ಇವರನ್ನು ತನ್ನ ಜೀವಮಾನದಲ್ಲಿಯೇ ನೋಡಿರುವದಿಲ್ಲವೆಂದು ಅಪ್ಪ ಆರ್ಭಟ ಮಾಡುತ್ತ ಜಿಗಿದಾಡಹತ್ತಿದನು. ಆ ವಿಧವೆ ಅಳುವುದನ್ನು ಕಂಡು ನನಗೂ ಅಳುವು ಬಂದಿತು. ಅಮ್ಮನು ಅಂದು ಇರದಿದ್ದರೆ ಅಪ್ಪನು ಆ ವಿಧವೆಯನ್ನು ಹೊಡೆದೇ ಬಿಡುತ್ತಿದ್ದನು. ಅವಳ ಸಂಗಡ ಬಂದ ಗ್ರಹಸ್ಥನು ವಿಧವೆಯನ್ನು ನಮ್ಮ ಮನೆಯಲ್ಲಿ ಬಿಟ್ಟು ನಿಮಗೆ ಒಪ್ಪಿಸಿರುವೆನು ಎಂದು ಹೇಳಿ ಹೊರಟುಹೋದನು ” ಗಿರಿಧಾರಿಯು ನುಡಿದನು.

ಇದನ್ನು ಕೇಳುತ್ತಲೇ ಪ್ರೇಮನಂದಿನಿಯ ತಲೆ ತಿರುಗಹತ್ತಿತು. ಅಲ್ಲಿಂದೆದ್ದು ಮನೆಗೆ ಹೋಗಬೇಕೆಂದು ಅನಿಸಹತ್ತಿತು. ಆದರೂ ಧೈರ್ಯ ತೆಗೆದುಕೊಂಡು ಪೂರ್ಣ ಕೇಳಬೇಕೆಂದು ಮಾಡಿದಳು.

ಪ್ರೇಮನಂದಿನಿಯ ವ್ಯಗ್ರ ಮನವನ್ನು ಕಂಡು “ ನೀವು ಇಲ್ಲಿಯ ಆರಾಮ ಕುರ್ಚಿಯ ಮೇಲೆ ತುಸ ಹೊತ್ತು ಅಡ್ಡಾಗಿರಿ ” ಎಂದು ರಂಜನಿಯು ಹೇಳಿದಳು.

“ ಅಮ್ಮಾ, ನಿನ್ನ ಮನವು ಏಕೋ ಅಸ್ವಸ್ಥ ಕಾಣುವದು. ಐದು ನಿಮಿಷ ಇಲ್ಲಿ ಅಡ್ಡಾಗು ” ಎಂದು ಮಧುಮತಿಯೂ ಒತ್ತಾಯ ಮಾಡಿದಳು.

ಮಧುಮತಿಯ ಒತ್ತಾಯದಿಂದ ಪ್ರೇಮನಂದಿನಿಯು ಆರಾಮ ಕುರ್ಚಿಯ ಮೇಲೆ ಅಡ್ಡಾಗಿ ಮೊಗದ ಮೇಲೆ ಬಂದ ಬೆವರನ್ನು ತನ್ನ ಸೆರಗಿನಿಂದ ಒರಿಸಿಕೊಂಡಳು.

“ ಭಟ್ಟರು ಜಿಗಿದು ಹೊರಗೆ ಓಡಿ ಹೋದರೋ ? ” ಕೇಳಿದಳು ಮಧುಮತಿ.

“ ಆ ವಿಧವೆಯ ಶೋಕವನ್ನು ಕಂಡು ಅಮ್ಮನ ಮನಸ್ಸು ಕರಗಿ ನೀರಾಯಿತು. ಅವಳ ಕಣ್ಣುಗಳಿಂದ ನೀರು ಹರಿಯಹತ್ತಿತು. ಗಂಡನ ಮೇಲೆ ಬಹಳೇ ಕೋಪ ಬಂದಿತು ಅಮ್ಮನಿಗೆ. ಅವಳು ಮಾಡುವಳೇನು! ಅಪ್ಪನ ಮುಂದೆ ಅವಳ ಆಟ ಸಾಗುವಂತಿದ್ದಿಲ್ಲ. ಆ ವಿಧವೆಯ ಮಾತಿನ ಸುರಿಮಳೆಯನ್ನು ಕಂಡು ಅಪ್ಪ ಬೆಪ್ಪಾಗಿ ಕಲ್ಲುಬಡೆದು ನಿಂತ. ಅದೆಲ್ಲವನ್ನು ಕಂಡು ನನಗೆ ಏನೂ ತಿಳಿಯಲಿಲ್ಲ. ಅಪ್ಪನು ಅವಳಿಗೆ ಏನು ಮಾಡಿದ್ದನೆಂಬುದು ಆಗ ನನಗೆ ಏನೂ ಹೊಳೆಯಲಿಲ್ಲ. ಅವಳೇಕೆ ಅಳುತ್ತಿದ್ದಳೆಂಬುವದು ನನಗೆ ಗೊತ್ತಾಗಲಿಲ್ಲ. ನೀವು ಹುಡುಗಿಯ ಜೀವನವನ್ನು ಹಾಳುಮಾಡಬಾರದಾಗಿತ್ತು ಎಂದು ಅಮ್ಮನು ಮೆಲ್ಲಗೆ ನುಡಿದಳು. ಅವಳನ್ನು ತನ್ನ ಬದಿಯಲ್ಲಿ ಕುಳ್ಳಿರಿಸಿಕೊಂಡು ಅಮ್ಮ ಧೈರ್ಯ ಕೊಟ್ಟಳು. ಬೆಳಗಾದ ಮೇಲೆ ವಿಚಾರ ಮಾಡೋಣವೆಂದು ಅವಳಿಗೆ ಸಮಾಧಾನ ಹೇಳಿ ಊಟಕ್ಕೆ ಎಬ್ಬಿಸಿದಳು. ಊಟಕ್ಕೆ ಬಡಿಸಿದಳು. ಅವಳಿಗೆ ನಾಲ್ಕೈದು ದಿನ ಅನ್ನವಿಲ್ಲೆಂದು ನನಗೆ ಅನಿಸಿತು ” ಗಿರಿಧಾರಿ ಅಂದನು.

“ ಅದು ಹೇಗೆ ಅನಿಸಿತು ” ಕೇಳಿದಳು ಮಧುಮತಿ.

“ ಅವಳು ಗಪಗಪನೆ ತಿನ್ನುವದನ್ನು ಕಂಡು ಬಹಳೇ ಹಸಿದಿರಬಹುದೆಂದು ಅನಿಸಿತು. ಅಮ್ಮನೂ ಅಪ್ಪನೂ ಊಟ ಮಾಡಲಿಲ್ಲ. ಅಪ್ಪನ ಮೇಲೆ ಅಮ್ಮನು ಕಿಡಿಕಿಡಿಯಾಗಿದ್ದಳು. ಎಲ್ಲರೂ ಮಲಗಿಕೊಂಡೆವು. ಸೂರ್ಯೋದಯವಾಗಿ ಒಂದು ತಾಸಾಗಿರಬಹುದು. ನಾನು ಎದ್ದೆನು. ನನ್ನ ಬದಿಯಲ್ಲಿಯೇ ಆ ವಿಧವೆ ಮಲಗಿಕೊಂಡಿದ್ದಳು. ಅವಳಿಗೆ ಬಹಳೇ

ಆಯಾಸವಾಗಿದ್ದರಿಂದ ಇನ್ನೂ ಎದ್ದಿದ್ದಿಲ್ಲ. ಅಮ್ಮನು ಏನೋ ಕೆಲಸ ಮಾಡುತ್ತಿದ್ದಳು. ಅಪ್ಪನು ಮಾತ ಮನೆಯಲ್ಲಿ ಇದ್ದಿದ್ದಿಲ್ಲ. ಮುಂದೆ ಒಂದು ತಾಸಿನ ಮೇಲೆ ಅಪ್ಪನು ಬಂಡಿಯನ್ನು ತೆಗೆದುಕೊಂಡು ಬಂದು ವಿಧವೆಯನ್ನು ಎಬ್ಬಿಸಲು ಅಮ್ಮನಿಗೆ ಹೇಳಿದನು. "ಪಾಪ, ದಣಿದಿರು ವಂತೆ ತೋರುವದು, ಮೇಲಾಗಿ ಗರ್ಭಿಣಿ, ಮಲಗಿಕೊಳ್ಳಲಿ" ಎಂದು ಅಮ್ಮನು ಹೇಳಿದಳು. ಅಪ್ಪನು ನಿರುಪಾಯನಾಗಿ ಬೆಲ್ಲ ಬಡೆದ ಕಲ್ಲಿನಂತೆ ಕುಳಿತುಕೊಂಡನು. ತುಸು ಹೊತ್ತಿನ ಮೇಲೆ ಆಕೆಯನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗುವೆನೆಂದು ಹೇಳಿದನು. 'ಮಾಡಿದ ತಪ್ಪನ್ನು ಸರಿಪಡಿಸಿಕೊಳ್ಳುವದೇ ನೀತಿಯ ಗುಟ್ಟು. ಹೆರಿಗೆಯ ಆಸ್ಪತ್ರೆಗೆ ಕರೆದು ಕೊಂಡು ಹೋಗಬೇಡಿ. ಅವಳು ಇಲ್ಲಿಯೇ ಹಡೆಯಲಿ' ಎಂದು ಅಮ್ಮನು ಅಪ್ಪನಿಗೆ ಹೇಳಿದಳು.

"ಅಪ್ಪನು ವಿಧವೆಯನ್ನು ಕರೆದುಕೊಂಡೇ ಹೋಗಬೇಕೆಂದು ನಿರ್ಧಾರ ಮಾಡಿದ್ದನು. ಅದಕ್ಕಾಗಿಯೇ ಬಂಡಿಯನ್ನು ತಂದಿದ್ದನು. ವಿಧವೆ ಎದ್ದಳು. ಅವಳಿಗೆ ಹೊರಡಬೇಕೆಂದು ಅಪ್ಪನು ಹೇಳಿದನು. ಅಮ್ಮನನ್ನು ಬಿಟ್ಟು ಹೋಗಲು ಅವಳು ಸಿದ್ಧಳಾಗಲಿಲ್ಲ. ಅಮ್ಮನ ಪಾದ ದಡಿಯಲ್ಲಿಯೇ ಸಾಯುವೆನೆಂದು ಹಟ ಹಿಡಿದು ಕುಳಿತುಬಿಟ್ಟಳು. ಇತ್ತ ಅಪ್ಪ ಗಡಿಬಿಡಿ ಮಾಡಹತ್ತಿದನು. ಅಮ್ಮ ಅವಳಿಗೆ ಸಮಾಧಾನ ಹೇಳಿ ದಳು. 'ಹಿಂದೆ ಅವರು ಮಾಡಿದ್ದು ಮರೆ. ಇನ್ನು ಮೇಲೆ ಅವರು ಎಂದೂ ಹಾಗೆ ಮಾಡಲಾರರು. ನಿನ್ನನ್ನು ಹೆರಿಗೆಯ ಆಸ್ಪತ್ರೆಗೆ ಕರೆದು ಕೊಂಡು ಹೋಗುವರು. ನಿನ್ನ ಹೆರಿಗೆಯು ಮುಗಿದ ಮೇಲೆ ಕೂಸನ್ನು ಕರೆದುಕೊಂಡು ಬಾ, ಎಂದು ಅಮ್ಮನು ವಿಧವೆಗೆ ಹೇಳಿದಳು. ಅವಳು ನಿರುಪಾಯಳಾಗಿ ಬಂಡಿಯಲ್ಲಿ ಹೋಗಿ ಕುಳಿತಳು. ಅಪ್ಪನೂ ಅವಳ ಸಂಗಡ ಬಂಡಿಯನ್ನೇರಿದನು. ಬಂಡಿಯು ಸಾಗಿತು. ಬಂಡಿ ಮರೆ ಯಾಗುವವರೆಗೆ ನಾನು ಕಟ್ಟೆಯ ಮೇಲೆ ನಿಂತು ನೋಡಿದೆ. ನನಗೆ ಇದೆಲ್ಲ ಮೋಜೆನಿಸಿತು" ಎಂದು ಗಿರಿಧಾರಿಯು ನುಡಿದನು.

"ಭಟ್ಟರು ಒಂದು ದೊಡ್ಡ ಪುರಾಣದ ನಾಯಕರಾದರು. ಆ ವಿಧ ವೆಯ ಹೆಸರು ನೀನು ಕೇಳಲಿಲ್ಲವೇ" ಎಂದು ಮಧುಮತಿ ಕೇಳಿದಳು.

" ಹೋಗಿ ಬಾ ಮಾಯಾದೇವಿ, ಎಂದು ಅಮ್ಮನು ನುಡಿದದ್ದು ಕೇಳಿರುವೆನು " ಎಂದನು ಗಿರಿಧಾರಿ.

"ಅವಳ ಹೆಸರು ಮಾಯಾದೇವಿಯೋ" ಎಂದು ಪ್ರೇಮನಂದಿನಿಯು ಗಾಬರಿಯಾಗಿ ಎದ್ದು ನಿಂತು ಕೇಳಿದಳು.

# ೧೩

ರಾಮನವಮಿಯ ದಿನದಂದು ಮಂದಿರದ ಹೊರಗೆ ಪ್ರೇಮನಂದಿನಿಯನ್ನು ಮಾತನಾಡಿಸಿದ ಮೇಲೆ ಕುಮಾರಿಲಭಟ್ಟರ ಮನದಲ್ಲಿ ನಾನಾ ವಿಧದ ವಿಚಾರಗಳೆದ್ದು ಅವರ ಮನದಲ್ಲಿ ಅಶಾಂತತೆಯೆದ್ದಿತು. ಅವಳನ್ನು ಮಾತನಾಡಿಸಿದ ಮೇಲೆ ತಮ್ಮ ಹಿಂದಿನ ಜೀವನವು ನೆನಪಾಯಿತು. ಅದನ್ನು ಮರೆಯಬೇಕೆಂದು ಎಷ್ಟು ಪ್ರಯತ್ನಪಟ್ಟರೂ ಅವರ ಕಣ್ಣೆದುರಿಗೆ ಆ ಹಳ್ಳಿ, ಆ ಬಾಲವಿಧವೆ, ರಾತ್ರಿಯಲ್ಲಿ ತಲೆಯ ಮೇಲೆ ಗಂಟನ್ನಿಟ್ಟುಕೊಂಡು ಎದುರಿಗೆ ಬಂದು ಭೆಟ್ಟಿಯಾದದ್ದು, ತಲೆಯ ಮೇಲಿನ ಗಂಟು ಜೀವನದ ಗಂಟೆಂದು ಉತ್ತರವಿತ್ತದ್ದು— ಎಲ್ಲವೂ ಚಲಿಸಿದಂತೆ ಆಗಹತ್ತಿತು. ಆವಳಿಗೆ ಈಗ ಬರುವೆನೆಂದು ಹೇಳಿದ ಮಾತು ಅವರ ಕಿವಿಯಲ್ಲಿ ಮತ್ತೆ ಮತ್ತೆ ಕೇಳಿಸುತ್ತಿತ್ತು.

ಪ್ರೇಮನಂದಿನಿಯ ಚಿತ್ರದಿಂದ ಎಲ್ಲವೂ ನೆನಪಾಯಿತು. ತಾನು ಮಾಡಿದ್ದು ತಪ್ಪೋ ಒಪ್ಪೋ ಎಂಬ ವಿಷಯ ಅವರನ್ನು ಎಡೆಬಿಡದೆ ಕಾಡುತ್ತಿತ್ತು.

ಮೈತ್ರೇಯಿ ಗಂಡನ ಮೊಗವನ್ನು ಕಂಡು ಅವರು ಏನೋ ಒಂದು ಗೂಢವಾದ ವಿಚಾರದಲ್ಲಿರುವರೆಂದು ತಿಳಿದುಕೊಂಡು ಸುಮ್ಮನಿದ್ದಳು. ಏನೆಂದು ಕೇಳಬೇಕೆಂದು ಪ್ರಯತ್ನಮಾಡಿದಳು. ಮನಸ್ಸು ಹಿಂಜರಿಯಹತ್ತಿತು. ಹಿಂಜರಿಯುವ ಮನವನ್ನು ಮುಂದೋಡಿಸಿ ಕೇಳಬೇಕೆಂದು

ಅವಳ ಮನಸ್ಸಿಗೆ ಸರಿಕಾಣಲಿಲ್ಲ. ಕುಮಾರಿಲಭಟ್ಟರು ತಲೆಯ ಮೇಲೆ ಕೈಯಾಡಿಸುತ್ತ ಹಜಾರದಲ್ಲಿ ಕುಳಿತುಕೊಂಡಿದ್ದರು.

ಮೇಧಾವಿನಿಯು ಗೆಳತಿ ಮಧುಮತಿಯ ಮನೆಗೆ ಹೋಗಿದ್ದಳು.

"ಮೊನ್ನೆ ಪದ್ಮನಾಭರ ಮನೆಯಲ್ಲಿ ಮೇಧಾವಿನಿಯೂ, ವಿದ್ಯಾಚರಣನೂ ಶ್ರೀರಾಮಚಂದ್ರನನ್ನು ತೊಟ್ಟಿಲದಲ್ಲಿ ಹಾಕಿದರಂತೆ. ಮೇಧಾವಿನಿಗೆ ವಿದ್ಯಾಚರಣನು ಕೂಸನ್ನು ಒಪ್ಪಿಸಿದನಂತೆ, ಗಿರಿಧಾರಿಯೂ ಅಗ್ಗೆ ಇದ್ದನು" ಎಂದು ಮೈತ್ರೇಯಿ ಕುಮಾರಿಲಭಟ್ಟರಿಗೆ ಹೇಳಿದಳು.

ಹೆಂಡತಿಯ ಮಾತನ್ನು ಕೇಳಿ,

"ಯಾರ ಸಮ್ಮತಿಯಿಂದ ಇದನ್ನು ಮಾಡಿದರು" ಎಂದು ಕೇಳಿದರು ಕುಮಾರಿಲಭಟ್ಟರು.

"ಇದಕ್ಕೆ ಸಮ್ಮತಿಯೇಕೆ ಬೇಕು ?"

"ಬೇಕಾಗುವದಿಲ್ಲವೇ ?"

"ನನಗೇನು ಅನಿಸುವದಿಲ್ಲ. ಆದರೂ ಯಾರ ಸಮ್ಮತಿ ಬೇಕು ಎಂದು ಅನ್ನುವಿರಿ ?"

"ನೀನು ಅವಳಿಗೆ ಸಮ್ಮತಿಯನ್ನು ಕೊಟ್ಟಿದ್ದೆಯೋ ?"

"ನನಗೆ ಇದು ಗೊತ್ತೇ ಇದ್ದಿಲ್ಲ."

"ಮೇಧಾವಿನಿ ಹಾಗೆ ಮಾಡಬಾರದಿತ್ತು."

"ಅವಳೇನು ಮಾಡಿರುವಳು ?"

"ವಿದ್ಯಾಚರಣನ ಕೈಹಿಡಿದು ತೊಟ್ಟಿಲದಲ್ಲಿ ಹಾಕಬಾರದಾಗಿತ್ತು."

"ಅವಳು ವಯಸ್ಸಾದವಳು; ಮೇಲಾಗಿ ಕಲಿತವಳು; ಸಾಧು ಅಸಾಧು ವಿಚಾರಗಳನ್ನು ಬಲ್ಲವಳು."

"ಯೌವನದಲ್ಲಿ ಮನುಷ್ಯನ ಬುದ್ಧಿ ಸ್ಥಿರವಿರುವದಿಲ್ಲ."

"ಅವಳ ಬುದ್ಧಿ ಸ್ಥಿರ ಇರುವದು. ಅದು ನನಗೆ ಗೊತ್ತು" ನಾನು ಅವಳನ್ನು ಬಲ್ಲಷ್ಟು ನೀವು ಬಲ್ಲವರಲ್ಲ. ಮಗನನ್ನು ತಂದೆ ಬಲ್ಲನು. ಮಗಳನ್ನು ತಾಯಿ ಬಲ್ಲಳು. ವಿದ್ಯಾಚರಣನಾದರೂ ಬಹಳ ಒಳ್ಳೇ ಹುಡುಗನು. ಮೇಧಾವಿನಿಗೆ ಅತನೇ ವರನಾಗಿ ಸಿಕ್ಕರೆ ಹುಡುಗಿಯು ತನ್ನ ದೈವವನ್ನು ತಾನೇ ತೆರೆದುಕೊಂಡಂತಾಗುವದು. ನಾವು ಬಡವರು.

ಕೈಯಲ್ಲಿ ಒಂದು ಕಾಸೂ ಇಲ್ಲ. ಇಲ್ಲದ್ದೊಂದು ತಲೆಯಲ್ಲಿ ಹಾಕಿಕೊಂಡು ವಿಚಾರ ಮಾಡಬೇಡಿರಿ" ಎಂದು ಮೈತ್ರೇಯಿ ನುಡಿದಳು.

ಕುಮಾರಿಲಭಟ್ಟರು ಹೆಂಡತಿಯ ಮಾತುಗಳನ್ನು ಕೇಳಿ ಸುಮ್ಮ-ನಾದರು.

"ಮೊನ್ನೆ ರಾಮಮಂದಿರದಲ್ಲಿ ಒಬ್ಬರು ಹಾಡಿದರು. ಅವರು ಯಾರೆಂಬುದು ನಿನಗೆ ಗೊತ್ತೇ?"

"ಹಾಡಿದ್ದು ಗೊತ್ತಿರುವದು. ಅಂದು ಮೇಧಾವಿನಿಯು ಹೋಗಿದ್ದಳು. ಅವಳ ಹೆಸರು ಪ್ರೇಮನಂದಿನಿಯೆಂದು ಹೇಳಿದಳು. ಪದ್ಮನಾಭನ ಮನೆಯಲ್ಲಿರುವಳಂತೆ."

"ಪದ್ಮನಾಭನೆಂದರೆ ಯಾರು?"

"ಮೇಧಾವಿನಿಯ ಕಾಲೇಜದಲ್ಲಿ ಕಲಿಸುವವನಂತೆ."

"ಪದ್ಮನಾಭನಿಗೆ ಅವಳೇನು ಆಗಬೇಕು."

"ಅದು ನನಗೆ ಗೊತ್ತು ಇಲ್ಲ. ಅವರ ಮನೆಯಲ್ಲಿ ಇರುವಳೆಂದು ಮೇಧಾವಿನಿ ಹೇಳಿದ್ದು ಗೊತ್ತು."

"ನಿನಗೆ ಒಂದು ಹಳೇ ಸಂಗತಿ ನೆನಪಾಗುವದೋ?"

"ಏನದು?"

"ಹಿಂದಕ್ಕೆ ಒಮ್ಮೆ ಬಾಲವಿಧವೆ ಬಂದಿದ್ದಳಲ್ಲ!"

"ಹೌದು ಬಂದಿದ್ದಳು. ಅವಳನ್ನು ನೀವು ಹೆರಿಗೆಯ ಆಸ್ಪತ್ರಿಗೆ ಕರೆದುಕೊಂಡು ಹೋಗಿದ್ದಿರಿ. ಬಹಳ ವರುಷಗಳ ಹಿಂದಿನ ಮಾತು. ಸುಮಾರು ಇಪ್ಪತ್ತು ವರುಷಗಳಾಗಿರಬಹುದು."

"ಪ್ರೇಮನಂದಿನಿಯು ಆ ಬಾಲವಿಧವೆಯಿರಬೇಕೆಂದು ನನಗನಿಸುವದು."

"ಬಾಲವಿಧವೆಯ ಹೆಸರು ಮಾಯಾದೇವಿಯಲ್ಲವೇ?"

"ಹೌದು ಮಾಯಾದೇವಿ."

"ಇವಳ ಹೆಸರು ಪ್ರೇಮನಂದಿನಿ ಇರುವದಲ್ಲ."

"ಹೆಸರು ಬದಲು ಮಾಡಿಕೊಂಡಿರಬಹುದು."

"ಆದರೆ ಮಾಯಾದೇವಿ ಹಡೆದು ಸತ್ತಳೆಂದು ತಾವು ಹೇಳಿದ್ದಿರಿ.

ಕೂಸೂ ಸತ್ತು ಹೋಯಿತೆಂದು ಹೇಳಿದ್ದಿರಿ. ಸತ್ತವಳು ಮತ್ತೆ ಬದುಕಿ ಬಂದಳೋ? "

" ಸತ್ತಳೆಂದು ಹೇಳಿದ್ದೆನೋ ? "

" ತಾವು ಹೆರಿಗೆಯ ಆಸ್ಪತ್ರೆಗೆ ಹೋಗಿ ಹದಿನೈದು ದಿನಗಳ ಮೇಲೆ ತಿರುಗಿ ಬಂದಿರಿ. ಬಂದ ಕೂಡಲೇ ನಾನು ಮಾಯಾದೇವಿಯ ಯೋಗಕ್ಷೇಮವನ್ನು ನಿಮಗೆ ಕೇಳಿದೆ. ತಾವು ಅವಳು ತೀರಿಕೊಂಡಳೆಂದು ಹೇಳಿದಿರಿ. ಪಾಪ ಕೂಸೂ ಹೋಯಿತೆಂದು ಹೇಳಿದಿರಿ. ಅದನ್ನು ಮರೆತುಬಿಟ್ಟಿರಾ? ಅಂದು ನೀವು ನನಗೆ ಸುಳ್ಳು ಹೇಳಿದಿರೋ? " ಎಂದು ಮೈತ್ರೇಯಿ ಕೇಳಿದಳು. "

ಕುಮಾರಿಲಭಟ್ಟರು ಉತ್ತರವನ್ನೀಯದೆ ಮೌನವಾದರು.

ಹೊರಗೆ ತಂದೆ ತಾಯಿಗಳ ಮಾತುಗಳನ್ನು ಕೇಳುತ್ತ ಗಿರಿಧಾರಿಯು ನಿಂತಿದ್ದನು. ಅವನು ತಂದೆಯ ಕೀಳು ನಡತೆಯನ್ನು ಕಂಡು ಸಂತಪ್ತನಾದನು. ಸಿಟ್ಟಿನಿಂದಲೇ ಮನೆಯನ್ನು ಪ್ರವೇಶ ಮಾಡಿದನು. ಸಂತಪ್ತನಾಗಿ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಬರುತ್ತಿರುವ ಮಗನನ್ನು ಕಂಡು ಭಟ್ಟರು ಏಕೋ ಹೆದರಿದರು.

" ತಾವು ಅಂದು ರಾಮಮಂದಿರದ ಹೊರಗೆ ಪ್ರೇಮನಂದಿನಿಯನ್ನು ಕಂಡು ತಮ್ಮ ಹೆಸರು ಮಾಯಾದೇವಿಯೋ ಎಂದು ಕೇಳಲಿಲ್ಲವೇ? " ಎಂದು ಗಿರಿಧಾರಿ ತಂದೆಯ ಎದುರಿಗೆ ನಿಂತು ಕೇಳಿದನು.

" ನೀವು ತಂದೆಯವರು; ನಾನು ನಿಮ್ಮ ಮಗನು. ನಿಮಗೆ ನಾನು ಕೇಳಬಾರದು; ಆದರೂ ನಾನು ನಿಮಗೆ ಕೇಳುತ್ತೇನೆ. ನಾನು ಈಗಿನ ಕಾಲದವನು. ನನಗೆ ವೇದಾಂತ-ಉಪನಿಷತ್ತುಗಳ ಗಂಧವೂ ಕೂಡ ಇಲ್ಲ " ಎಂದು ತಾಯಿಯ ಹತ್ತರ ಹೋಗಿ ನಿಂತು ಮಾತನಾಡಿದನು.

" ಗಿರಿಧಾರಿ ! ಏನದು ? " ಎಂದು ಮೈತ್ರೇಯಿ ಕೇಳಿದಳು.

" ನಮ್ಮ ಮನೆತನದ ಬಣ್ಣ; ಅಪ್ಪನ ವೇದಾಂತ. "

" ಏನು ಮಾತನಾಡುವಿಯೋ ? " ಎಂದಳು ಮೈತ್ರೇಯಿ.

" ಅಪ್ಪನ ರಹಸ್ಯವು ನನಗೆ ಗೊತ್ತಾಗಿರುವದೆಂದು ತಿಳಿದ ಮೇಲೆ ಬೆಂಕಿಯನ್ನು ಕಾರುತ್ತ ಗಿರಿಧಾರಿ ಪುಂಡ, ಧಡ್ಡ, ಲಫಂಗನೆಂದು ಕೂಗು

ತ್ತಿದರು. ನನಗೆ ಲಫಂಗನೆಂದು ಮೇಲಿಂದ ಮೇಲೆ ಕರೆದು ನನ್ನನ್ನು ಲಫಂಗತನಕ್ಕೆ ಹಚ್ಚಿದರು. ನಾನೂ ರೂಪಜೀವಿಗಳ ಸಹವಾಸದಲ್ಲಿರುವೆನು. ಆದರೆ ಮನೆತನದ ಹೆಂಗಸರ ಮೇಲೆ ನಾನೆಂದೂ ಕೈ ಮಾಡಿಲ್ಲ. ಯಾವ ಹೆಂಗಸಿನ ಆಯುಷ್ಯವನ್ನೂ ನಾನು ಹಾಳುಮಾಡಿಲ್ಲ.

ಪ್ರೇಮನಂದಿನಿಯು ಮಾಯಾದೇವಿಯೋ? ಉತ್ತರ ಕನ್ನಡದವಳೊ? ಹೇಳಿರಿ " ಎಂದು ಗಿರಿಧಾರಿಯು ಕುಮಾರಿಲಭಟ್ಟರಿಗೆ ಕೇಳಿದನು.

" ಮಾಯಾದೇವಿಯಂತೆ ಕಾಣಿಸುವಳು. "

" ತಾವು ಅಮ್ಮನೆದುರಿಗೆ ಇಪ್ಪತ್ತು ವರುಷಗಳ ಹಿಂದೆ ಸತ್ತು ಹೋದಳೆಂದು ಹೇಳಿದ್ದಿರಲ್ಲ ! "

" ನಾನು ಪ್ರೇಮನಂದಿನಿಯು ಮಾಯಾದೇವಿಯೆಂದು ಹೇಳಲಿಲ್ಲ. ಮಾಯಾದೇವಿಯಂತೆ ಕಾಣಿಸುವಳೆಂದು ಹೇಳಿದೆನು. ಅವಳಂತೆ ಮತ್ತೆ ಬೇರೆ ಯಾರಾದರೂ ಇರಬಾರದೇ ? " ಎಂದು ಕುಮಾರಿಲಭಟ್ಟರು ಉತ್ತರ ಕೊಟ್ಟರು.

ಮಗನ ಉದ್ಧಾಮತನವನ್ನು ಕಂಡು ಕುಮಾರಿಲಭಟ್ಟರು ಸಿಡಿಮಿಡಿಗೊಂಡರು. ತಂದೆಗೆ ಮಗನು ತಿರುಗಿ ಪ್ರಶ್ನೆ ಕೇಳುವ ಧೈರ್ಯ ಬಂದದ್ದು ಕಂಡು ಅವರ ಸಿಟ್ಟು ನೆತ್ತಿಗೇರಿತು.

" ಮಾಯಾದೇವಿ ಏನು ಹಡೆದಳು ? ಆ ಕೂಸು ಏನಾಯಿತು ? "

" ಯಾವ ಮಾಯಾದೇವಿಯನ್ನು ಕೇಳುವಿ ? ಯಾವ ಕೂಸನ್ನು ಕೇಳುವಿ " ಎಂದು ಕುಮಾರಿಲಭಟ್ಟರು ಸಿಟ್ಟನ್ನು ನುಂಗಿಕೊಂಡು ಕೇಳಿದರು.

" ನಿಮಗೆ ಗೊತ್ತಿದ್ದ ಮಾಯಾದೇವಿ ! ನಿಮಗೆ ಗೊತ್ತಿದ್ದ ಮಾಯಾದೇವಿಯ ಕೂಸು ! "

" ನನಗೆ ಯಾವದೂ ಗೊತ್ತಿಲ್ಲ, ನೀನು ಕೇಳುವದೇ ನನಗೆ ತಿಳಿಯದು. "

" ಉತ್ತರ ಕನ್ನಡದ ಮಾಯಾದೇವಿ ಬಾಲವಿಧವೆ. ಆಗ ನಾನು ಚಿಕ್ಕವನಿದ್ದೆ. ನನಗೆ ಎಲ್ಲವೂ ಗೊತ್ತು. ಇನ್ನು ಮೇಲಾದರೂ ಯಾವ ಮಾಯಾದೇವಿಯೆಂಬುವದು ನೆನಪಾಯಿತೇ ! ಅವಳ ಕೂಸು ಎಲ್ಲಿ ಬೆಳೆದಿ

ರುವದು ? ” ಎಂದು ಗಿರಿಧಾರಿಯು ಚುಚ್ಚುವ ದನಿಯಿಂದ ಕುಮಾರಿಲ ಭಟ್ಟರಿಗೆ ಕೇಳಿದನು.

ಕುಮಾರಿಲಭಟ್ಟರು ಉತ್ತರ ಕೊಡದೆ ಸುಮ್ಮನೆ ಜಂತಿಯನ್ನು ನೋಡುತ್ತ ಕುಳಿತರು.

“ ಆ ಬಾಲವಿಧವೆ ಮಾಯಾದೇವಿಗೆ ಲಗ್ನವಾಗುವೆನೆಂದು ಆಶ್ವಾಸನ ಕೊಟ್ಟು ಅವಳಿಗೆ ಮೋಸಮಾಡಿ ಹೇಡಿಯಂತೆ ಓಡಿ ಹೋಗುವದು ನಮ್ಮ ಮನೆತನಕ್ಕೆ ಶೋಭಿಸುವದಿಲ್ಲ. ನಿಮ್ಮ ಮಗನು ನಾನು ಹೌದು. ಆದರೆ ನನ್ನ ಮನೆತನವು ನಿಮಗಿಂತ ಹೆಚ್ಚು. ಮಾಯಾದೇವಿಯು ನಿಮ್ಮಿಂದ ಗರ್ಭಿಣಿಯಾದದ್ದು ನಿಮ್ಮಿಬ್ಬರ ಯೌವನದ ನೈಸರ್ಗಿಕ ಶಕ್ತಿಯಾಗಿರುವ ದೆಂದು ನಾನು ಭಾವಿಸುವೆನು. ಲಗ್ನ ಮಾಡಿಕೊಳ್ಳುವೆನೆಂದು ಹೇಳಿ ಆ ಅನಾಥ ವಿಧವೆಯನ್ನು ರಾತ್ರಿಯಲ್ಲಿ ಅಡವಿಯಲ್ಲಿ ಬಿಟ್ಟು ಓಡಿ ಬಂದಿರು ವದು ಯಾವ ಪುರುಷನಿಗೂ ಶೋಭಿಸುವದಿಲ್ಲ. ನೀವು ಕಲಿತವರು, ವೇದಾಂತಿಗಳು. ತಾವು ಇಂತಹ ಹೀನ ಕೃತಿಯನ್ನು ಮಾಡುವದು ಹೇಸಿತನವಲ್ಲವೇ ? ಮಾನವನಲ್ಲಿಯ ದಯೆ, ಅಂತಃಕರಣ ಎಂಬ ಭಾವ ಗಳು ನಿಮ್ಮಲ್ಲಿ ಸುಟ್ಟು ಹೋಗಿದ್ದವೋ ? ಸಮಾಜಕ್ಕೆ ಹೆದರಿ ಓಡಿ ಬಂದಿರಿ. ಕೃತಿಯನ್ನು ಮಾಡುವ ಕಾಲಕ್ಕೆ ಸಮಾಜದ ಹೆದರಿಕೆ ನಿಮ್ಮ ಕಣ್ಣು ಮುಂದೆ ಬರಲಿಲ್ಲವೋ ? ನಿಮ್ಮೆದುರಿಗೆ ಬರೇ ಕಾಮು ಕುಣಿದನೋ ? ಒಂದು ಬಡಜೀವಿಯ ಜೀವನವನ್ನು ಹಾಳು ಮಾಡಿದಿರಿ. ಅದರಂತೆ ನಿಮ್ಮ ಮಕ್ಕಳಿಗೆ ಆಗಿದ್ದರೆ ಹೇಗೆ ಅನಿಸುವದು ? ಆ ವಿಧವೆಗೆ ಯಾರೂ ಕೇಳು ವವರು ಇದ್ದಿಲ್ಲವೆಂದು ತಿಳಿದು ನೀವು ಹಾಗೆ ವರ್ತಿಸಿದಿರಾ ? ದೇಶದ ಉದ್ಧಾರ ಮಾಡಲು ಚಳವಳಿಗೆ ಹೋದಿರಿ. ದೇಶದ ಉದ್ಧಾರ ದೂರುಳಿ ಯಿತು. ನಿಮ್ಮ ಉದ್ಧಾರವನ್ನೂ ನೀವು ಮಾಡಿಕೊಳ್ಳಲಿಲ್ಲ. ಆ ವಿಧ ವೆಯ ಉದ್ಧಾರವನ್ನಾದರೂ ಮಾಡಿದ್ದರೆ ದೇಶದ ಉದ್ಧಾರವನ್ನು ಮಾಡಿ ದಂತಾಗುತ್ತಿತ್ತು.

ಆಸ್ಪತ್ರೆಯಿಂದ ಅವಳನ್ನು ದೂರ ಎಲ್ಲಿಯೋ ಒಯ್ದು ಬಿಟ್ಟು ಬಂದಿರಿ ಏಕೆ ? ನಿಮ್ಮ ಹೆಸರಿಗೆ ಕಲಂಕ ಬರುವದೆಂದು ಹೆದರಿ ಬಿಟ್ಟು ಬಂದಿರಲ್ಲವೇ ? ನೀವು ಮಾಡಿದ ಕೃತಿಯು ಯಾರಿಗೂ ತಿಳಿಯಬಾರದೆಂದು

ಪಾಪ ಆ ವಿಧವೆಯನ್ನು ಪರ ಊರಲ್ಲಿ ಒಯ್ದು ಬಿಟ್ಟು ಬಂದಿರಿ. ಅಲ್ಲಿ ಯಾದರೂ ನೀವು ಅವಳಿಗೆ ಹೇಳದೆ ಓಡಿ ಬಂದಿರಿ. ಇಷ್ಟು ದ್ರಾವಿಡ ಪ್ರಾಣಾ ಯಾಮ ಕೃತಿಗಳಿಂದ ಅವಳನ್ನು ದೂರ ಇಡುವದಕ್ಕಿಂತ ಕೊಂದು ಹಾಕಿ ಬಂದಿದ್ದರೆ ನೆಟ್ಟಗಾಗುತ್ತಿದ್ದಿಲ್ಲವೇ? ಮನೆಯಲ್ಲಿ ಅಮ್ಮನು ಮಾಯಾ ದೇವಿಯೆಲ್ಲಿಯೆಂದು ಕೇಳಿದರೆ ನಿರ್ಭಯದಿಂದ ಆನಂದದಿಂದ ಸತ್ತಳೆಂದು ಹೇಳಿದಿರಿ. ಆ ವಿಧವೆ ತನ್ನ ಕೂಸು ಏನಾಯಿತೆಂದು ಕೇಳಿದರೆ ಏನು ಹೇಳಿದಿರಿ ತಾವು.

ಗಿರಿಧಾರಿಯ ಮಾತುಗಳನ್ನು ಕೇಳಿ ಕುಮಾರಿಲಭಟ್ಟರು ಮುಖ ವನ್ನು ಕೈಗಳಿಂದ ಮುಚ್ಚಿಕೊಂಡು ಕುಳಿತುಬಿಟ್ಟರು. ಏನು ಉತ್ತರ ಕೊಡಬೇಕೆಂಬುವದು ಅವರಿಗೆ ತೋಚಲಿಲ್ಲ.

“ ಮಾಯಾದೇವಿಯು ಎಲ್ಲಿರುವಳು ಹೇಳಿರಿ ? ನಿಮಗೆ ಗೊತ್ತಿರು ವದು. ಅಂದು ರಾಮಮಂದಿರದ ಹೊರಗೆ ನೀವು ಪ್ರೇಮಾನಂದನಿಗೆ ಮಾಯಾದೇವಿಯೆಂದು ಕರೆಯಲಿಲ್ಲವೇ ? ನಿಮಗೆ ಗೊತ್ತಿಲ್ಲವೆಂದು ಆಗಲೇ ತಾವು ಹೇಳಿದಿರಿ. ನೀವು ಕರೆದದ್ದನ್ನು ನಾನು ಕೇಳಿರುವೆ. ನಾನೇಕೆ ಎಲ್ಲರೂ ಕೇಳಿರುವರು. ಅವಳು ತಾನು ಮಾಯಾದೇವಿಯಲ್ಲವೆಂದು ಉತ್ತರ ಕೊಟ್ಟಳು. ನೀವು ಕೆಲವು ನಿಮಿಷಗಳ ಹಿಂದೆ ಅವಳು ಮಾಯಾದೇವಿ ಯೆಂದೇಕೆ ಹೇಳಿದಿರಿ ? ಅವಳು ಹೆತ್ತ ಮಗು ಸತ್ತಿಲ್ಲ. ಅದು ಎಲ್ಲಿರುವ ದೆಂದು ನಿಮಗೆ ಗೊತ್ತು. ಅದನ್ನಾದರೂ ಹೇಳಿರಿ. ”

“ ನನ್ನ ಪ್ರಾಣ ಹೋದರೂ ಅದನ್ನು ನಾನು ಹೇಳುವದಿಲ್ಲ ” ಎಂದು ಕುಮಾರಿಲಭಟ್ಟರು ತಲೆತಗ್ಗಿಸಿಕೊಂಡು ಉತ್ತರ ಕೊಟ್ಟರು.

“ ಮಾಯಾದೇವಿಯು ಬಂದರೆ— ”

“ ಅವಳೇ ಬಂದರೆ ವಿಚಾರ ಮಾಡುವೆನು. ಒಮ್ಮೆ ತಪ್ಪು ಮಾಡಿ ರುವೆನು. ಅದಕ್ಕೆ ಮತ್ತೆ ತಪ್ಪುಗಳನ್ನು ಜೋಡಿಸುತ್ತ ಹೋಗಲಾರೆ. ನನ್ನ ಜೀವನದಲ್ಲಿ ಘಟಿಸಿದ ತಪ್ಪು ಅದೊಂದೇ. ಅದು ಒಂದು ಜೀವನ ವನ್ನು ಹಾಳುಮಾಡಿತು. ಈ ಇಪ್ಪತ್ತು ವರುಷ ನಾನು ಆನಂದದಿಂದ ಕಾಲು ಕಳೆಯುತ್ತಿದ್ದೇನೆಂದು ನಿಮ್ಮೆಲ್ಲರಿಗೆ ಅನಿಸಿರಬಹುದು. ನನ್ನ ಹೊಟ್ಟೆಯಲ್ಲಿಯ ಕುದಿಯು ಯಾರಿಗೆ ಗೊತ್ತು ? ಮೋಸ ಮಾಡಿದೆ,

ಒಂದು ಜೀವಿಯ ಕುತ್ತಿಗೆಯನ್ನು ಕೊಯ್ದೆ ಎಂದು ಸದಾ ಮನಸ್ಸಿನಲ್ಲಿ ಕಟಿಯುತ್ತಿತ್ತು. ಅದನ್ನು ಸರಿಪಡಿಸಿಕೊಳ್ಳಲು ಸಾಧ್ಯವಿದ್ದಿಲ್ಲ. ಈ ಅವಧಿಯಲ್ಲಿ ಅವಳನ್ನು ಒಂದು ದಿನವಾದರೂ ಕಾಣಲಿಲ್ಲ. ಅವಳನ್ನು ಹುಡುಕಲು ನಾನು ಅಟ್ಟಿ ಬಂದ ದೇಶಕ್ಕೆ ಹೋಗಿ ಬಂದೆ. ಕಾಸಿಗೆ ಹೋಗಿರಬಹುದೆಂದು ಅಲ್ಲಿಗೆ ಹೋಗಿ ಹುಡುಕಿದೆ. ಬೈರಾಗಿಗಳ ಗುಂಪಿನಲ್ಲಿ ಶೋಧ ಮಾಡಿದೆ. ದೇಶ ಕೋಶಗಳನ್ನು ನಾನು ಸುತ್ತಾಡಿದರೂ ಅವಳು ನನಗೆ ದೊರೆಯಲಿಲ್ಲ, ಅವಳು ಸತ್ತಿರಬಹುದೆಂದು ತಿಳಿದುಕೊಂಡೆ. ಕೊನೆಗೆ ನಿರಾಶನಾಗಿ ಶೋಧವನ್ನು ಬಿಟ್ಟೆ. ಇದು ನಿಮಗೆ ಯಾರಿಗಾದರೂ ಗೊತ್ತಿರುವದೋ ? ಪ್ರತಿ ವರುಷ ಎರಡು ತಿಂಗಳ ತೀರ್ಥಯಾತ್ರೆಗೆ ಹೋಗುತ್ತಿದ್ದೆ. ಏತಕ್ಕೆ ? ಅವಳನ್ನು ಹುಡುಕುವದರ ಸಲುವಾಗಿ. ನಮ್ಮಿಬ್ಬರ ಕರ್ಮದಲ್ಲಿ ಅಷ್ಟೇ ಇತ್ತೆಂದು ತಿಳಿದುಕೊಂಡು ಸುಮ್ಮನಾದೆ.

ಅಂದು ರಾಮಮಂದಿರದಲ್ಲಿ ಅವಳು ಕುಳಿತ ರೀತಿ, ವೇಷಭೂಷಣಗಳನ್ನು ನೋಡಿದರೆ ಅವಳು ಮಾಯಾದೇವಿ ಇರಬಹುದೆಂಬ ತರ್ಕವು ನನಗೆ ಬರಲಿಲ್ಲ. ಅವಳ ಕಂಠವನ್ನು ಕೇಳಿ ಅವಳು ಮಾಯಾದೇವಿಯಲ್ಲವೆಂದು ತಿಳಿದುಕೊಂಡೆ. ಆದರೂ ಒಂದು ವಿಧವಾದ ಅನುಮಾನ. ಹೊರಗೆ ದಿಟ್ಟಿಸಿ ಅವಳ ಮೊಗವನ್ನು ನೋಡಿದೆ. ಅವಳೇ ಮಾಯಾದೇವಿಯೆಂದು ಅನಿಸಿತು. ಅದಕ್ಕೆ ನಾನು ಅವಳನ್ನು ಕೇಳಿದೆ. ಅವಳು ಅಲ್ಲೆಂದು ಉತ್ತರ ಕೊಟ್ಟದ್ದು ಅವಳ ಉದಾತ್ತ ಜೀವನದ ಹೆಗ್ಗುರುತು. ಅವಳು ನನ್ನನ್ನು ಗುರುತಿಸಿರಬಹುದು. ನಾನೊಬ್ಬನು ತಪ್ಪು ಮಾಡಿದೆನೆಂದು ಅವಳು ತಪ್ಪು ಮಾಡಲಿಲ್ಲ. ಸಮಯಕ್ಕೆ ಸರಿಯಾಗಿ ಉತ್ತರ ಕೊಟ್ಟಳು. ಜೋಗಿಯ ವೇಷದಲ್ಲಿದ್ದು ಜೋಗಿಯಂತೆಯೇ ನನಗೆ ಹೇಳಿದಳು. ಅವಳ ಪರಿವರ್ತನೆಯನ್ನು ಕಂಡು ನಾನು ಅವಳ ಪಾದದಲ್ಲಿಯ ಮಣ್ಣು ಎಂದು ಅನಿಸಿತು.

ಕುಮಾರಿಲಭಟ್ಟರ ಈ ಮಾತುಗಳನ್ನು ಕೇಳಿ ಗಿರಿಧಾರಿಗೆ ತಮ್ಮಪ್ಪನ ಬಗ್ಗೆ ತಪ್ಪು ಕಲ್ಪನೆ ಮಾಡಿಕೊಂಡಿದ್ದನೆಂದು ತಿಳಿಯಿತು.

ತಾನು ಮಾತನಾಡಿದ್ದು ತಪ್ಪಾಯಿತೆಂದು ತಿಳಿದುಕೊಂಡನು.

“ ಗಿರಿಧಾರಿ, ನೀನು ಮಾತನಾಡಿದ್ದಕ್ಕೆ ನನಗೇನೂ ಸಿಟ್ಟು ಬಂದಿರು

ವದಿಲ್ಲ, ಅನ್ಯಾಯುವನ್ನು ನೀನು ಪ್ರತಿಭಟಿಸುವಿಯೆಂದು ನನಗೆ ಸಂತೋಷ ವಾಯಿತು. ತಂದೆ ತಾಯಿಗಳೆಂಬ ಭಾವನ್ನು ಬದಿಗೊತ್ತಿ ಅವರ ಅನ್ಯಾಯುಕ್ಕೆ ಎದುರಾಗಿ ನಿಲ್ಲಲು ಹಿಂದೆ ಮುಂದೆ ನೀನು ನೋಡುವವನಲ್ಲ ವೆಂದು ಕಂಡು ನನಗೆ ಆನಂದವಾಯಿತು. ಈ ಸ್ವಭಾವ ನಿನ್ನ ಅಜ್ಜನದು, ನನ್ನ ತಂದೆಯುದು ಇತ್ತು" ಎಂದು ಕುಮಾರಿಲಭಟ್ಟರು ನುಡಿದರು.

ಮೇಧಾವಿನಿಯು ಮಧುಮತಿಯೊಡನೆ ಕಾಲೇಜದಿಂದ ಬಂದಳು. ಎಲ್ಲರೂ ಸ್ತಬ್ಧರಾಗಿ ಕುಳಿತದ್ದು ಕಂಡು ಮಧುಮತಿಯು,

" ಏಕೆ ಭಟ್ಟರೇ ಎಲ್ಲರೂ ಬಾಯಿಗೆ ಬೀಗವನ್ನು ಹಾಕಿ ವರು. ಎಲ್ಲರ ಬಾಯಿಯಲ್ಲಿ ನುಂಗಲಾರದಂತಹ ಉಂಡಿ ಇರುವದೋ " ಎಂದು ಕೇಳಿದಳು.

" ನಾನು ಬೀಗ ಹಾಕಿಲ್ಲ, ನಿನ್ನನ್ನು ನೋಡಿ ಎಲ್ಲರೂ ಹೊಲಿದು ಕೊಂಡಿರುವರು. "

" ನನ್ನನ್ನು ನೋಡಿ ಏಕೆ ? ನಾನೇನು ಭೂತಳೋ ? ಬ್ರಹ್ಮ ರಾಕ್ಷಸಿಯೋ ? "

" ನೀನು ಭೂತಳೂ ಅಲ್ಲ; ಬ್ರಹ್ಮರಾಕ್ಷಸಿಯೂ ಅಲ್ಲ. "

" ಹಾಗಾದರೆ ಮತ್ತೇನು ? "

" ಕರ್ಮಧ ಕಾಳಿ, ಜನರ ಬಾಯಿಂದ ಒಂದು ಶಬ್ದ ಸಿಕ್ಕರೆ ಸಾಕು ನಿನ್ನ ಮಾತಿನ ಸುಳಿಯೊಳಗೆ ಸಿಕ್ಕು ಒದ್ದಾಡುವರು. "

" ತಿಳಿಯದೆ ಮಾತನಾಡುವ ಹುಚ್ಚಿಯೆಂದು ತಿಳಿದುಕೊಂಡಿರ ಬಹುದು. "

" ಯಾರೂ ಹಾಗೆ ತಿಳಿದುಕೊಂಡಿಲ್ಲ. "

" ಏನು ವ್ರತಧಾರಿಗಳೇ, ಮತ್ತೇಕೆ ಇಲ್ಲಿಗೆ ತಮ್ಮ ಆಗಮನ?- ಏನಾದರೂ ಲೋಕಸೇವೆ ಇತ್ತೋ ? "

" ನಾನು ಹೋದಲ್ಲಿ ಬಂದಲ್ಲಿ ಲೋಕಸೇವೆಯಾಗಲೀ ಸಮಾಜಸೇವೆ ಯಾಗಲೀ ಇರುವದೆಂದು ನೀನು ತಿಳಿದುಕೊಂಡಿರುವಿಯೇನು ? "

" ಇಲ್ಲಿ ಇದ್ದಲ್ಲಿ ಬೆಕ್ಕು ಬರುವದು. "

" ನೀನು ಹಳೇ ನಿಯಮವನ್ನು ಹೇಳುವಿ. ಬೆಕ್ಕು ಇದ್ದಲ್ಲಿಗೆ ಇಲಿಗಳು ಹೋಗುವವು. "

" ನಾನು ಕೇಳಿದ್ದಿಲ್ಲ. "

" ಸಮಾಜ ಸೇವಕರಿಗೆ ಇಂತಹ ಪ್ರಸಂಗಗಳು ಎಷ್ಟೋ ಬರುವವು. ಬೆಕ್ಕಿನೆದುರಿಗೆ ಇಲಿಗಳು ಹೋಗುವಂತೆ ಮಾಡಬೇಕಾಗುವದು. ಇಲಿಗಳನ್ನು ಕಂಡು ಬೆಕ್ಕು ಓಡಿ ಹೋಗಬೇಕಾಗುವದು " ಎಂದು ಗಿರಿಧಾರಿ ಉತ್ತರ ಕೊಟ್ಟನು.

" ಅವನ ಮಾತು ಯಾವಾಗಲೂ ಹೀಗೇ " ಎಂದು ಮೇಧಾವಿನಿ ಅಂದಳು.

" ವ್ರತಧಾರಿಗಳೇ, ಇಲಿಗಳು ನಿಮ್ಮನ್ನು ಬೆನ್ನಟ್ಟಿದ್ದವೋ ? "

" ನಾನು ವ್ರತಧಾರಿಯಲ್ಲ; ಗಿರಿಧಾರಿ. "

" ಏಕೆ ವ್ರತಧಾರಿಯೆಂಬುದು ಮನಸ್ಸಿಗೆ ಬರಲಿಲ್ಲವೋ ? "

" ಹಾಗೇನೂ ಅಲ್ಲ. "

" ಹೆಣವನ್ನು ಎತ್ತುವವನು ಇಲ್ಲವೆ ಹೊರುವವನು ವ್ರತಧಾರಿ. ಸಮಾಜಸೇವಕರು ಹೆಣವನ್ನು ಹೊರಬೇಕಾಗುವದು" ಎಂದಳು ಮಧುಮತಿ.

" ನಿನ್ನದು ಯಾವಾಗಲೂ ಕುಚೇಷ್ಟೆಯ ಮಾತುಗಳು " ಗಿರಿಧಾರಿ ನುಡಿದನು.

" ನಾನು ಆಡುವದು ಕುಚೇಷ್ಟೆಯ ಮಾತುಗಳೆಂದು ಮೇಧಾವಿನಿ ಹೇಳಲಿ. "

" ಬೇಲಿಗೆ ಓತೀಕಾಟ ಸಾಕ್ಷಿ ಕೊಟ್ಟಂತೆ " ಗಿರಿಧಾರಿ ಅಂದನು.

"ಮಧುಮತಿ ಸಾಕುಮಾಡು ನಿನ್ನ ಮಾತು" ಮೇಧಾವಿನಿ ಹೇಳಿದಳು.

ಮಧುಮತಿ ಹೋಗಿ ಬರುವೆನೆಂದು ಹೇಳಿದಳು. ಮೇಧಾವಿನಿ ತಾನೂ ಬರುವೆನೆಂದು ಹೇಳಿ ಕೋಣೆಯಲ್ಲಿ ಪುಸ್ತಕಗಳನ್ನಿಟ್ಟು ಬಂದಳು. ಮೇಧಾವಿನಿ ಮಧುಮತಿಯನ್ನು ಕರೆದ ಕೊಂಡು ಹೋದಳು.

" ಸಮಾಜಸೇವಕರೇ, ನೀವು ನಮ್ಮ ಜತೆಯಲ್ಲಿ ಬರುವದಿಲ್ಲವೋ ?" ಎಂದು ಕೇಳುತ್ತ ಮಧುಮತಿ ಹೋದಳು.

ಗಿರಿಧಾರಿ ಅದಕ್ಕೆ ಏನೂ ಉತ್ತರ ಕೊಡಲಿಲ್ಲ.

ಮಧುಮತಿ-ಮೇಧಾವಿನಿಯರು ಹೋಗಿ ಐದು ನಿಮಿಷಗಳಾಗಿರಬಹುದು. ಮೇಧಾವಿನಿಯನ್ನು ಕೇಳುತ್ತ ಪ್ರೇಮನಂದಿನಿ ಅವರ ಮನೆಗೆ ಬಂದಳು. ಗಿರಿಧಾರಿಯು ಅವಳು ಬರುವದನ್ನು ಕಂಡು ಕರೆಯಲಿಕ್ಕೆ ಹೋದನು.

ಪ್ರೇಮನಂದಿನಿಯು ಇತ್ತ ಕಡೆಗೆ ಬಂದದ್ದು ಮೊದಲನೇ ಸಲ. ಅವಳನ್ನು ಮೇಧಾವಿನಿ ಎಷ್ಟೋ ಸಲ ಕರೆದರೂ ಇಂದು ನಾಳೆಂದು ಮುಂದೆ ಹಾಕುತ್ತ ನಡೆದಿದ್ದಳು. ಮೊನ್ನೆ ವಿದ್ಯಾಚರಣನ ಮನೆಯಲ್ಲಿ ಗಿರಿಧಾರಿಯ ಮಾತುಗಳನ್ನು ಕೇಳಿ ಒಮ್ಮೆಯಾದರೂ ಅವರ ಮನೆಗೆ ಹೋಗಿ ಬರಬೇಕೆಂದು ಅನಿಸಹತ್ತಿತು. ಅವಳ ಮನಸ್ಸಿನಲ್ಲಿಯ ವಿಚಾರ, ತಲೆಯಲ್ಲಿ ತಿರುಗುತ್ತಿರುವ ಹಿಂದಿನ ದೃಶ್ಯಗಳು— ಎಷ್ಟು ಬಗೆಗಳಿಂದ ಇವುಗಳನ್ನು ಹೇಳಿದರೂ ಸಾಲದು. ಹೃದಯದಲ್ಲಿಯ ದುಃಖದ ವೇಗವನ್ನು ಹತ್ತಿಕ್ಕಿ ಧೈರ್ಯವನ್ನು ತೆಗೆದುಕೊಂಡು ಮೇಧಾವಿನಿಯ ಮನೆಯ ಕಡೆಗೆ ಬಂದಿದ್ದಳು. ವಧಸ್ತಂಭಕ್ಕೆ ಒಯ್ಯುವ ಪಶುವಿನಂತೆ ಅವಳು ನಡೆದಿದ್ದಳು. ಗಿರಿಧಾರಿಯ ದನಿಯನ್ನು ಕೇಳಿ ಅವಳಿಗೆ ಎಷ್ಟೋ ಧೈರ್ಯ ಬಂದಿತು. ತನ್ನನ್ನು ಅನುಕಂಪದಿಂದ ನೋಡುವ ವ್ಯಕ್ತಿ ಇವನೊಬ್ಬನಿರುವನೆಂದು ತಿಳಿದುಕೊಂಡಿದ್ದಳು. ಗಿರಿಧಾರಿಯು ಪ್ರೇಮನಂದಿನಿಯನ್ನು ಕರೆದುಕೊಂಡು ಮನೆಯೊಳಗೆ ಬಂದನು. ಕುಮಾರಿಲಭಟ್ಟರು ಅವಳ ಬರುವನ್ನು ಕಂಡು ಎದ್ದು ಒಳಗಿನ ಕೋಣೆಗೆ ಹೋದರು. ಪ್ರೇಮನಂದಿನಿಗೆ ತನ್ನ ತಾಯಿಯನ್ನು ತೋರಿಸಿ ಇವಳು ನನ್ನ ತಾಯಿ ಮೈತ್ರೇಯಿ, ಎಂದು ಗಿರಿಧಾರಿ ಹೇಳಿದನು. ಅವಳು ಹೋಗಿ ಮೈತ್ರೇಯಿಗೆ ನಮಸ್ಕಾರ ಮಾಡಿ ಅವಳ ಬದಿಯಲ್ಲಿ ಕುಳಿತುಕೊಂಡಳು.

" ಅಮ್ಮಾ, ಇವರು ಪ್ರೇಮನಂದಿನಿಯವರು. ನನ್ನ ಗುರುಗಳು. ನನ್ನಲ್ಲಿ ವಿವೇಕೋದಯ ಮಾಡಿದವರು ಇವರು. "

" ನಿನ್ನ ಗುರುಗಳು ಹೇಗೆ ? " ಎಂದು ಮೈತ್ರೇಯಿ ಕೇಳಿದಳು.

" ಒಂದು ಪ್ರಸಂಗದಿಂದ ಗುರುಗಳಾದರು. ತಮಗೆ ಚಹ ಇಲ್ಲವೆ ಕಾಫಿಯನ್ನು ಕೊಡಲೋ " ಎಂದು ಪ್ರೇಮನಂದಿನಿ ಕೇಳಿದನು.

" ಎರಡೂ ಬೇಡ. ಮನೆಯಲ್ಲಿ ತೆಗೆದುಕೊಂಡು ಬಂದಿರುವೆನು.

ಮೇಧಾವಿನಿಯು ಎಲ್ಲಿ ಹೋಗಿರುವಳು ? ”

“ ಅವಳು ಮಧುಮತಿಯ ಸಂಗಡ ಇದೇ ಹೊರಗೆ ಹೋದಳು ” ನುಡಿದನು ಗಿರಿಧಾರಿ.

“ ನಿಮ್ಮ ಮಗಳು ಗುಣವಂತಿ. ಅವಳದು ಗಂಭೀರ ಸ್ವಭಾವ.”

“ ಅವಳು ಚಿಕ್ಕಂದಿನಲ್ಲಿ ಬಹಳೇ ಉಲಕೋಚಿ. ಅವಳ ಈಗಿನ ಸ್ವಭಾವವನ್ನು ನೋಡಿದರೆ ಮೊದಲು ಅವಳು ಉಲಕೋಚಿ ಸ್ವಭಾವದವಳಿದ್ದಳೆಂದು ಹೇಳಿದರೆ ಯಾರೂ ನಂಬಲಾರರು ” ಎಂದು ಮೈತ್ರೇಯಿ ನುಡಿದಳು.

“ ಹುಡುಗರು ವಯಸ್ಸಿಗೆ ಬಂದ ಮೇಲೆ ಸ್ವಭಾವ ಬದಲಾಗುವದು.”

“ ಅವಳು ಕಾಲೇಜಕ್ಕೆ ಹೋಗಹತ್ತಿದ ಮೇಲೆ ಅವಳ ಸ್ವಭಾವದಲ್ಲಿ ಬಹಳೇ ಪರಿವರ್ತನೆಯಾಗುವದು ” ನುಡಿದಳು ಪ್ರೇಮನಂದನಿ.

“ ನಾವೇನು ಅವಳನ್ನು ಕಾಲೇಜಕ್ಕೆ ಕಳುಹಿಸತಕ್ಕವರಲ್ಲ. ನಾವು ಹಳೇ ಸಂಪ್ರದಾಯದವರು. ಹೆಣ್ಣು ಹುಡುಗರಿಗೆ ಇಷ್ಟು ಕಲಿಸಿ ಮಾಡುವದೇನು ? ಆದರೆ ಅವಳು ಮುಂದೆ ಕಲಿಯುವೆನೆಂದು ಹಟ ಹಿಡಿದಳು. ಗಿರಿಧಾರಿಯಂತೂ ಕಲಿಯಲೇ ಇಲ್ಲ. ಸರಸ್ವತಿಯ ಸಂಗಡ ಜಗಿದಾಡಿ ಬಂದಿರುವೆನೆಂದು ಗಿರಿಧಾರಿ ಹೇಳುವನು. ಓದುವದರಿಂದ ವಿದ್ಯೆ ಬರುವದಿಲ್ಲವೆಂದು ಆವನು ಹೇಳುವನು. ಹೀಗಾಗಿ ಮೇಧಾವಿನಿ ಮುಂದೆ ಕಲಿಯಲು ಹೋದಳು. ”

“ ಕಲಿಯುವದು ಮುಗಿಯಿತಲ್ಲ. ”

“ ಅಂತೂ ಮುಗಿಸಿದಳು; ಇನ್ನು ಒಂದು ತಿಂಗಳಿಗೆ ಮುಗಿಯುವದು. ಆ ಮೇಲೆ ಅವಳ ಮುಂದಿನ ವಿಚಾರ. ”

“ ಮುಂದಿನ ವಿಚಾರ ಅವಳು ಮಾಡಿರುವಂತೆ ತೋರುವದು. ”

“ ನನಗೆ ಸ್ವಲ್ಪ ಗೊತ್ತಾಗಿರುವದು. ಅವಳೇನು ನನಗೆ ಹೇಳಿರುವದಿಲ್ಲ. ”

“ ಯಾರಿಂದ ಗೊತ್ತಾಯಿತು ? ಯಾರು ಹೇಳಿದರು ? ”

“ ಮಧುಮತಿಯಿಂದ. ರಾಮ ಜನನ ಕಾಲಕ್ಕೆ ನಿಮ್ಮ ಮನೆಯಲ್ಲಿ ಮೇಧಾವಿನಿ-ವಿದ್ಯಾಚರಣರು ತೊಟ್ಟಿಲದಲ್ಲಿ ಹಾಕಿದ್ದನ್ನು ಮಧುಮತಿಯು

ಹೇಳಿದಳು. ಮೇಧಾವಿನಿಯು ಅದನ್ನು ಕೇಳಿ ಮುಗುಳುನಗೆ ಬೀರಿದಳು. ಉತ್ತರವನ್ನು ಕೊಟ್ಟವರಂತೆ ನನ್ನ ಮೊಗವನ್ನು ನೋಡಿದಳು. ಹೆಂಗಸರ ಇಂಗಿತವನ್ನು ಹೆಂಗಸರು ತೀವ್ರ ಅರಿತುಕೊಳ್ಳುವರು. ನಾನೇನು ಉತ್ತರ ಕೊಡಲಿಲ್ಲ. ಸುಮ್ಮನೆ ಅವಳನ್ನು ನೋಡಿದೆ. "

" ಮಧುಮತಿಯು ಅವಳಿಗೆ ಹೂಗಳನ್ನು ಮುಡಿಸಿದಳು. "

" ತಾವು ಬಹಳೇ ಆಸ್ಥೆಯಿಂದ ರಾಮನವಮಿಯನ್ನು ಮಾಡಿದಿರೆಂದು ಹೇಳಿದಳು. ತಾವು ಪದ್ಮನಾಭನಿಗೆ ಏನಾಗಬೇಕು ? "

" ನಾನು ಅವರ ಮನೆಯಲ್ಲಿ ಆಳು, ಮನೆಯ ಕೆಲಸಬೊಗಸೆಗಳನ್ನು ಮಾಡಿಕೊಂಡು ಅವರಲ್ಲಿಯೇ ಊಟ ಮಾಡಿಕೊಂಡು ಇರುವೆನು. ಅವರು ನನ್ನ ಯಜಮಾನ. ನಾನು ಅವರ ಆಳು. ಇದೇ ಸಂಬಂಧ ನಮ್ಮ ನಡುವೆ. "

" ಇದಕ್ಕೂ ಮೊದಲು ತಮ್ಮನ್ನು ಎಲ್ಲಿಯೋ ನೋಡಿದಂತೆ ಅನಿಸುವದು. "

" ಎಲ್ಲಿಯೋ ಏಕೆ ! ತಮ್ಮ ಮನೆಯಲ್ಲಿಯೇ ನೋಡಿರುವಿರಿ. ನಾನು ತಮ್ಮ ತಲೆಬಾಗಿಲದಲ್ಲಿ ಶೋಕಿಸುತ್ತ ನಿಂತಾಗ್ಗೆ ತಾವು ಒಳಗಿನಿಂದ ಬಂದು ನನ್ನನ್ನು ಸಮಾಧಾನಪಡಿಸಿ ಒಳಗೆ ಕರೆದುಕೊಂಡು ಹೋದಿರಿ. "

" ಹೌದು ನೆನಪಾಯಿತು. ತಾವು ಶಿದ್ದಾಪುರ ತಾಲೂಕಿನ ಮಾಯಾದೇವಿಯಲ್ಲವೇ ? "

" ಹೌದು ಮಾಯಾದೇವಿ. ಅಂದು ತಮ್ಮ ಪಾದದಡಿಯಲ್ಲಿ ಬಿದ್ದುಕೊಂಡಿದ್ದ ಮಾಯಾದೇವಿ, ಬಗಲಲ್ಲಿ ಗಂಟು ತೆಗೆದುಕೊಂಡು ಬಂಡಿಯಲ್ಲಿ ಕುಳಿತುಹೋದ ಮಾಯಾದೇವಿ. "

" ನಿನ್ನನ್ನು ನನ್ನ ಮನೆಯಲ್ಲಿಟ್ಟುಕೊಳ್ಳುವ ಭಾಗ್ಯ ನನ್ನದಾಗಲಿಲ್ಲ."

" ಅಂದು ತಮ್ಮ ಮನೆಯಲ್ಲಿ ಬರಮಾಡಿಕೊಂಡಿದ್ದಿರಲ್ಲ ? ತಾವು ಮಂಡನಮಿಶ್ರರ ಹೆಂಡಂದಿರು. "

" ಯಾವ ಮಂಡನಮಿಶ್ರ ? "

" ನನ್ನನ್ನು ಬಂಡಿಯಲ್ಲಿ ಕರೆದುಕೊಂಡು ಹೋದವರು ಮಂಡನ

ಮಿಶ್ರರಲ್ಲವೇ ? ಹೆರಿಗೆಯ ಆಸ್ಪತ್ರೆಯಲ್ಲಿ ಓಡಾಡಿದವರು ಮಂಡನಮಿಶ್ರ ರಲ್ಲವೇ ? ”

“ ಅಮ್ಮ, ಅಪ್ಪನು ಇವರಿಗೆ ಹೆಸರು ಮಂಡನಮಿಶ್ರರೆಂದು ಹೇಳಿ ರುವನು. ” ಎಂದು ಗಿರಿಧಾರಿಯು ಪ್ರೇಮನಂದಿನಿಯ ಮೊಗವನ್ನು ನೋಡುತ್ತ ಹೇಳಿದನು.

“ ನಿಮ್ಮ ಮನೆಯವರ ಹೆಸರು ಮಂಡನಮಿಶ್ರರಲ್ಲವೆ ? ”

“ ಅವರ ಹೆಸರು ಕುಮಾರಿಲಭಟ್ಟರು ” ಎಂದನು ಗಿರಿಧಾರಿ.

ಇವೆಲ್ಲ ಮಾತುಗಳನ್ನು ಕೇಳುತ್ತ ಕುಮಾರಿಲಭಟ್ಟರು ಒಳಗೆ ಕೋಣೆ ಯಲ್ಲಿ ಕುಳಿತುಕೊಂಡಿದ್ದರು. ಮನದಲ್ಲಿ ಹೊರಗೆ ಬಂದು ಅವಳನ್ನು ನೋಡಬೇಕೆಂಬ ಆಶೆ. ಹೊರಗೆ ಬರಲು ಕಾಲುಗಳು ಏಳದಾದವು. ಏನೋ ಒಂದು ತರಹದ ಅಂಜಿಕೆಯು ಕುಮಾರಿಲಭಟ್ಟರನ್ನು ಸುತ್ತಿಕೊಂ ಡಿತ್ತು. ಆ ಅಂಜಿಕೆಯಿಂದ ಜೋರಾಗಿ ಬೆವರಹತ್ತಿದರು. ಬುದ್ಧಿಗೂ ಭಾವಕ್ಕೂ ತಿಕ್ಕಾಟ ಪ್ರಾರಂಭವಾಯಿತು. ಭಾವವು ಕುಮಾರಿಲಭಟ್ಟರನ್ನು ಮುಂದೋಡಿಸಿದರೆ ಬುದ್ಧಿಯು ಅವರನ್ನು ಹಿಂದಕ್ಕೆ ನೂಕುತ್ತಿತ್ತು. ಅಂಜಿ ಕೆಯಿಂದ ಕಾಲುಗಳು ನಡುಗಹತ್ತಿದವು. ಗಂಟಲವು ಆರಿ ಹೋಯಿತು. ಮುಖದ ಮೇಲಿನ ಕಾಂತಿ ಕಂದಿಹೋಯಿತು. ಕಣ್ಣುಗಳು ಒಮ್ಮೆಲೇ ಒಳಸೆಟ್ಟವು. ಪ್ರೇಮನಂದಿನಿಯೆಂದರೆ ತಾನು ಮಾಡಿದ ಅಪರಾಧಗಳ ಬಗ್ಗೆ ಶಿಕ್ಷೆ ವಿಧಿಸುವ ದೇವತೆಯೆಂದು ಕುಮಾರಿಲಭಟ್ಟರು ತಿಳಿದು ಕೊಂಡರು.

ತಮ್ಮ ಹಿಂದಿನ ಜೀವನದ ಸನ್ನಿವೇಶಗಳು ನೆನಪಾಗಿ ಆ ಸನ್ನಿವೇಶ ಗಳಲ್ಲಿ ನಟಿಸಿದ ಪಾತ್ರಗಳು ಎದುರಿಗೆ ಬಂದರೆ ಪ್ರತಿಯೊಬ್ಬ ಮಾನವನಿಗೆ ಆ ಸನ್ನಿವೇಶದಿಂದ ಆಗತಕ್ಕ ಪರಿಣಾಮವು ಆಗೇ ತೀರುವದು.

ಮನದಲ್ಲಿಯ ದುಃಖವನ್ನಾಗಲೀ, ಕ್ರೋಧವನ್ನಾಗಲೀ, ಸೇಡಿನ ಭಾವವನ್ನಾಗಲೀ ಏನೂ ವ್ಯಕ್ತಮಾಡದೆ ಶಾಂತಯುಕ್ತದನಿಯಿಂದ ಪ್ರೇಮ ನಂದಿನಿಯು ಮಾತನಾಡುತ್ತಿರುವದು ಕುಮಾರಿಲಭಟ್ಟರ ಹೃದಯವನ್ನು ನುಚ್ಚುನೂರಾಗಿ ಮಾಡಿತು. ಪ್ರಾಣವನ್ನು ಗಾಸಿಗೊಳಿಸಹತ್ತಿತು. ತಪ್ಪು ಮಾಡಿದವರಿಗೆ, ಕ್ರೋಧದಿಂದ ಒದರಾಡಿ ಚೀರಾಡಿದವರಿಗೆ, ಅವರಿಗೆ ಕ್ರೋಧ

ಬಂದು ಪ್ರತ್ಯುತ್ತರ ಕೊಡಬಹುದು. ಹೃದಯಕ್ಕೆ ಬರೆಕೊಟ್ಟಂತಾಗುವದಿಲ್ಲ. ಅವರ ತಪ್ಪನ್ನು ಎಣಿಸದೆ ಅನುರಾಗದಿಂದ ನಡೆದುಕೊಂಡರೆ ಆ ತಪ್ಪುಗಾರನ ಹೃದಯಕ್ಕೆ ಕೊಡುವ ಪೆಟ್ಟು ಬಹಳೇ ದೊಡ್ಡದು. ಈ ಪೆಟ್ಟಿನಿಂದ ಅವನಲ್ಲಿ ಪರಿವರ್ತನೆಯಾದರೂ ಆಗುವ ಸಂಭವವುಂಟು.

ಈ ವಿಚಿತ್ರ ಸನ್ನಿವೇಶದಲ್ಲಿ ಸಿಲುಕಿದ ಪ್ರೇಮನಂದಿನಿಯು ಧೈರ್ಯದಿಂದ ಕುಳಿತಿದ್ದಳು.

" ಮಂಡನಮಿಶ್ರರು ಒಳಗಿರುವರು " ನುಡಿದನು ಗಿರಿಧಾರಿ.

ಕುಮಾರಿಲಭಟ್ಟರಿಗೆ ಕೇಳಿಸಿತು ಈ ಮಾತು. ಅವರು ಹುಚ್ಚು ಹಿಡಿದವರಂತೆ ಹೊರಗೆ ಬರುವದನ್ನು ಕಂಡು ಗಿರಿಧಾರಿಯು ಗಾಬರಿಯಾದನು. ಜೋಲಿ ಹೊಡೆಯುತ್ತ, ನಟ್ಟ ಕಣ್ಣುಗಳ ಬಯಲು ದೃಷ್ಟಿಯಿಂದ ನೋಡುತ್ತ ಕುಮಾರಿಲಭಟ್ಟರು ಹೊರಗೆ ಬಂದು ಕುಳಿತುಕೊಂಡರು. " ಮಾಯಾದೇವಿ " ಎಂದು ಕರೆದರು.

ಅದನ್ನು ಕೇಳುತ್ತಲೇ ಪ್ರೇಮನಂದಿನಿಯು ಥಟ್ಟನೆ ಎದ್ದು ಮರು ಮಾತನಾಡದೆ ಹೊರಟು ಹೋದಳು.

ತಮ್ಮ ಹಳ್ಳಿಗೆ ಬಂದ ಮಂಡನಮಿಶ್ರರೇ ಗಿರಿಧಾರಿಯ ತಂದೆ ಕುಮಾರಿಲಭಟ್ಟರೆಂದು ಪ್ರೇಮನಂದಿನಿಯು ಅರಿತುಕೊಂಡಳು; ಇಪ್ಪತ್ತು-ಇಪ್ಪತ್ತೆರಡು ವರುಷಗಳ ಮೇಲೆ ಮಂಡನಮಿಶ್ರನ ಭೆಟ್ಟಿ. ಕುಮಾರಿಲಭಟ್ಟರು ತಾನು ಹಡೆದ ಕೂಸನ್ನು ಕೊಂದು ಹಾಕಿರುವರೋ ಎಂಬ ಸಂಶಯ ಪ್ರೇಮನಂದಿನಿಗೆ ಬರಹತ್ತಿತು. ಕೂಸು ಹುಟ್ಟಿದ ಕ್ಷಣವೇ ಮೃತಪಟ್ಟಿತೆಂದು ಕುಮಾರಿಲಭಟ್ಟರು ಹೇಳಿದ್ದು ಈಗ ಅವಳಿಗೆ ನಂಬಿಗೆ ಹುಟ್ಟಲಿಲ್ಲ. ಕೂಸನ್ನು ಎಲ್ಲಿಯೋ ಬಿಟ್ಟು ಬಂದಿರಬಹುದೆಂದು ಪ್ರೇಮನಂದಿನಿಗೆ ಅನಿಸಹತ್ತಿತು.

ಈ ಕೂಸಿನ ವಿಚಾರದಲ್ಲಿ ಕುಮಾರಿಲಭಟ್ಟರು ಮಾಡಿದ ಎಲ್ಲ ಮೋಸವನ್ನು ಅವಳು ಮರೆತುಬಿಟ್ಟಳು. ಇಷ್ಟು ದಿನಗಳ ಮೇಲೆ ಕುಮಾರಿಲಭಟ್ಟರು ಭೆಟ್ಟಿಯಾಗುವದೆಂದರೆ ದೇವರ ಸಂಕಲ್ಪವು ಏನೋ ಇರುವದೆಂದು ಅವಳು ತಿಳಿದುಕೊಂಡಳು. ಭರದಿಂದ ಹೊರಟವಳು ಬೀದಿಯ ಬದಿಯಲ್ಲಿ ನಿಂತು ವಿಚಾರಮಾಡಹತ್ತಿದಳು. ಕುಮಾರಿಲಭಟ್ಟರನ್ನು ಹೋಗಿ

ಕೇಳಬೇಕೆಂದು ಅನಿಸಹತ್ತಿತು. ಆದರೆ ಕಾಲುಗಳು ಮುಂದೆ ಹೋಗಲು ಒಪ್ಪಲಿಲ್ಲ. ಮನವು ಮಾತ್ರ ಹಿಂದೋಡುತ್ತಿತ್ತು. ನನ್ನ ಕೂಸು ಎಲ್ಲಿ ಯಾದರೂ ಜೀವಂತವಿದ್ದರೆ ಅದನ್ನು ನನಗೆ ತಂದುಕೊಡು ಇಲ್ಲವಾದರೆ ನನಗಾದರೂ ಹೇಳಿದರೆ ಹೋಗಿ ನೋಡಿಕೊಂಡು ಬರುವೆ ಎಂದು ಕುಮಾರಿ ಲಭಟ್ಟರಿಗೆ ಕೇಳಬೇಕೆಂದು ಪ್ರೇಮನಂದಿನಿಯು ಮನದಲ್ಲಿ ನಿರ್ಧಾರ ಮಾಡಿಕೊಂಡು ನಿಂತ ಸ್ಥಳದಿಂದ ಭಟ್ಟರ ಮನೆಯ ಕಡೆಗೆ ನಡೆದಳು.

ವಿಚಾರ ಮಾಡುತ್ತ ನಡೆದದ್ದರಿಂದ ಬಂದ ಬೀದಿಯನ್ನು ಬಿಟ್ಟು ಎರಡನೇ ಬೀದಿಯನ್ನು ಸೇರಿದಳು. ನಡೆದಳು, ನಡೆದಳು, ಎಷ್ಟು ನಡೆದರೂ ಅವಳಿಗೆ ಈ ಕುಮಾರಿಲಭಟ್ಟರ ಮನೆಯೇ ಕಾಣಲಿಲ್ಲ. " ಜೀವನದಲ್ಲಿ ನಾನೊಮ್ಮೆ ಮುದ್ದಿಟ್ಟ ಹುಡುಗಿಯು ನನ್ನ ಮಗಳಾಗಿರಬೇಕೇನು ? ನಾನು ಕನಸಿನಲ್ಲಿ ಕಂಡ ಹುಡುಗಿಯು ನನ್ನ ಮಗಳಾಗಿರಬಹುದೇನು " ಎಂದು ವಿಚಾರ ಮಾಡುತ್ತ ಮತ್ತೆ ಭರದಿಂದ ಸಾಗಿದಳು. ಅವಳಿಗೆ ಹಾದಿ ತಪ್ಪಿ ಬಂದೆನೆಂದು ಅರಿವಾಯಿತು. ಆ ಊರಿಗೆ ಅವಳು ಹೊಸಬಳು. ಒಮ್ಮೆ ತಾನು ಬಂದಿದ್ದ ರಾಮಮಂದಿರವು ಕಾಣಿಸಿತು. ಇಲ್ಲಿಯವರೆಗೆ ಬಂದ ಮೇಲೆ ರಾಮದರುಶನವನ್ನು ತೆಗೆದುಕೊಂಡು ಹೋದರಾಯಿತೆಂದು ಗುಡಿಯ ಕಡೆಗೆ ಹೋದಳು. ದೇವರ ದರುಶನವನ್ನು ತೆಗೆದುಕೊಂಡಳು. ಅವಳಿಗೆ ಆ ಮೂರ್ತಿಯು ದೇವರಂತೆ ಕಾಣಿಸಲಿಲ್ಲ. ಅದೊಂದು ಕಲ್ಲಿನ ಮೂರ್ತಿ. ಆಕೃತಿಯನ್ನು ಕೆತ್ತಿದ ಕಲ್ಲು. ಕಲ್ಲಿಗೆ ಕೈಮುಗಿದರೆ ಆ ಕಲ್ಲು ತಲ್ಲಣಿಸಿದ ಜೀವಕ್ಕೆ ಕುಡಿಯಲು ಶಾಂತಿಯ ನೀರನ್ನು ಕೊಡುವದೇ ಎಂದು ಪ್ರೇಮನಂದಿನಿಯು ಗುಣುಗುಟ್ಟಿದಳು. ಅವಳು ಗುಣಗುಡುವದನ್ನು ಕಂಡರೆ ಅವಳ ಸ್ಮೃತಿಯು ವಿಭ್ರಮವಾಗಹತ್ತಿರುವದೆಂದು ಅನ್ನಬಹುದು. ಈ ಭಾವ ಅವಳ ಮನದಲ್ಲಿ ಒಂದು ನಿಮಿಷ, ಮತ್ತೆ ಚೇತರಿಸಿಕೊಂಡಳು. ' ಕಣ್ಣಿಗೆ ಕಾಣುವ ಜೀವನವು ದೇವರಲ್ಲವೇ ? ಚಲಿಸುವ ಶಕ್ತಿಯು ದೇವರಲ್ಲವೇ ? ಕಲ್ಲಿಗೆ ಕೈ ಮುಗಿಯಬೇಕೆಂಬ ಭಾವನೆ ಕೊಟ್ಟ ಶಕ್ತಿಯು ದೇವರಲ್ಲವೇ ? ಒಂದು ವಿಶಿಷ್ಟ ದಿಶೆಗೆ ನೂಕುತ್ತಿರುವ ಶಕ್ತಿಯು ದೇವರಲ್ಲವೇ, ಎಂದು ಪ್ರೇಮನಂದಿನಿಯು ವಿಚಾರ ಮಾಡಹತ್ತಿದಳು. ಅವಳ ವಿಚಾರಕ್ಕೆ ಕೊನೆಯೇ ಇಲ್ಲದಾಯಿತು.

ಮಂದಿರದಿಂದ ಪ್ರೇಮನಂದಿನಿಯು ಹೊರಗೆ ಬಂದು ಬೀದಿಯನ್ನು ಸೇರಿದಳು. ಕಾಲುಗಳು ಒಯ್ದತ್ತ ಹೊರಟಳು.

ತಾನು ಹಡೆದ ಕೂಸು ಬದುಕಿದ್ದರೆ ನೆಟ್ಟಗಾಗುತ್ತಿದ್ದಿಲ್ಲವೆ ಎಂದು ಅಂದುಕೊಂಡಳು.

ಗುಡಿಯೊಳಗಿಂದ ಯಾರೋ ಹಾಡಿದಂತೆ ಅವಳಿಗೆ ಕೇಳಿಸಿತು.

" ಪ್ರಾಣದ ಉಸಿರನು ತಿಳಿಯದೆ ನಿನಗೆ
ಜೀವನದಿಂಗಿತ ತಿಳಿದೀತೇ ||೧||

ಸಾವಿನ ಹುಟ್ಟೇ ನಿನಗದು ತಿಳಿಯದೆ
ದೇವರ ರೂಪವು ಕಂಡಿತೇ ||೨||

ಪುಣ್ಯವನರಿಯದ ಜೀವಕೆ ದೇವನು
ಮುಕ್ತಿಯುಮಾರ್ಗವ ಕೊಟ್ಟಾನೇ ||೩||

ಹೊಲಸಿನ ಜೀವನ ತ್ಯಜಿಸದ ನಿನಗೆ
ಭಕ್ತಿಯು ಮಾಣಿಕ ಸಿಕ್ಕೀತೇ ||೪||

ರಾಗವ ತೆಗೆಯುತ ಕುಣಿದರೆ ನೀನು
ದೇವರ ಭಕ್ತಿಯು ಹುಟ್ಟಿತೇ ||೫||

ರಾಮನ ಧ್ಯಾನದಿ ಜೀವನ ಸವೆಸದೆ
ಭಕ್ತಿಯು ಭಾವನೆ ಬೆಳೆದೀತೇ ||೬||

ಅವಳಿಗೆ ಹೀಗೆ ಅಸ್ಪಷ್ಟವಾಗಿ ಕೇಳಿಸಹತ್ತಿತು. ಆ ಕೇಳುವ ಅಸ್ಪಷ್ಟ ಶಬ್ದಗಳಲ್ಲಿಯೋ ಗುಂಗಾಗಿ ನಡೆದಳು.

## ೧೪

ಪ್ರೇಮನಂದಿನಿಯು ತಮ್ಮ ಮನೆಗೆ ಬಂದು ಹೋದ ಮೇಲೆ ಕುಮಾರಿಲಭಟ್ಟರು ಹುಚ್ಚು ಹಿಡಿದವರಂತೆ ಒಂದೆರಡು ದಿನ ವರ್ತಿಸಿದರು. ಹಿಂದಿನ ಅವರ ದರ್ಪವೆಲ್ಲವೂ ಅಡಗಿ ಸದ್ದಿಲ್ಲದೆ ಮಲಗಿಕೊಂಡಿತ್ತು. ಹೆಂಡತಿ ಹಾಗೂ ಮಗನ ಎದುರಿಗೆ ತಮ್ಮ ಪೂರ್ವಾಶ್ರಮದ ಪುರಾಣದ ಶ್ರವಣವಾದ ಮೇಲೆ ಜೀವನದಲ್ಲಿಯ ಆಸ್ಥೆಯನ್ನು ಕಳೆದುಕೊಂಡಿದ್ದರು. ಪದ್ಮನಾಭನ ಮನೆಗೆ ಹೋಗಿ ಪ್ರೇಮನಂದಿನಿಯನ್ನು ಕಂಡು ಬರಬೇಕೆಂದೂ ತಾವು ಮಾಡಿದ ಹೇಯ ಕೆಲಸದ ಬಗ್ಗೆ ಪಶ್ಚಾತ್ತಾಪವನ್ನು ತೋರಿಸಿ ಅವಳ ದುಃಖದಲ್ಲಿ ಸಮಭಾಗಿಯಾಗಿ ಬರಬೇಕೆಂದೂ ಹಲವಾರು ಸಲ ವಿಚಾರ ಮಾಡಿದರು. ಅವಳ ಮನೆಗೆ ಹೋಗಬೇಕೆಂದು ಒಂದು ದಿನ ಮನೆಯಿಂದ ಹೊರಟವರು ಅಧೈರ್ಯವೆನಿಸಿದ್ದರಿಂದ ಅರ್ಧ ಹಾದಿಯಿಂದಲೇ ಹಿಂತಿರುಗಿದರು.

“ಆದದ್ದು ಆಯಿತು, ಧೈರ್ಯ ತೆಗೆದುಕೊಂಡು ಜೀವಿಸಿರಿ. ಮಾಡಿದ ಅನ್ಯಾಯವನ್ನು ಸರಿಪಡಿಸಿಕೊಂಡರಾಯಿತು” ಎಂದು ಮೈತ್ರೇಯಿ ಕುಮಾರಿಲಭಟ್ಟರಿಗೆ ಮೇಲಿಂದ ಮೇಲೆ ಹೇಳುತ್ತಿದ್ದಳು.

ಸಂಜೆಯ ನಾಲ್ಕು ಗಂಟೆಯ ಸುಮಾರಿಗೆ ಪಡಸಾಲೆಯಲ್ಲಿ ಕುಮಾರಿಲಭಟ್ಟರು ಓದುತ್ತ ಕುಳಿತುಕೊಂಡಿದ್ದರು. ಬಹಳೇ ವೇಗದಿಂದ ಒಂದು ಕಾರು ಬಂದು ಅವರ ಮನೆಯ ಎದುರಿಗೆ ನಿಂತಿತು. ಕಾರಿನಿಂದ ಒಂದು ಚಿಟ್ಟಾನೆಯಂತಿರುವ ಮನುಷ್ಯನು ಕೆಳಗಿಳಿದನು. ಬೆಳ್ಳಗಿನ ಟೊಪ್ಪಿಗೆ ತಲೆಯ ಮೇಲೆ. ನಿಲುವಂಗಿಯಂತಹ ಕೋಟು ದೇಹದಲ್ಲಿ. ದುಂಡಗಾದ ಬೆಳ್ಳಿಯ ಹಿಡಿಕೆಯಿದ್ದ ಒಂದು ದಪ್ಪಾದ ಬೆತ್ತದ ಕೋಲು ಕೈಯಲ್ಲಿ. ನಿಷ್ಕಲಂಕ ಚಾರಿತ್ರ್ಯವುಳ್ಳವನಿರುವೆನೆಂದು ತೋರಿಸುವದಕ್ಕಾಗಿಯೋ ಏನೋ ಅತಿ ಶುಭ್ರ ವೇಷವನ್ನು ಧರಿಸಿದ್ದನು.

“ಯಾರೋ ಬಂದರು ನೋಡು,” ಎಂದು ಹೆಂಡತಿಗೆ ಕುಮಾರಿಲಭಟ್ಟರು ಅಂದರು.

ಇದನ್ನು ಕೇಳಿ ಒಳಗಿದ್ದ ಮೈತ್ರೇಯಿ ಹೊರಗೆ ಬಂದು ನೋಡಿದಳು; ಆದರೆ ಅವಳಿಗೆ ಯಾರು ಎಂಬುವದು ಗೊತ್ತಾಗಲಿಲ್ಲ. ಒಳಗೆ ಹೋಗಿ ಮೇಧಾವಿನಿಯನ್ನು ನೋಡಲು ಕಳುಹಿಸಿ ಕೊಟ್ಟಳು. ಓದುತ್ತಿದ್ದ ಪುಸ್ತಕವನ್ನು ಹಾಗೆಯೇ ಕೈಯಲ್ಲಿ ಹಿಡಿದುಕೊಂಡು, ಹೊರಗೆ ಬಂದು, ತಮಗೆ ಯಾರು ಬೇಕೆಂದು ಕೇಳಿದಳು. ಮೇಧಾವಿನಿಯನ್ನು ಕಂಡು ಆ ವ್ಯಕ್ತಿಯು ಕರವಸ್ತ್ರದಿಂದ ಕನ್ನಡಕವನ್ನು ಚೆನ್ನಾಗಿ ತಿಕ್ಕಿ ಒರಸಿ ಹಾಕಿಕೊಂಡು ಅವಳನ್ನು ದಿಟ್ಟಿಸಿ ನೋಡಹತ್ತಿದನು.

" ತಮಗೆ ಯಾರ ಮನೆಯು ಬೇಕು ? " ಎಂದು ಕೇಳಿದಳು ಮೇಧಾವಿನಿ.

" ಕುಮಾರಿಲಭಟ್ಟರ ಮನೆಯು ಇದೆಯೋ ? "

" ಹೌದು ಇದೇ. ಆದ ತಮಗೆ ಯಾರು ಬೇಕು ? "

" ಕುಮಾರಿಲಭಟ್ಟರು ಜ ಿಯಲ್ಲಿರುವರೋ ? "

" ಇರುವರು ಕರೆಯುವೆನು " ಎಂದು ಹೇಳಿ ಒಳಗೆ ಹೋದಳು.

ಕುಮಾರಿಲಭಟ್ಟರು ಹೊರಗೆ ಬಂದು ನಮಸ್ಕಾರ ಮಾಡಿ ಆದರದಿಂದ ಒಳಗೆ ಕರೆದುಕೊಂಡು ಹೋದರು. ಅವರಿಗೆ ಕುಳಿತುಕೊಳ್ಳಲು ಒಳಗಿನಿಂದ ಒಂದು ಕುರ್ಚಿಯನ್ನು ತಂದು ಕೊಡಲು ಮೇಧಾವಿನಿಗೆ ಹೇಳಿದರು. ಮೇಧಾವಿನಿಯು ಒಳಗಿನಿಂದ ಒಂದು ಕುರ್ಚಿಯನ್ನು ತಂದು ಹೊರಗೆ ಹಾಕಿದಳು. ಭಟ್ಟರು ಬಂದ ವ್ಯಕ್ತಿಗೆ ಕುಳಿತುಕೊಳ್ಳಲು ಹೇಳಿದರು. ಆತನ ದೃಷ್ಟಿಯೆಲ್ಲವೂ ಮೇಧಾವಿನಿಯ ಮೇಲೆ. ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತ, ಆಶ್ಚರ್ಯತೆಯಿಂದ,

" ಇವಳು ನಿಮ್ಮ ಮಗಳೋ ? ಪಾಡು ಇರುವಳು. " ಎಂದು ಕುಮಾರಿಲಭಟ್ಟರಿಗೆ ಹೇಳಿದನು.

" ಹೌದು ನನ್ನ ಮಗಳು. ಈ ಸಲ ಎಂ. ಎ. ಕ್ಕೆ ಕುಳಿತುಕೊಳ್ಳುವಳು. "

" ಎಂ. ಎ. ಕ್ಕೆ ಕುಳಿತುಕೊಳ್ಳುವಳೋ? ಬಹಳೇ ಜಾಣೆ ಇರಬೇಕು"

" ತಮ್ಮ ಹೆಸರೇನು ? " ಎಂದು ಕೇಳಿದರು ಕುಮಾರಿಲಭಟ್ಟರು.

" ನನ್ನ ಹೆಸರು ನಿಮಗೆ ಗೊತ್ತಿಲ್ಲವೇ ? ಅದ್ಹೇಗೆ ? "

" ನನಗೆ ಪರಿಚಯುವಾಗಲೊಲ್ಲದು. "

" ಏನು ಭಟ್ಟರೇ ಇಷ್ಟು ತೀವ್ರ ಪರಿಚಯು ಮರೆತರೆ ಹೇಗೆ ? "

" ನೆನಪಿನ ಶಕ್ತಿ ಕಡಿಮೆಯಾಗಿರುವದು ಮುಪ್ಪಿನಿಂದ. "

" ನಾವಿಬ್ಬರೂ ಜೇಲಿನಲ್ಲಿ ಕೂಡಿ ಇದ್ದಿಲ್ಲವೋ ? "

" ನನ್ನ ಸ್ಮರಣೆಗೆ ಬರಲೊಲ್ಲದು. "

" ನಾವಿಬ್ಬರೂ ಒಂದೇ ಕೋಣೆಯುಲ್ಲಿದ್ದೆವು. "

" ಇದ್ದಿರಬಹುದು. ಅದು ಬಹಳೇ ಹಳೆಯು ಮಾತು. "

" ಚಳವಳಿಯಲ್ಲಿ ಇಬ್ಬರೂ ಕೂಡಿ ಕೆಲಸ ಮಾಡಿದೆವು. "

" ಹೀಗೋ ? ನಿಮ್ಮ ಹೆಸರೇನು ನನಗೆ ನೆನಪಾಗಲೊಲ್ಲದು. "

" ಇನ್ನೊಂದು ಸಂಗತಿಯುನ್ನು ಹೇಳುವೆನು. ಅದರಿಂದಾದರೂ ನೆನಪಾಗುವದೇನು ನೋಡಿ ? "

" ಅದೇನು ಇನ್ನೊಂದು ಸಂಗತಿ ?"

" ತಾವು ಒಮ್ಮೆ ನನಗೆ ದಾದರ ಸ್ಟೇಶನದ ಮೇಲೆ ಭೆಟ್ಟಿಯಾಗಿದ್ದಿರಿ. ತಾವು ಕಾಶೀ ಯಾತ್ರೆಯಿಂದ ಇದೇ ಬಂದಿರುವೆನೆಂದೂ, ತಮ್ಮ ಸಂಗಡ ಬಂದಿದ್ದ ಅನಾಥ ವಿಧವೆಯು ಕಾಶಿಯುಲ್ಲಿ ತಪ್ಪಿಸಿಕೊಂಡಿರುವಳೆಂದೂ ಹೇಳಿದಿರಿ. ' ನಿಮಗೆ ಆಕಸ್ಮಿಕವಾಗಿ ಆ ವಿಧವೆಯು ಭೆಟ್ಟಿಯಾದರೆ ನಿಮಗೆ ಶಕ್ಯವಾದರೆ ಸಾಕಿ ಸಲುಹಿರೆಂದು ನನಗೆ ಹೇಳಿದಿರಿ. ನನ್ನದು ಉದಾಳ ಸ್ವಭಾವ ಇರುವದರಿಂದ ತಾವು ಹೇಳಿದ ಕ್ಷಣವೇ ಕಾಶಿಯು ಗಾಡಿಯುನ್ನು ಹಿಡಿದು ಹೋದೆನು. ಹದಿನೈದು ದಿನಗಳ ವರೆಗೆ ಕಾಶಿಯುಲ್ಲಿ ನಿಂತು ಶೋಧಿಸಿದೆ. ಅವಳು ನನಗೆ ಸಿಗಲೇ ಇಲ್ಲ " ನುಡಿದನು ಆ ವ್ಯಕ್ತಿ.

" ಈಗ ನೆನಪಾಯಿತು. ತಮ್ಮ ಹೆಸರು ರಜನೀಕಾಂತ. "

" ಹೌದು ನನ್ನ ಹೆಸರು ರಜನೀಕಾಂತ. "

" ಮುಂದೇನು ಆಯಿತು ಆ ವಿಧವೆಯುದು. ? "

" ನಿರುಪಾಯನಾಗಿ ಮರುದಿವಸ ನಾನು ತಿರುಗಿ ಹೊರಡತಕ್ಕವನು. ಸಂಜೆಯು ಮುಂದೆ ಹನುಮಾನ ಘಾಟದ ಮೇಲೆ ನೀವು ವರ್ಣಿಸಿದ ವಿಧವೆಯುನ್ನು ಕಂಡೆನು. ಆವಳು ಯಾರನ್ನೂ ಹಳಿಯುದೆ ತನ್ನ ದೈವವನ್ನೇ ಶಪಿಸುತ್ತ ತನ್ನನ್ನು ತನ್ನ ದೇಶಕ್ಕೆ ಬಿಡಬೇಕೆಂದು ಕೇಳಿಕೊಂಡಳು.

ನಮ್ಮಲ್ಲಿ ಒಬ್ಬ ಆಳಿನ ಅಗತ್ಯವಿರುವವರಿಂದ ನಮ್ಮಲ್ಲಿಯೇ ಬೇಕಾದರೆ ಬಂದಿರ ಬಹುದೆಂದು ಹೇಳಿದೆನು. ಅವಳನ್ನು ಕರೆದುಕೊಂಡು ನಮ್ಮ ಮನೆಯಲ್ಲಿ ಟ್ಟುಕೊಂಡೆ. ಅವಳು ಆತ್ಮಹತ್ಯೆ ಮಾಡಿಕೊಳ್ಳಲು ಏನೋ ಒಂದು ವಿಷ ಕಾರಿ ಪದಾರ್ಥವನ್ನು ತೆಗೆದುಕೊಂಡಿರುವಳೆಂದು ನನಗೆ ಬಲವಾದ ಸಂಶಯು ಬಂದಿತು. ನ್ನಮೇಲೆ ಬರುವದೆಂದು ಗಾಬರಿಯಾದೆ. ಜೀಪಿನಲ್ಲಿ ಅವ ಳನ್ನು ಹಾಕಿಕೊಂಡು ನಮ್ಮೂರಿನಿಂದ ದೂರದಲ್ಲಿರುವ ಧನ್ವಂತರಿ ಧಾಮದ ಬಾಗಿಲದ ಹತ್ತರ ಯಾರೂ ನೋಡದಂತೆ ಬಿಟ್ಟು ಬಂದೆ. ಆಗ್ಗೆ ಅವಳು ಗರ್ಭಿಣಿಯಿದ್ದಳೆಂದು ನನಗೆ ಕಂಡಿತು " ರಜನಿಕಾಂತ ಹೇಳಿದನು.

" ಮುಂದೇನಾಯಿತು ? ಅವಳು ಬದುಕಿದಳೋ ? "

" ಮುಂದೆ ನಾನು ಅದರ ಬಗ್ಗೆ ವಿಚಾರ ಮಾಡುವ ಗೋಜಿಗೇ ಹೋಗ ಲಿಲ್ಲ. ವಿಚಾರ ಮಾಡುತ್ತ ಹೋದರೆ ಅದು ನ್ನಮೇಲೆ ಬರುವದೆಂದು ಅಲ್ಲಿಯೇ ಬಿಟ್ಟು ಬಿಟ್ಟೆನು."

" ತಾವು ಬಹಳ ಅಪರೂಪವಾಗಿ ಇತ್ತಕಡೆಗೆ ಬಂದಿರಿ ? "

" ತಮ್ಮ ಕಡೆಗೆ ಒಂದು ಕೆಲಸವಿತ್ತು. "

" ನಾನು ಭಟ್ಟನು, ವೈದಿಕ ವೃತ್ತಿಯಿಂದ ಬಡತನದಲ್ಲಿ ಜೀವನವನ್ನು ಸಾಗಿಸುವವನು. ಈ ಬಡವನ ಹತ್ತರ ತಮ್ಮದೇನು ಕೆಲಸ ? "

" ತಾವು ಜೇಲಿನಲ್ಲಿ ನನಗೆ ಜ್ಯೋತಿಷ್ಯವನ್ನು ಹೇಳಿದ ಪ್ರಕಾರ ನಾನು ಮಂತ್ರಿಯಾಗಿರುವೆ. ಇದು ನಿಮಗೆ ಗೊತ್ತಿರಬಹುದು. "

" ತಾವು ಮಂತ್ರಿಯಾದದ್ದು ನನಗೆ ಗೊತ್ತಿಲ್ಲ. ನಾನು ಜೇಲಿನಿಂದ ಬಂದ ಮೇಲೆ ನಿಮ್ಮ ರಾಜಕೀಯ ವಾತಾವರಣದ ಗಾಳಿಯು ತುಸುವೂ ಬಡಿಯಲಿಲ್ಲ. ನನಗೆ ಗೊತ್ತಾಗದ್ದಕ್ಕೆ ಕ್ಷಮಿಸಬೇಕು. "

" ಇದರಲ್ಲಿ ಕ್ಷಮಿಸಲಿಕ್ಕೇನು ಅಪರಾಧವಾಗಿರುವದು ? "

" ತಾವು ಇಲ್ಲಿಯವರೆಗೆ ಬರಬಾರದಾಗಿತ್ತು. ಹೇಳಿ ಕಳುಹಿಸ ಬೇಕಿತ್ತು. "

" ಏನೋ ಬಂದು ಬಿಟ್ಟೆ. ಹಳೆಯ ಜೇಲಿನ ಗೆಳೆಯನನ್ನು ಭೆಟ್ಟಿ ಯಾದರಾಯಿತೆಂದು ಬಂದೆ. "

" ಜೇಲಿನ ಗೆಳೆತನವನ್ನು ನೆನಪಿಟ್ಟದ್ದು ಹೆಚ್ಚಿನದು. ಇದು ತಮ್ಮ

ದೊಡ್ಡ ಮನಸ್ಸು. ಮೇಲಿನ ಅಧಿಕಾರದಲ್ಲಿದ್ದರೂ ಈ ಬಡವನನ್ನು ಮರೆತಿಲ್ಲ. "

" ನಾನು ಮಂತ್ರಿಯಾಗುವೆನೆಂದು ತಾವು ಹೇಳಿದ ಮಾತು ಹೇಗೆ ಮರೆಯಲಿ. ಆ ಮಾತು ಮರೆತರೆ ನಿಮ್ಮನ್ನೂ ಮರೆತಂತೆ. "

" ದೇವರು ನಿಮಗೆ ಕಲ್ಯಾಣ ಮಾಡಲಿ. ಶತಾಯುಷಿಗಳಾಗಿರಿ. ನಿಮ್ಮದು ಉತ್ತರೋತ್ತರ ಅಭಿವೃದ್ಧಿಯಾಗಲಿ. ಮಂತ್ರಿಗಳಿಗೆ ಭಟ್ಟರಿಂದ ಸಲ್ಲತಕ್ಕದ್ದು ಇಷ್ಟೇ. "

" ಇದಕ್ಕೂ ಹೆಚ್ಚಿನದೇನು ಬೇಕು ? "

" ತಾವು ಏನು ತೆಗೆದುಕೊಳ್ಳುವಿರಿ, ಚಹ ಇಲ್ಲವೆ ಕಾಫಿ ? "

" ಏನಾದರೂ ನಡೆಯುವದು. "

" ಮೇಧಾವಿನಿ, ಒಂದು ಕಪ್ಪು ಚಹ ತೆಗೆದುಕೊಂಡು ಬಾರಮ್ಮಾ."

" ತಮಗೆ. "

" ನಾನು ಕುಡಿಯುವದಿಲ್ಲ. "

" ತಾವು ಯಾವ ಶಾಖೆಯ ಮಂತ್ರಿ. "

" ನೀರಾವರಿಯ ಮಂತ್ರಿ. "

" ನೀವು ಪುಣ್ಯವಂತರು. ಇಂತಹ ಅಧಿಕಾರ ಪದವನ್ನು ದೊರಕಿಸಿರುವಿರಿ. ನಿಮ್ಮ ವಿದ್ವತ್ತೆಯನ್ನು ಹೊಗಳಬೇಕು; ಮುತ್ಸದ್ದಿತನವನ್ನು ಅನುಕರಣ ಮಾಡಬೇಕು. "

" ನನ್ನಲ್ಲಿ ಏನೇನೂ ವಿದ್ಯೆ ಇರುವದಿಲ್ಲ. ನಾನು ಹದಿನಾರು ವರುಷದವನಾಗಿದ್ದರೂ ಶಾಲೆಯ ಐದನೇ ವರ್ಗವನ್ನು ದಾಟಲಿಲ್ಲ. ಅಪ್ಪನು ಬೇಜಾರ ಪಟ್ಟು ನನ್ನನ್ನು ಶಾಲೆಯನ್ನು ಬಿಡಿಸಿದ. ಶಾಲೆಯಲ್ಲಿಯ ಕಿಡಿಗೇಡಿ ಹುಡುಗನು ಹೋದನೆಂದು ಗುರುಗಳು ಆನಂದಪಟ್ಟರು. ಇದು ನನ್ನ ವಿದ್ಯೆ. ಮುಂದೆ ವಯಸ್ಸಾದಂತೆ ಪುಂಡರ ಸಹವಾಸವನ್ನು ಮಾಡಿದೆ. ದಾರಿಯನ್ನು ಬಡಿಯುವದು, ಹಣವಂತರ ಮನೆಗಳಿಗೆ ಕನ್ನ ಹಾಕುವದು ಮಾಡಹತ್ತಿದೆ. ನನಗೆ ಎಷ್ಟೋ ಸಾರೆ ಶಿಕ್ಷೆಗಳಾಗಿದ್ದವು. ಜೇಲು ನನ್ನ ಮನೆಯಾಗಿತ್ತು. ಜೇಲಿನಲ್ಲಿ ಒಮ್ಮೆ ಒಬ್ಬ ಗುರುತಿನವನು ಸಿಕ್ಕನು. ' ಇದನ್ನು ಮಾಡಬೇಡ. ಚಳವಳಿಯಲ್ಲಿ ಸೇರು. ತೈಲು

ಹಳಿಗಳನ್ನು ಕಿತ್ತು ಹಾಕು, ಗಾಡಿಗಳನ್ನು ಉರುಳಿಸು, ಎಂದು ನನಗೆ ಉಪ ದೇಶ ಮಾಡಿದನು. ನೀನು ಹೀಗೆ ಮಾಡಿದರೆ ನಿನ್ನ ಸಂರಕ್ಷಣೆಯನ್ನು ನಮ್ಮ ಸಂಸ್ಥೆಯು ನೋಡಿಕೊಳ್ಳುವದೆಂದು ಹೇಳಿದನು. ಜೇಲಿನಿಂದ ಹೊರಗೆ ಬಂದೆ. ನೇರವಾಗಿ ಹೋಗಿ ಆ ಸಂಸ್ಥೆಯನ್ನು ಸೇರಿಕೊಂಡೆ. ಸೇರಿದ ಎಂಟು ದಿನಗಳಲ್ಲಿ ಎರಡು ರೈಲುಗಾಡಿಗಳನ್ನು ಉರುಳಿಸಿದೆ. ಆ ವಿಧ್ವಂಸಕ ಕೃತಿಗಳನ್ನು ನಾನು ಮಾಡಿರುವೆನೆಂದು ಪೋಲೀಸರಿಗೆ ಸಂಶಯು ಬರಲಿಲ್ಲ " ಎಂದು ಮಾತನಾಡುತ್ತ ಗೋಲ್ಡಫ್ಲೇಕ ಸಿಗರೇಟನ್ನು ತೆಗೆದು ಸೇದಹತ್ತಿದನು.

ಅದರ ವಾಸನೆಯು ಭಟ್ಟರಿಗೆ ಸಹನವಾಗಲಿಲ್ಲ. ಸೇದಬೇಡವೆಂದು ಹೇಳಲಿಕ್ಕೂ ಕಷ್ಟ, ಬಿಡಲಿಕ್ಕೂ ಕಷ್ಟ. ನಿರುಪಾಯರಾಗಿ ಅದರ ವಾಸನೆ ಯನ್ನು ಕುಡಿಯುತ್ತ ಕುಳಿತುಕೊಂಡರು.

" ಸ್ವಾತಂತ್ರ್ಯ ದೊರೆತ ಮೇಲೆ ಸಂಸ್ಥೆಯವರು ನನ್ನನ್ನು ಬಹಳ ವಾಗಿ ಹೊಗಳಿದರು. ಎಲ್ಲ ಚುನಾವಣೆಗಳಲ್ಲಿ ನನ್ನನ್ನು ಆರಿಸಿ ತಂದರು. ಕೊನೆಗೊಮ್ಮೆ ನಾನು ಪಟ್ಟು ಹಿಡಿದು ಕೂಡಲು ನನಗೆ ಮಂತ್ರಿಪದ ವನ್ನು ಕೊಟ್ಟರು. ನಾನಂತೂ ಮೊದಲೇ ತುಡುಗ, ನನಗಿಂತ ಅವರೆ ಲ್ಲರೂ ಹೆಚ್ಚಿನ ತುಡುಗರು. ನಾನು ಹುಂಬತನದಿಂದ ಕಳವು ಮಾಡು ವವ. ಅವರು ಚತುರತನದಿಂದ ಮಾಡುವವರು " ಎಂದು ರಜನೀ ಕಾಂತನು ನುಡಿದನು.

" ನೀವು ಬಂದ ಕೆಲಸವನ್ನೇ ಹೇಳಲಿಲ್ಲ ? ಇಷ್ಟೇ ವಿದ್ಯೆಯಿಂದ ಮಂತ್ರಿ. " ಪದವನ್ನು ಹೇಗೆ ಸಾಗಿಸುವಿರಿ ?"

" ಅದರಲ್ಲೇನಾಶ್ಚರ್ಯ ! ಬೊಗಳುವ ನಾಯಿಗೆ ಎಲುಬಿನ ತುಣ ಕನ್ನು ಒಗೆದರೆ ಬಾಯಿಯಲ್ಲಿ ರಕ್ತ ಸುರಿಯುವವರೆಗೆ ಎಲುಬನ್ನು ಕಟಿ ಯುತ್ತ ಕುಳಿತುಕೊಳ್ಳುವದು. ಅದರಂತೆ ಬೊಗಳುವವರಿಗೆ ಕೆಲವು ತುಕಡಿಗಳನ್ನು ಒಗೆದರಾಯಿತು. ಅವರನ್ನು ನೆಕ್ಕುತ್ತ ಅವರು ಕುಳಿತು ಕೊಳ್ಳುವರು. ಕೈಕೆಳಗಿನವರನ್ನು ಯಾವಾಗಲೂ ಹೆದರಿಕೆಯಲ್ಲಿಟ್ಟು ಕೊಳ್ಳಬೇಕು. ಹೆದರಿಕೆಯಿಂದ ನನ್ನ ವಿರುದ್ಧ ಬರಲು ಹಿಂಜರಿಯು ವರು. "

ಮೇಧಾವಿನಿಯು ಚಹವನ್ನು ತಂದು ಕುಮಾರಿಲಭಟ್ಟರ ಕೈಯಲ್ಲಿ ಕೊಟ್ಟಳು. ಮೇಧಾವಿನಿ ಚಹ ತರುವದನ್ನು ಕಂಡು ರಜನಿಕಾಂತನು ಕಪ್ಪು ತೆಗೆದುಕೊಳ್ಳಲು ಕೈ ಮುಂದೆ ಮಾಡಿದರೂ ಅವಳು ತಂದೆಯ ಕೈಯಲ್ಲಿ ಕೊಟ್ಟಳು.

" ಸಕ್ಕರೆಯ ಅಭಾವ ಇರುವದರಿಂದ ಬೆಲ್ಲದ ಚಹ ನಮ್ಮದು. ಪೇಟೆಯಲ್ಲಿ ನಾಲ್ಕು ರೂಪಾಯಿ ಕೊಟ್ಟು ಒಂದು ಕಿಲೋ ಸಕ್ಕರೆ ತರುವ ಯೋಗ್ಯತೆ ನಮ್ಮದಲ್ಲ " ಎಂದು ನುಡಿದು ರಜನೀಕಾಂತನಿಗೆ ಚಹವನ್ನು ಕೊಟ್ಟರು.

" ನಾವು ಅಧಿಕಾರಕ್ಕೆ ಬಂದ ಮೇಲೆ ಮರಣಾವತಿ ಯೋಜನೆಯನ್ನು ಕೈಕೊಂಡು ಬಹಳೇ ವರುಷಗಳಾದವು. "

" ಮರಣಾವತಿ ಯೋಜನೆಯೆಂದರೇನು ? "

" ಹಿಂದು ಮುಂದಿನ ವಿಚಾರವಿಲ್ಲದೆ ಭಾರತದಲ್ಲಿಯ ಜನರು ಬಹಳೇ ಈಯ ಹತ್ತಿದ್ದಾರೆ ? "

" ಜನರು ಪಶುಗಳಾದರೋ ? "

" ಆಗಿಲ್ಲವೆಂದು ನಿಮ್ಮ ನಂಬಿಗೆಯೇನು ? "

" ಸ್ವಾತಂತ್ರ್ಯ ದೊರಕಿದ ಮೇಲೆ ಹೆಚ್ಚಿನ ಪಶುಗಳಾಗಿರುವರು. ಜನ ಸಂಖ್ಯೆಯನ್ನು ಕಡಿಮೆ ಮಾಡಲು ಈ ಯೋಜನೆಯಿರುವದು. "

" ನನಗೆ ತಿಳಿಯದು ಅಂಥ ಮಾತು. ನಿಮ್ಮ ಮಾತಿನ ಅರ್ಥ ನನ ಗಾಗುವದಿಲ್ಲ. "

" ಮೊದಲು ಜನಗಳಲ್ಲಿಯ ಬುದ್ಧಿಯನ್ನು ನಾಶಗೊಳಿಸಬೇಕು. ಬುದ್ಧಿ ಬೆಳೆಯದಂತೆ ವಿದ್ಯೆಯನ್ನು ಕೊಡಬೇಕು. ಪುಷ್ಟರಾಗಬಾರ ದೆಂದು ಆಹಾರದ ಕೊರತೆಯನ್ನು ಮಾಡಬೇಕು. ಇಲ್ಲಿ ಬೆಳೆದದ್ದನ್ನು ಹೊರಗೆ ಕಳುಹಿಸಿಕೊಡಬೇಕು. ಪರರ ಕಡೆಯಿಂದ ಸಾಲವನ್ನು ತೆಗೆ ದುಕೊಂಡು ಬರಬೇಕು. ಅದರ ನೂರು ಪಾಲಿನಲ್ಲಿಯ ಒಂದು ಪಾಲನ್ನು ವೆಚ್ಚ ಮಾಡಿ ಉಳಿದದ್ದನ್ನು ಸಂಸ್ಥೆಯ ದಿಂಡೇರಿಗೆ, ದಿವಾಣರಿಗೆ ಮೊದಲಾ ದವರಿಗೆ ಹಂಚಿ ಕೊಡಬೇಕು. ಸಂಸ್ಥೆಯ ವಿರೋಧವಾಗಿ ಯಾರೂ ಮಾತನಾಡಬಾರದು. ಆಡಿದರೂ ದಿನದ ಆಹಾರ ದೊರಕಿಸುವ ಚಿಂತನೆ

ಯಲ್ಲಿ ಅವರು ಅದನ್ನು ಮರೆತು ಬಿಡುವಂತೆ ಮಾಡಬೇಕು. ಆಹಾರ ವನ್ನು ಹಂಚಿದರೂ ಅದನ್ನು ಸಕಾಲಕ್ಕೆ ಹಂಚಬಾರದು. ಇದು ಮರಣಾ ವತಿ ಯೋಜನೆ. ನಿಮಗೆ ಸಕ್ಕರೆ ಸಿಗವೆ ಇರುವದಾದರೂ ಈ ಯೋಜನೆ ಯಲ್ಲಿಯ ಒಂದು ಕಲಮು ಇರುವದು."

"ನಿಮ್ಮ ಸಂಸ್ಥೆಯನ್ನು ಎಷ್ಟು ಹೊಗಳಿದರೂ ಸಾಲದು. ಈ ಯೋಜನೆಯಿಂದ ಅವರಿಗೇನು ಫಲ ?"

"ಕಲಿಯುಗ ಮುಗಿಯುವವರೆಗೂ ಜನರು ತಮ್ಮ ಅಧಿಕಾರದ ಅಂಕಿ ತದಲ್ಲಿಯೇ ಇರಬೇಕೆಂಬುದು ಮೊದಲನೇ ಧ್ಯೇಯ. ಆ ಸಂಸ್ಥೆಯ ಆಡಳಿತ ವರ್ಗದವರಿಗೆ ಕೋಟ್ಯಾನು ಕೋಟಿ ರೂಪಾಯಿಗಳು ದೊರೆಯ ಬೇಕೆಂಬುದು ಎರಡನೇ ಧ್ಯೇಯ. ಸತ್ಯಮೇವ ಜಯತೆ ಎಂಬ ಹಿಂದಿನ ವರ ತತ್ವವನ್ನು ಹೇಳಿ ಅಸತ್ಯ ಜಯಿಸಬೇಕೆಂಬುದು ಮೂರನೇ ಧ್ಯೇಯ. ಇವೆಲ್ಲ ಧ್ಯೆಯಗಳಿಂವಾಗುವದೇ ಫಲ."

"ನಿಮ್ಮ ಸಂಸ್ಥೆಯು ಉಪನ್ಯಾಸದಲ್ಲಿ ನನ್ನ ಕಡೆಗೆ ಬಂದ ಕೆಲಸ ವನ್ನು ಹೇಳಲಿಲ್ಲ."

"ನಿಮಗೆ ನವಕರಿ ಬೇಕೋ ?"

"ನನಗೆ ವಯಸ್ಸಾಯಿತು. ನವಕರಿಯನ್ನು ತೆಗೆದುಕೊಂಡು ನಾನು ಏನು ಮಾಡಲಿ ?" ಅವನು ಜೇಬಿನಲ್ಲಿಯ ಕೆಲವು ಕಾಗದಪತ್ರಗಳನ್ನು ತೆಗೆದನು.

"ಇವು ಕಾಂಟ್ರ್ಯಾಕ್ಟ ಹಿಡಿಯುವ ಕಾಗದಪತ್ರಗಳು. ಈ ಕಾಗದ ಪತ್ರಗಳಿಗೆ ಸಹಿ ಮಾಡಲು ನಿಮ್ಮ ಮಗ ಗಿರಿಧಾರಿಗೆ ಹೇಳಬೇಕು."

"ಕಾಂಟ್ರ್ಯಾಕ್ಟ ಹಿಡಿಯಲು ಅವನ ಹತ್ತರ ಎಲ್ಲಿ ಹಣವಿರುವದು. ನಾವೆಲ್ಲರೂ ಬಡತನದಿಂದ ಕಾಲ ಕಳೆಯುವವರು."

"ಇದಕ್ಕೆ ಹಣ ಬೇಕಾಗಿಲ್ಲ."

"ಹಣವಿಲ್ಲದೆ ಕಾಂಟ್ರ್ಯಾಕ್ಟ ಕೊಡುವಿರೋ ?"

"ಹಿಂದೆ ಆಗಿ ಹೋಗಿರುವವೆಂದು ತೋರಿಸುವ ಕಾಂಟ್ರ್ಯಾಕ್ಟ ಫಾರ್ಮುಗಳಿಗೆ ಅವನ ಸಹಿ ಬೇಕಾಗಿರುವದು. ಇದರಲ್ಲಿ ಏನೂ ಹಣ ಕೊಡು ವದು ಬೇಕಾಗಿಲ್ಲ."

"ಎಲ್ಲ ಕೆಲಸ ಮುಗಿದ ಮೇಲೆ ಆ ಫಾರ್ಮುಗಳಿಗೆ ಸಹಿ ಏಕೆ ಬೇಕು?"

"ಮುಗಿದಿರುವದೆಂದು ತೋರಿಸುವೆವು."

"ಹಾಗೆ ತೋರಿಸಲಿಕ್ಕೆ ಬರುವದೋ ?"

"ಅದು ರಾಜಕಾರಣ, ಭಟ್ಟರಿಗೆ ತಿಳಿಯುವ ಮಾತಲ್ಲ."

"ಆ ಫಾರ್ಮುಗಳಿಗೆ ಗಿರಿಧಾರಿಯದೇ ಸಹಿಯೇಕೆ ಬೇಕು ? ಬೇರೆಯವರದು ನಡೆಯುವದಿಲ್ಲವೇ ?"

"ನಡೆಯುವದು."

"ಬೇರೆಯವರದೇ ಮಾಡಿಸಿಕೊಂಡರಾಯಿತು."

"ಹಾಗಲ್ಲ, ಇತ್ತ ಕಡೆಯ ಎಲ್ಲ ಜನರ ವಿಶ್ವಾಸಕ್ಕೆ ಗಿರಿಧಾರಿಯು ಪಾತ್ರನಾಗಿರುವನು. ಅವನು ಯಾವದೇ ಕಾರ್ಯವನ್ನು ಮಾಡಿದರೆ ಅದು ಯೋಗ್ಯ ಕಾರ್ಯವಿರುವದೆಂದು ಎಲ್ಲ ಜನರು ನಂಬುವರು. ಮುಖ್ಯವಾಗಿ ನನಗೆ ನಂಬಿಗೆಯ ಮನುಷ್ಯನು ಬೇಕು."

"ಆತನು ಸಹಿ ಹಾಕಿದರೆ ಜನರನ್ನು ಮೋಸಮಾಡಿದಂತಾಗುವದಿಲ್ಲವೇ ?"

"ಜನರಿಗೆ ಏನೂ ಮೋಸ ಮಾಡಿದ ಹಾಗೆ ಆಗುವದಿಲ್ಲ. ನಮ್ಮ ಲೆಕ್ಕಪತ್ರಗಳನ್ನು ಸರಿಪಡಿಸಿಕೊಳ್ಳಲಿಕ್ಕೆ ನನಗೆ ಹಿಂದಿನ ದಿನಾಂಕದ ಸಹಿ ಬೇಕು."

"ತಾವು ಹೇಳಿದ್ದು ಕೇಳಿಕೊಂಡೆ. ಸಂಪೂರ್ಣ ಅರ್ಥ ಮಾಡಿಕೊಂಡೆ. ಅವನಿಗೆ ಇದನ್ನು ಮಾಡಬೇಕೆಂದು ಹೇಗೆ ಹೇಳಲಿ ?"

"ತಾವು ಹೇಳಿದರೆ ಅವನು ಮಾಡುವನು."

"ಅವನು ಚಿಕ್ಕವನಲ್ಲ. ವಯಸ್ಸಾದವನು. ಮತ್ತು ಅವನು ನನ್ನಿಂದ ಬೇರೆ ಇರುವನು."

"ತಾವು ಎಷ್ಟೆಂದರೂ ಅವನ ತಂದೆಯವರಲ್ಲವೇ ?"

"ನಾನು ತಂದೆಯು ಹೌದು. ನಾನು ತಂದೆಯಾದ ಮಾತ್ರಕ್ಕೆ ಅವನು ನನ್ನ ಮಾತೇಕೆ ಕೇಳಬೇಕು?"

"ಆಜ್ಞಾಧಾರಕ ಮಗನೆಂದು."

"ನನ್ನ ಮಾತು ಆವನು ಕೇಳಲಿ ಇಲ್ಲವೆ ಬಿಡಲಿ ಆದರೆ ಈ ವಿಷಯ-

ದಲ್ಲಿ ಮಾತ್ರ ಅವನಿಗೆ ನಾನು ಹೇಳಲು ಶಕ್ಯವಿಲ್ಲೆಂದು ಹೇಳಬೇಕಾಗು ವದು. ತಾವು ಮಂತ್ರಿಗಳು, ರಾಜಕಾರಣಿಗಳು, ಜೀವನದಲ್ಲಿ ನುರಿತ ಪಟುಗಳು. ಇಂತಹ ತಮಗೆ ಇಲ್ಲವೆಂದು ಹೇಳಬೇಕಾದರೆ ನನಗೆ ಬಹಳೇ ವ್ಯಥೆಯಾಗುವದು. ”

ರಜನೀಕಾಂತನು ಕುಮಾರಿಲಭಟ್ಟರು ಹೇಳುವದಿಲ್ಲವೆಂದು ಅರಿತು ಕೊಂಡನು. ಮತ್ತೆ ಬೇರೆ ಮಾರ್ಗದಿಂದಾದರೂ ಜಾಲಹಾಕಬೇಕೆಂದು ಮನದಲ್ಲಿ ವಿಚಾರ್ಸ ಮಾಡಿದನು. ತನ್ನ ಜೇಬಿನಲ್ಲಿಯ ನೂರು ರೂ. ನೋಟಿನ ಎರಡು ನೂರು ಕಟ್ಟನ್ನು ತೆಗೆದು ಕುಮಾರಿಲಭಟ್ಟರ ಮುಂದೆ ತಾನು ಕುಳಿತಲ್ಲಿಂದ ಒಗೆದನು. ಆ ರೂಪಾಯಿಗಳ ಕಟ್ಟನ್ನು ತಮ್ಮೆದು ರಿಗೆ ಬೀಸಾಡಿದ್ದನ್ನು ಕಂಡು ಭಟ್ಟರು ಗಾಬರಿಯಾದರು. ತಮ್ಮ ಆಯು ಷ್ಯದಲ್ಲಿ ಎಂದೂ ಇಷ್ಟು ಹಣವನ್ನು ಕಂಡಿದ್ದಿಲ್ಲ. ಇನ್ನು ಮೇಲೆ ಜೀವನ ದಲ್ಲಿ ಗಳಿಸುವದೂ ಶಕ್ಯವಿಲ್ಲ. ಒಂದಲ್ಲ; ಎರಡಲ್ಲ; ಇಪ್ಪತ್ತು ಸಹಸ್ರ ರೂಪಾಯಿಗಳು. ಕುಮಾರಿಲಭಟ್ಟರ ಬಾಯಿಯಲ್ಲಿ ನೋಟಿನ ಪುಡುಕಿ ಯನ್ನು ಕಂಡು ನೀರು ಬಂದಿತು. ಇದನ್ನು ರಜನೀಕಾಂತನು ಕಂಡು ಹಿಡಿದನು.

“ ಭಟ್ಟರೇ ಈ ಹಣದಿಂದ ಮುಪ್ಪಿನಕಾಲದಲ್ಲಿ ನೆಮ್ಮದಿಯಾಗಿ ತಮಗೆ ಬಾಳಲು ಬರುವದು; ಗಿರಿಧಾರಿಯಂತೂ ತನ್ನ ಇಡೀ ಆಯುಷ್ಯದಲ್ಲಿ ಇಷ್ಟು ಹಣವನ್ನು ಗಳಿಸುವದು ಶಕ್ಯವಿಲ್ಲ. ಮನೆಗೆ ಬಂದ ಲಕ್ಷ್ಮಿಯನ್ನು ಬಿಟ್ಟರೆ ನಿಮಗೆ ಕೆಡಕು. ”

“ ಆ ಫಾರ್ಮುಗಳಿಗೆ ಗಿರಿಧಾರಿಯು ಸಹಿಯನ್ನು ಹಾಕಿದರೆ ನಿಮ ಗೆಷ್ಟು ಹಣ ಉಳಿಯುವದು? ”

ಈ ಪ್ರಶ್ನೆಯನ್ನು ಕುಮಾರಿಲಭಟ್ಟರು ಕೇಳುವರೆಂದು ಆತನಿಗೆ ಅನಿಸಿದ್ದಿಲ್ಲ.

“ ನನಗೇನೂ ಹಣ ಉಳಿಯುವದಿಲ್ಲ. ”

“ಹಾಗಾದರೆ ಇಲ್ಲಿಯವರೆಗೆ ಅವನನ್ನು ಹುಡುಕಿಕೊಂಡೇಕೆ ಬಂದಿರಿ? ತಾವು ನಿಜವಾದ ಸಂಗತಿಯನ್ನು ಹೇಳಿದರೆ ವಿಚಾರ ಮಾಡುವೆನು. ನಿಮಗೆ ಹಣದ ಲಾಭವಿರದ ಹೊರತು ಇಲ್ಲಿಯವರೆಗೆ ಬರುವವರಲ್ಲ. ”

" ನಿಜವಾಗಿ ಹೇಳಬೇಕಾದರೆ ನಮಗೆ ಹದಿನೈದು ಲಕ್ಷ್ಯ ರೂಪಾಯಿ ಗಳು ಉಳಿಯುವವು. "

ಇದನ್ನು ಕೇಳಿ ಕುಮಾರಿಲಭಟ್ಟರು ಆಶ್ಚರ್ಯಚಕಿತರಾದರು.

" ಜನರನ್ನು ವಂಚಿಸಿ ಇಷ್ಟು ಹಣವನ್ನು ತಾವು ತೆಗೆದುಕೊಂಡ ಹಾಗೆ ಆಗುವದಿಲ್ಲವೋ ? "

" ಜನರನ್ನು ವಂಚಿಸಿದ ಹಾಗೆ ಆಗುವದಿಲ್ಲ. "

" ಮಂತ್ರಿವರ್ಯರೇ ಈ ತಮ್ಮ ಹಣವನ್ನು ತೆಗೆದುಕೊಳ್ಳಿ. ನನಗೆ ಇದು ಬೇಡ. ನಾನು ಗಿರಿಧಾರಿಗೆ ಹೇಳಲಾರೆ. ಬೇಕಾದರೆ ನೀವೇ ಆತ ನನ್ನು ಕೇಳಬಹುದು. ಆತನನ್ನು ಕೇಳಿದರೆ ಮೋಸದ ಹಣ ಬೇಡ ವೆಂದು ಹೇಳುವೆನು. "

" ಭಟ್ಟರೇ, ಇನ್ನೊಮ್ಮೆ ವಿಚಾರ ಮಾಡಿರಿ. ಹೋದ ಸಮಯ ತಿರುಗಿ ಬರಲಾರದು. ? " ಎಂದು ರಜನೀಕಾಂತನು ನೋಟಿನ ಪುಡಿಕೆಯನ್ನು ಹಿಡಿದು ಮಾತನಾಡಿದನು.

" ತಾವು ಹೇಳಿದ್ದು ಕೇಳಿದೆ. ತಿಳಿದುಕೊಂಡೆ. ಸತ್ಯವಾಗಿ ನಿಮ್ಮ ಹಣ ನನಗೆ ಬೇಡ. ನಿಮ್ಮ ಹಣವನ್ನು ಇಟ್ಟುಕೊಂಡರೆ ನನ್ನ ಅಂತರಂಗ ದಲ್ಲಿ ನಾರುವ ಹೆಣವನ್ನು ಇಟ್ಟುಕೊಂಡಂತೆ. " ಎಂದು ಕುಮಾರಿಲ ಭಟ್ಟರು ನುಡಿದರು.

" ನೋಟಿನ ಪುಡಿಕೆಯನ್ನು ಜೇಬಿನಲ್ಲಿ ಹಾಕಿಕೊಳ್ಳಲೋ ? "

" ನಿಃಸಂಶಯವಾಗಿ ಹಾಕಿಕೊಳ್ಳಿ. ನೀವು ಬೇಕಾದರೆ ಗಿರಿಧಾರಿ ಯನ್ನು ಕೇಳಬಹುದು. "

ಇಷ್ಟರಲ್ಲಿಯೇ ಗಿರಿಧಾರಿಯು ಹೊರಗಿನಿಂದ ಬಂದನು.

" ಏನು ರಜನೀಕಾಂತರೇ, ನನ್ನನ್ನು ಕೇಳಿದರೆ ನಿಮಗೆ ಸಮಾಧಾನ ವಾಗಲಿಲ್ಲವೇ ? ನಾನು ಮಾಡುವದಿಲ್ಲವೆಂದು ಹೇಳಿದ್ದು ನಿಮಗೆ ತಿಳಿಯ ಲಿಲ್ಲವೆಂದು ತೋರುವದು. ಅಪ್ಪಾ, ರಜನೀಕಾಂತರ ಕಡೆಯಿಂದ ನೀನು ಏನಾದರೂ ಹಣವನ್ನು ತೆಗೆದುಕೊಂಡಿರುವಿಯೋ ? "

" ನನಗೆ ಕೊಡಲು ಬಂದಿದ್ದರು. ಆದರೆ ನಾನು ತೆಗೆದುಕೊಂಡಿಲ್ಲ" ಎಂದು ಕುಮಾರಿಲಭಟ್ಟರು ಗಿರಿಧಾರಿಗೆ ಹೇಳಿದರು.

"ಮಂತ್ರಿಗಳೇ, ನಾನು ಹೇಳಿದ ಉತ್ತರಕ್ಕೆ ತಾವು ಹಿಂತಿರುಗಿಹೋಗ ಬೇಕಾಗಿತ್ತು. ತಾವು ವ್ಯರ್ಥ ಬಂದಿರಿ. ಇಂತಹ ಮೋಸದ ಕಾರ್ಯವನ್ನು ಮಾಡಲು ನನ್ನ ತಂದೆಯಾದರೂ ನನಗೆ ಹೇಗೆ ಹೇಳುವನು ? ಒಂದು ಕೈಯಿಂದ ಬಾಯಿಯಲ್ಲಿ ತುತ್ತು ಹಾಕಿದಂತೆ ಮಾಡಿ ಮತ್ತೊಂದು ಕೈಯಿಂದ ವಿಷ ಪ್ರಾಸನ ಮಾಡುವ ಸ್ವಭಾವ ನಿಮ್ಮದಿರಬಾರದು."

"ಗಿರಿಧಾರಿ, ಎಲ್ಲರೂ ನಿನ್ನ ಹಾಗೆ ನಡೆದರೆ ಮರಣಾವತಿ ಯೋಜನೆಯೇ ಬೇಕಾಗಿದ್ದಿಲ್ಲ. ಇಪ್ಪತ್ತು ಪುಟಗಳಷ್ಟು ಅಂಕಿಸಂಖ್ಯೆಗಳ ಸಾಲವನ್ನು ನಮ್ಮ ಹಿತದ ದೃಷ್ಟಿಯಿಂದಲೂ ಕಲ್ಯಾಣಕ್ಕಾಗಿಯೂ ಜನರ ಮೇಲೆ ಹೊರಿಸುವೆವು. ಎಲ್ಲ ಜನರ ಕೂದಲಗಳನ್ನು ಕತ್ತರಿಸಿ ರೂಪಾಯಿಗೆ ಒಂದು ಕೂದಲನ್ನು ಕೊಟ್ಟರೂ ಮಾಡಿದ ಸಾಲ ತೀರುವದಿಲ್ಲ" ಎಂದನು ರಜನಿಕಾಂತ.

"ಮಂತ್ರಿಯಾಗದೆ ತಮ್ಮ ಪೂರ್ವಾಶ್ರಮದ ಕಾಯಕವನ್ನು ಪ್ರಾರಂಭ ಮಾಡಿದ್ದರೆ ಚೆನ್ನಾಗಿ ಆಗುತ್ತಿತ್ತು" ಎಂದನು ಗಿರಿಧಾರಿ.

"ಆ ಕಾಯಕಕ್ಕೆ ಜನಗಳ ಹೆದರಿಕೆ, ಈ ಕಾಯಕಕ್ಕೆ ಜನಗಳ ಬೆಂಬಲ. ಹೀಗಿದ್ದ ಮೇಲೆ ಪೂರ್ವಾಶ್ರಮದ ಕಾಯಕವನ್ನು ಏಕೆ ಪ್ರಾರಂಭ ಮಾಡಬೇಕು ? ಈ ಕಾಯಕಕ್ಕೆ ದೊರೆತಷ್ಟು ಹಣ ಅದಕ್ಕೆ ದೊರೆಯುವದಿಲ್ಲ."

"ಮಂತ್ರಿಗಳಾಗಿ ನೀವೇ ನಿಮ್ಮ ಕಾರ್ಯಭಾರ ಟೀಕಿಸುವಿರಲ್ಲ" ಎಂದು ಕುಮಾರಿಲಭಟ್ಟರು ನುಡಿದರು.

"ಅವರ ರಾಜಕಾರಣ ನಮಗೆ ತಿಳಿಯುವದಿಲ್ಲ" ನುಡಿದನು ಗಿರಿಧಾರಿ.

"ನೀವಿಬ್ಬರೂ ಇನ್ನೊಮ್ಮೆ ವಿಚಾರ ಮಾಡಿರಿ. ನಾನು ಹೋಗುವೆನು."

"ದಯಮಾಡಿ ತಾವು ಹೋಗಿಬರಬೇಕು" ಎಂದು ಕುಮಾರಿಲ ಭಟ್ಟರು ನುಡಿದು ಅವನಿಗೆ ನಮಸ್ಕಾರ ಮಾಡಿದರು.

ಗಿರಿಧಾರಿಯು ಕಾರಿನವರೆಗೆ ಹೋಗಿ ಅವರನ್ನು ಕಳುಹಿಸಿದನು.

"ಮಂತ್ರಿವರ್ಯರೇ, ತಮ್ಮ ಕೆಲಸವನ್ನು ಮಾಡಲಿಲ್ಲ. ಕ್ಷಮಿಸಬೇಕು" ಎಂದು ಅಂದನು ಗಿರಿಧಾರಿ.

ರಜನೀಕಾಂತನು ಕಾರಿನಲ್ಲಿ ಹೊರಟುಹೋದನು.

" ಅಪ್ಪಾ, ನೀನು ಹಣವನ್ನು ಬಿಟ್ಟದ್ದು ಬಹಳೇ ನೆಟ್ಟಗೆ ಮಾಡಿದೆ " ಎಂದು ಮೇಧಾವಿನಿಯು ನುಡಿದಳು.

ಕುಮಾರಿಲಭಟ್ಟರು ಸುಮ್ಮನೆ ಕುಳಿತಿದ್ದರು. ಉತ್ತರ ಕೊಡಲಿಲ್ಲ.

" ಅಣ್ಣಾ, ತಮ್ಮ ಸಂಸ್ಥೆಯನ್ನು ಮತ್ತು ಜನರನ್ನು ಹೀಗೇಕೆ ಟೀಕೆ ಮಾಡುವರು? ಅಧಿಕಾರದಲ್ಲಿದ್ದವರೇ ಹೀಗೆ ಕುಣಿದರೆ ಕೈಕೆಳಗಿನವರು ಹೇಗೆ ಮಾಡಬೇಕು ? " ಅಂದಳು ಮೇಧಾವಿನಿ.

" ಸಂಸ್ಥೆಯನ್ನು ಮುಂದಕ್ಕೆ ತಂದು ಸ್ವಾತಂತ್ರ್ಯವನ್ನು ದೊರಕಿಸಿ ಕೊಟ್ಟವನು ಮಹಾತ್ಮನು. ಆ ಮಹಾತ್ಮನ ಸಂಸ್ಥೆಯಲ್ಲಿ ಈಗ ಹೊಕ್ಕಿರುವವು ಗೂಗೆಗಳು " ಎಂದು ಗಿರಿಧಾರಿ ಅಂದನು.

" ಪರರನ್ನು ಸುಮ್ಮನೆ ಏಕೆ ಟೀಕಿಸುವಿರಿ ? " ನುಡಿದರು ಕುಮಾರಿಲ ಭಟ್ಟರು.

" ಅವರು ಪರರಲ್ಲ. ಅವರ ಮನೆತನದ ಬಗ್ಗೆ ನಾವು ಟೀಕೆ ಮಾಡುವದಿಲ್ಲ. ನಮ್ಮ ದೇಶದ ಮುಂದಾಳುಗಳೆಂದು ಹೇಳಿ ಮೆರೆಯುತ್ತಿರುವದರಿಂದ ಅವರ ಸ್ವಾರ್ಥಪರಾಯಣ ಕೃತಿಗಳನ್ನು ವಿಮರ್ಶೆಮಾಡಬೇಕಾಗುತ್ತದೆ. ಜನರು ವಿಮರ್ಶೆ ಮಾಡುವದು ಅವರಿಗೆ ಬೇಕಾಗುವದಿಲ್ಲ" ಅಂದನು ಗಿರಿಧಾರಿ.

" ಅಪ್ಪಾ, ನಿನಗೆ ಅವನದು ಏನಾದರೂ ಪರಿಚಯವಿತ್ತೋ? " ಕೇಳಿದಳು ಮೇಧಾವಿನಿ.

" ಜೇಲಿನಲ್ಲಿಯ ಪರಿಚಯ. ಚಳವಳಿಯಲ್ಲಿ ನನ್ನೊಡನೆ ಕೆಲಸ ಮಾಡಿದೆನೆಂದು ಅವನು ಹೇಳಿದನು. ಚಳವಳಿಯಲ್ಲಿ ಕೆಲಸ ಮಾಡಿದ್ದೇನೂ ನನಗೆ ನೆನಪಿರುವದಿಲ್ಲ. ಅವನೇನು ನೂರಕ್ಕೆ ತೊಂಬತ್ತು ಸುಳ್ಳಿನ ಬುರುಡೆಗಳನ್ನು ಉರುಳಿಸತಕ್ಕವನು. ಜೇಲಿನಲ್ಲಿ ಎಲ್ಲರೂ ಇವನನ್ನು ಹೀಯಾಳಿಸುತ್ತಿದ್ದರು. ಇವನು ಪುಂಡನು. ಅಲ್ಲಿಯ ಮೇಲಾಧಿಕಾರಿಗಳಿಗೂ ಸಹ ಭಾಗಿಗಳಿಗೂ ತಲೆಶೂಲಿಯಾಗಿದ್ದನು. ಒಮ್ಮೆ ಅವನನ್ನು ನಮ್ಮ ಕೋಣೆಯಲ್ಲಿ ತಂದಿಟ್ಟರು. ಆಗ್ಗೆ ನನಗೂ ಅವನಿಗೂ ಪರಿಚಯವಾದದ್ದು. ತಪ್ಪನ್ನು ಒಪ್ಪಿಕೊಳ್ಳುವ ದೊಡ್ಡ ಗುಣವೊಂದು ಅವನಲ್ಲಿ ಇರುವದು.

ಅವನು ತನ್ನ ಹಿಂದಿನ ಎಲ್ಲ ದುಷ್ಕೃತಿಗಳನ್ನು ಹೇಳಿ ಕಣ್ಣೀರಿಟ್ಟನು. ಕೆಲವು ದಿನಗಳು ಕಳೆದ ಮೇಲೆ ಅವನಿಗೆ ಬಹಳೇ ಜಡ್ಡಾಯಿತು. ಆಗ್ಗೆ ನಾನು ಅವನ ಶುಶ್ರೂಷೆ ಮಾಡಿದೆನು. ಗುಣವಾದ ಮೇಲೆ ಆತನು ನನ್ನನ್ನು ಬಹಳೇ ಪೂಜ್ಯ ಭಾವದಿಂದ ನೋಡಹತ್ತಿದನು. ನಾನೊಮ್ಮೆ ಅವನಿಗೆ ಮುಂದೆ ನೀನು ಮಂತ್ರಿಯಾಗುವಿಯೆಂದು ಹೇಳಿದ್ದೆ. ಅಶಕ್ಯ ಮಾತೆಂದೇ ನುಡಿದು ಅವನು ನಕ್ಕುಬಿಟ್ಟನು. ಮಂತ್ರಿಯಾದರೆ ನಿಮ್ಮನ್ನು ಮರೆಯು ವದಿಲ್ಲವೆಂದು ಅನ್ನುತ್ತಿದ್ದನು ” ಎಂದು ಭಟ್ಟರು ಹೇಳಿದರು.

“ ನಿನಗೂ ಅವನಿಗೂ ಪರಿಚಯುವಿದ್ದದ್ದು ನನಗೆ ಗೊತ್ತಿಲ್ಲ. ನನಗೆ ಮೊದಲು ಭೆಟ್ಟಿಯಾಗಿದ್ದ. ಕುಮಾರಿಲಭಟ್ಟರ ಮಗನು ನಾನೆಂಬುದು ಅವನಿಗೆ ಮೊದಲೇ ಗೊತ್ತಿದ್ದಂತೆ ಕಾಣುವದು. ಚುನಾವಣೆಯ ಕಾರ್ಯ ದಲ್ಲಿ ನನ್ನನ್ನು ಎಷ್ಟೋ ಸಲ ಕಂಡಿದ್ದನು. ನನ್ನ ಕೆಲಸವನ್ನು ಕಂಡು ಆತನು ನನ್ನನ್ನು ಬಹಳೇ ಹೊಗಳುತ್ತಿದ್ದನು. ನೀನು ಕುಮಾರಿಲಭಟ್ಟರ ಮಗನಲ್ಲವೇ ಎಂದು ಮೇಲಿಂದ ಮೇಲೆ ನನ್ನನ್ನು ಕೇಳುತ್ತಿದ್ದನು. ನೀನು ನಮ್ಮ ಹುಡುಗನೆಂದು ಅವನು ನನಗೆ ಅನ್ನುತ್ತಿದ್ದನು. ನಿಮ್ಮಪ್ಪನ ಉಪಕಾರ ನಾನು ಎಂದೂ ಮರೆಯಲು ಸಾಧ್ಯವಿಲ್ಲೆಂದು ನನಗೆ ಹೇಳುತ್ತಿ ದ್ದನು. ನನ್ನ ಕಡೆಗೆ ಬಂದು ಅನುರಾಗವನ್ನು ತೋರಿಸಿ ಹಣದಾಸೆಯನ್ನು ಹಚ್ಚಿದನು. ಎಲ್ಲವೂ ನಿರರ್ಥಕವಾದ ಮೇಲೆ ಅಪ್ಪನ ಕಡೆಯಿಂದ ಹೇಳಿ ಸಿದರಾಯಿತೆಂದು ಇಲ್ಲಿಗೆ ಬಂದಿದ್ದನೆಂದು ತೋರುವದು ” ಎಂದು ಗಿರಿಧಾ ರಿಯು ನುಡಿದನು.

“ ನಮಗೆ ಉಪಕಾರ ಮಾಡುವೆನೆಂಬ ಸೋಗಿನಿಂದ ಅವನು ಇಲ್ಲಿಗೆ ಬಂದಿದ್ದನೆಂದು ಕಾಣುವದು. ಅವನ ಆಶೆಯ ಗೋಪುರಗಳು ಕುಸಿದು ಬಿದ್ದವು ನಿಮ್ಮ ಮಾತು ಕೇಳಿ ” ಎಂದು ಮೇಧಾವಿನಿ ಅಂದಳು.

“ ಮಾನವನ ನೆಲೆಯನ್ನು ಕಂಡು ಹಿಡಿಯುವದು ಹುಟ್ಟಿಸಿದ ದೇವ ರಿಗೂ ಕೂಡ ಅಸಾಧ್ಯ ” ಎಂದು ಕುಮಾರಿಲಭಟ್ಟರು ನುಡಿದರು.

## ೧೫

ನಡುಮನೆಯಲ್ಲಿ ಪ್ರೇಮನಂದಿನಿಯು ಏನೋ ಕೆಲಸ ಮಾಡುತ್ತಿದ್ದಳು. ಹೊರಗಿನ ಕೋಣೆಯಲ್ಲಿ ಪದ್ಮನಾಭನು ವಿಶ್ರಾಂತಿಯ ಕುರ್ಚಿಯ ಮೇಲೆ ಕುಳಿತುಕೊಂಡು ಓದುತ್ತಿದ್ದನು. ಆತನ ದೇಹ ದಿನೇ ದಿನೇ ಕ್ಷೀಣವಾಗಹತ್ತಿತ್ತು. ದೇಹದಲ್ಲಿಯ ಅಸ್ಥಿ ಮಾಯವಾಗಹತ್ತಿತ್ತು. ದಿನಗಳನ್ನು ಎಣಿಕೆ ಹಾಕುತ್ತ ಕಳೆಯುತ್ತಿದ್ದನು. ಕುಮಾರಿಲಭಟ್ಟರ ಮನೆಯಿಂದ ಹಿಂತಿರುಗಿ ಬಂದ ಮೇಲೆ ಪ್ರೇಮನಂದಿನಿಯ ಮನಸ್ಸಿನಲ್ಲಿ ಜೀವನವನ್ನು ಮುಗಿಸಬೇಕೆಂಬ ವಿಚಾರ ಸಮುದ್ರದ ತೆರೆಯಂತೆ ಬರತೊಡಗಿತು. ಪ್ರೇಮನಂದಿನಿಯು ಆಯುಷ್ಯದಲ್ಲಿ ಮಾತ್ರ ನಿರಾಶಳಾಗಿರುವಳೆಂದು ಪದ್ಮನಾಭನಿಗೆ ಅನಿಸಹತ್ತಿತು. ಓದುತ್ತಿದ್ದ ಪುಸ್ತಕವನ್ನು ಮುಚ್ಚಿ ಪ್ರೇಮನಂದಿನಿಯನ್ನು ಕರೆದನು. ಒಳಗೆ ಕೆಲಸ ಮಾಡುತ್ತಿದ್ದ ಪ್ರೇಮನಂದಿನಿಯು ಪದ್ಮನಾಭನು ಕರೆಯುವದನ್ನು ಕೇಳಿ ಕೆಲಸವನ್ನು ಅಲ್ಲಿಯೇ ಬಿಟ್ಟು ಅವಸರದಿಂದ ಅವನ ಕೋಣೆಗೆ ಬಂದಳು.

"ನಂದಿನೀ, ದಾರಿತಪ್ಪಿಸಿಕೊಂಡ ಜೀವಿಗಳು ನಾವಲ್ಲವೇ? ಗೂಡುಕಟ್ಟಿಕೊಳ್ಳದ ಪಕ್ಷಿಗಳು ನಾವಲ್ಲವೇ ? ದಾರಿ ಕಾಣದ ಕುರುಡರು ನಾವಲ್ಲವೇ?" ಎಂದು ಪದ್ಮನಾಭನು ನುಡಿದನು.

" ಕುರುಡರಾದ ಮೇಲೆ ದಾರಿಕಾಣುವ ಬಗೆ ಹೇಗೆ; ದಾರಿ ಅರಿಯದ ಕುರುಡರು ನಾವು. "

" ಜಗತ್ತಿನಲ್ಲಿ ಬಂದೆನು, ಹೋದೆನು; ಎಂದಿಷ್ಟೇ ನಾನು ಅನ್ನತಕ್ಕದ್ದು. "

" ಸಾಮಾನ್ಯ ಜೀವಿಯ ಹಾಡು ಇಷ್ಟೇ. ನನ್ನ ಹಾಗೆ ಜನರ ಪಾಡಾಗಬಾರದು. "

" ನನ್ನ ಜೀವನದ ಪಾಡಿನಂತೆಯಾದರೂ ಆಗಬಾರದು. "

" ನಾವು ಬಯಸತಕ್ಕದ್ದಿಷ್ಟೇ. "

" ವಿದ್ಯಾಚರಣನು ಒಳ್ಳೆಯ ಹುಡುಗನು. "

“ ತಾಯಿಯು ಆಸ್ಪತ್ರೆಯಲ್ಲಿ ಎಲ್ಲರಿಗೂ ಬೇಕಾಗಿದ್ದಳಂತೆ. ಬಹಳ ಉಪಕಾರಿ ಜೀವಿಯಿದ್ದಳೆಂದು ಎಲ್ಲರೂ ಅನ್ನುವರು. ತಾಯಿಯಂತೆ ಮಗನು ” ಎಂದು ಪ್ರೇಮನಂದಿನಿಯು ನುಡಿದಳು.

“ ತಂದೆಯಂತೆ ಮಗನೆಂದು ಅನ್ನುವರೋ ? ”

“ ಅವನ ತಂದೆಯನ್ನೇ ನೋಡದವರು ತಂದೆಯಂತೆ ಮಗನು ಇರುವನೋ ಇಲ್ಲವೋ ಎಂಬುದನ್ನು ಹೇಗೆ ಹೇಳಬೇಕು ? ”

“ ವಿದ್ಯಾಚರಣನು ತನ್ನ ತಂದೆಯಂತಾಗಬಾರದು. ”

“ ನಿಮಗೆ ತಂದೆಯ ಪರಿಚಯುವಿರುವದೋ ? ”

“ ಪರಿಚಯುವೇಕೆ ? ಚೆನ್ನಾಗಿ ಬಲ್ಲೆ. ನನ್ನನ್ನು ನಾನು ಅರಿತಂತೆ ಅವನನ್ನು ನಾನು ಬಲ್ಲೆ. ನಾನು ಅವನ ನೆರಳೋ, ಅವನು ನನ್ನ ನೆರಳೋ ಎಂಬುದು ನನಗೆ ಹೇಳಲು ಬರುವದಿಲ್ಲ ” ಎಂದು ಪದ್ಮನಾಭನು ಪ್ರೇಮನಂದಿನಿಗೆ ಹೇಳಿದನು.

“ ವಿದ್ಯಾಚರಣನ ತಂದೆಯಿರುವರೋ ? ”

“ ವಿದ್ಯಾಚರಣನ ತಂದೆಯಿದ್ದರೂ ಆತನಿಗೆ ಬಾಲ್ಯದಲ್ಲಿಯೇ ತಂದೆ ತೀರಿಕೊಂಡಂತಾಗಿರುವದು. ತಂದೆಯ ನೆನವು ಅವನಿಗಿಲ್ಲ, ಮಗನ ನೆನವು ತಂದೆಗಿಲ್ಲ. ”

“ ವೇದವತಿಯು ವಿಧವೆಯೆಂದು ಜನರು ತಿಳಿದುಕೊಂಡಿದ್ದರಂತೆ. ಅವಳು ವಿಧವೆಯ ಹಾಗೆ ಇದ್ದಳಂತೆ. ಗಂಡನಿದ್ದ ಮೇಲೆ ಅವಳು ಹಾಗೇಕೆ ಇದ್ದಳು? ”

“ ಒಂದು ದಿನ ಅವಳ ಕೊರಳಲ್ಲಿಯ ಮಂಗಲಸೂತ್ರವನ್ನು ಆಕೆಯ ಗಂಡನು ರಾಕ್ಷಸನಂತೆ ಒದರಾಡಿ ಚೀರಾಡಿ ಹರಿದು ನೆಲದ ಮೇಲೆ ಬೀಸಾಡಿ ಒಗೆದನಂತೆ. ”

“ ಹೆಂಡತಿಯ ಮಂಗಲಸೂತ್ರವನ್ನು ಹರಿಯುತಕ್ಕವನು ಅವನೆಂತಹ ರಾಕ್ಷಸನು ?

“ ಅವನು ತಾಯಿಯಂತೆ ಮಗನಾಗಿದ್ದನು. ರಾಕ್ಷಸಿಯ ಹೊಟ್ಟೆಯಿಂದ ರಾಕ್ಷಸನಂತೆ, ಸರ್ಪದ ಹೊಟ್ಟೆಯಿಂದ ಸರ್ಪದಂತೆ ಆತನು ಹುಟ್ಟಿದ್ದನು. ”

" ನೆಲದ ಮೇಲೆ ಬಿದ್ದ ಮಂಗಲಸೂತ್ರವನ್ನು ಆಕೆಯು ಶೋಕಿಸುತ್ತ ತೆಗೆದುಕೊಂಡು ತನ್ನ ಸೀರೆಯ ಸೆರಗಿನಲ್ಲಿ ಕಟ್ಟಿಕೊಂಡಳಂತೆ. ಎಂಥ ನಿರ್ವಂಚಕಳಾದ ದೇವಿಯವಳು ? "

" ಪುರುಷರೆಲ್ಲರೂ ವಂಚಕರೊ ? "

" ಎಲ್ಲರೂ ವಂಚಕರಾದರೆ ಆಯುಷ್ಯ ಸಾಗುವ ಬಗೆ ಹೇಗೆ ? "

" ವಂಚಕರಂತೆ ಆಯುಷ್ಯ ಸಾಗುವದು. ಸಾಗದೆ ಆಯುಸ ನಿಲ್ಲುವದಿಲ್ಲ. "

" ಹಾಗಾದರೆ ಮಾನವನ ಪ್ರಗತಿಯಾಗಲಾರದು. "

" ಪ್ರಗತಿಯಾಗಬೇಕೆಂದು ವಂಚಕರು ಅಪೇಕ್ಷಿಸುವದಿಲ್ಲ. "

" ಯಾರೂ ಅಪೇಕ್ಷಿಸದಿದ್ದರೂ ಮಾನವನ ಜೀವನವು ಪ್ರಗತಿಯನ್ನು ಹೊಂದುತ್ತಲೇ ಸಾಗುವದು. "

ಹೊರಗೆ ಯಾರೋ ಬಂದ ಸಪ್ಪಳವಾಯಿತು.

ಯಾರೆಂದು ನೋಡಲು ಪ್ರೇಮನಂದಿನಿಯು ಹೊರಗೆ ಬಂದಳು.

" ಬರ್ರಿ, ರಂಜನಿಯವರೇ " ಎಂದು ಕರೆದಳು.

ರಂಜನಿಯನ್ನು ಕರೆದುಕೊಂಡು ನಡುಮನೆಯಲ್ಲಿ ಪ್ರೇಮನಂದಿನಿಯು ಕುಳಿತುಕೊಂಡಳು.

" ತಾವು ತಪ್ಪಿ ನಮ್ಮ ಮನೆಗೆ ಬಂದಿರಿ " ಅಂದಳು ಪ್ರೇಮನಂದಿನಿ.

" ಹಾಗೇನೂ ಅಲ್ಲ. ತಮ್ಮ ಮನೆಗೆ ಬರಬೇಕೆಂದು ಬಹಳ ದಿನಗಳಿಂದ ಎಣಿಕೆ ಹಾಕುತ್ತಿದ್ದೆ. ಅದು ಇಂದು ಕೈಗೂಡಿತು. ನನಗೆ ನನ್ನ ಕೆಲಸದಲ್ಲಿ ಬಿಡುವು ಸಿಗುವದು ಬಹಳೇ ದುಸ್ತರ. ಎಂದಾದರೂ ಬಿಡುವು ಸಿಕ್ಕರೆ ವಿದ್ಯಾಚರಣನ ಯೋಗಕ್ಷೇಮವನ್ನು ಕೇಳಲು ಹೋಗುವೆನು."

" ಮಧುಮತಿ-ವಿದ್ಯಾಚರಣರು ಕ್ಷೇಮದಿಂದಿರುವರೋ ? "

" ಈರ್ವರೂ ಚೆನ್ನಾಗಿರುವರು. ವಿದ್ಯಾಚರಣನಿಗೆ ಕುಳಿತು ನಾಲ್ಕು ನಿಮಿಷ ಮಾತನಾಡಲೂ ಕೂಡ ಸವಡು ದೊರೆಯುವದಿಲ್ಲ. ಬಹಳೇ ದುಡಿಯುವ ಪ್ರಾಣಿ. "

" ಕರುಣೆಯಿರುವದರಿಂದಲೇ ಆತನು ರೋಗಿಗಳನ್ನು ಹಚ್ಚಿಕೊಂಡು ದುಡಿಯುವನು. ಮಧುಮತಿಯನ್ನು ಕರೆದುಕೊಂಡು ಬರಬೇಕಾಗಿತ್ತು. "

" ನಾನು ನನ್ನ ಮನೆಯಿಂದಲೇ ಬಂದೆ. ಅದಕ್ಕೆ ಅವಳನ್ನು ಕರೆದುಕೊಂಡು ಬರಲಿಲ್ಲ. "

" ವೇದವತಿಗೆ ಮಕ್ಕಳೆಷ್ಟು ? "

" ಇಬ್ಬರು. "

" ಮಧುಮತಿಯು ವೇದವತಿಯ ಮಗಳೋ ? "

" ವೇದವತಿಯು ಮಧುಮತಿಯನ್ನು ತನ್ನ ಮಗಳೆಂದು ತಿಳಿದು ಕೊಂಡಿದ್ದಳು. "

" ತಿಳಿದುಕೊಂಡಿದ್ದಳು ಅಂದರೆ ಮಧುಮತಿ ಅವಳ ಮಗಳಲ್ಲವೇ?"

" ಅದು ಅಷ್ಟು ಚನ್ನಾಗಿ ನನಗೆ ಗೊತ್ತಿಲ್ಲ. ನನಗೂ ವೇದವತಿಗೂ ಪರಿಚಯವಾದ ಕಾಲಕ್ಕೆ ಮಧುಮತಿಯು ಮೂರು ನಾಲ್ಕು ವರುಷದವ ಳಿದ್ದಂತೆ ತೋರುವದು. ಆವಳಿಂದ ಅದೇ ತೊದಲ್ನುಡಿಗಳು ಬರುತ್ತಿ ದ್ದವು. ಅವಳು ಹಟಮಾಡ. ಳೆಂದು ಅವಳನ್ನು ಆಸ್ಪತ್ರೆಗೆ ಕರೆದು ಕೊಂಡು ಬರುತ್ತಿದ್ದಳು. ಅವಳನ್ನು ಸಂಭಾಳಿಸಲು ಆಸ್ಪತ್ರೆಯಲ್ಲಿಯ ಯಾವದಾದರೊಂದು ಆಳಿಗೆ ಹೇಳುತ್ತಿದ್ದಳು. ನನಗೆ ಅವಳ ಮಗಳೇ ಇರಬೇಕೆಂಬ ಕಲ್ಪನೆ ಇತ್ತು. ಆದರೆ ಮಧುಮತಿಯ ಹೋಲಿಕೆ ವೇದ ವತಿಯಂತೆ ಇದ್ದಿಲ್ಲ " ಎಂದು ರಂಜನಿಯು ನುಡಿದಳು.

" ವೇದವತಿಯನ್ನು ನಾನು ನೋಡಿರುವದಿಲ್ಲ. ಮಧುಮತಿಯು ರೂಪದಲ್ಲಿ ವೇದವತಿಯನ್ನು ಹೋಲುವದಿಲ್ಲವೇ ? " ಎಂದು ಕೇಳಿದಳು ಪ್ರೇಮನಂದಿನಿ.

" ಮಧುಮತಿಯು ರೂಪದಲ್ಲಾಗಲೀ ಗುಣದಲ್ಲಾಗಲೀ ವೇದವತಿ ಯನ್ನುಹೋಲುವದಿಲ್ಲ. ವೇದವತಿಯ ಆಪ್ತರಾರನ್ನಾದರೂ ಅವಳು ಹೋತಿ ರಬಹುದೆಂದು ನಾನು ಅಂದುಕೊಂಡೆ. ಆ ವಿಷಯದಲ್ಲಿ ನಾನು ಹೆಚ್ಚಾಗಿ ವಿಚಾರ ಮಾಡಿ.. ಮಧುಮತಿಯನ್ನು ನೋಡಲು ಯಾರೋ ಒಬ್ಬರು ಮೇಲಿಂದಮೇಲೆ ಬರುತ್ತಿದ್ದರು. ಅವರು ವೇದವತಿಯ ಆಪ್ತರಿರಬಹುದು "

" ಮಧುಮತಿಯನ್ನು ಕಂಡು ಅವರೇನು ಮಾಡುತ್ತಿದ್ದರು. ? "

" ಏನಾದರೂ ತಿಂಡಿ ತಿನಸುಗಳನ್ನು ತಂದುಕೊಡುತ್ತಿದ್ದರು. ಕೆಲವು ನಿಮಿಷ ಅವಳನ್ನು ನೋಡಿಕೊಂಡು ಹೋಗುತ್ತಿದ್ದರು. "

“ ಇದಕ್ಕೆ ವೇದವತಿಯು ಆಕ್ಷೇಪ ತೆಗೆದುಕೊಳ್ಳಲಿಲ್ಲವೇ ? ”

“ ಏನೂ ಆಕ್ಷೇಪ ತೆಗೆದುಕೊಳ್ಳುತ್ತಿದ್ದಿಲ್ಲ. ಮಧುಮತಿಗೆ ತಿಳುವಳಿಕೆ ಬಂದ ಮೇಲೆ ಅವರು ಬರುವದನ್ನು ಬಿಟ್ಟರು. ”

ಪ್ರೇಮನಂದಿನಿಯು ಮೊಗವನ್ನು ನೋಡಿ,

“ ಮಧುಮತಿಯು ರೂಪ ಮಾತ್ರ ನಿಮ್ಮಂತೆಯೇ ಇರುವದು. ಬಾಯಿ, ತುಟಿ, ಕಣ್ಣು, ಬಣ್ಣ ಎಲ್ಲವೂ ನಿಮ್ಮಂತೆಯೇ ಇರುವವು. ಆದರೆ ಮಧುಮತಿಯು ನಿಲುವಿಕೆ ಸ್ವಲ್ಪ ಎತ್ತರ. ಹೀಗೆ ರೂಪದಲ್ಲಿ ಸಾಮ್ಯವಿದ್ದದ್ದು ಕಂಡು ದೇವರ ಸೃಷ್ಟಿ ವಿಚಿತ್ರವೆಂದು ಅನ್ನುವೆನು ” ರಂಜನಿಯು ಮಾತನಾಡಿದಳು.

“ ದೇವರ ಸೃಷ್ಟಿಯ ವೈಚಿತ್ರ್ಯದ ಗುಟ್ಟು ನಮಗೆ ತಿಳಿಯುವ ಬಗೆ ಹೇಗೆ ? ”

ಎಂದು ಪ್ರೇಮನಂದಿನಿಯು ಅಂದಳು.

ರಂಜನಿಯು ತನ್ನ ಸೆರಗಿನಲ್ಲಿ ಕಟ್ಟಿಕೊಂಡಿದ್ದ ಮಂಗಳಸೂತ್ರವನ್ನು ತೆಗೆದು,

“ ಈ ಮಂಗಲ ಸೂತ್ರವನ್ನು ವೇದವತಿಯು ಪ್ರಾಣ ಬಿಡುವ ಕಾಲಕ್ಕೆ ನನ್ನ ಕೈಯಲ್ಲಿ ಕೊಟ್ಟಳು. ಅದನ್ನೇಕೆ ನನ್ನ ಕಡೆಗೆ ಕೊಟ್ಟಳೆಂಬುದನ್ನು ನಾನರಿಯೆ. ಅವಳು ಯಾವಾಗಲೂ ಈ ಮಂಗಲಸೂತ್ರವನ್ನು ಕಟ್ಟಿಕೊಳ್ಳುತ್ತಿದ್ದಿಲ್ಲ. ಅವಳು ವಿಶಿಷ್ಟ ಕಾಲಗಳಲ್ಲಿ ಕಟ್ಟಿಕೊಳ್ಳುತ್ತಿದ್ದಳು, ತಿರುಗಿ ಬಿಚ್ಚಿಡುತ್ತಿದ್ದಳು ” ಎಂದು ಮಾತನಾಡಿದಳು.

“ ಮಂಗಲಸೂತ್ರವನ್ನು ಯಾವಾಗಲೂ ಕಟ್ಟಿಕೊಳ್ಳುತ್ತಿದ್ದಿಲ್ಲವೋ?”

“ ಕಟ್ಟಿಕೊಳ್ಳುತ್ತಿದ್ದಿಲ್ಲ. ”

“ ಹಣೆಯ ಮೇಲೆ ಕುಂಕುಮ. ”

“ ಹಚ್ಚಿಕೊಳ್ಳುತ್ತಿದ್ದಳು. ”

“ ಕುಂಕುಮವನ್ನು ಹಚ್ಚಿಕೊಳ್ಳುತ್ತಿದ್ದರೆ ವೇದವತಿಯನ್ನು ವಿಧವೆಯೆಂದು ಜನರೇಕೆ ತಿಳಿದುಕೊಳ್ಳುತ್ತಿದ್ದರು ? ” ಎಂದು ಪ್ರೇಮನಂದಿನಿಯು ಕೇಳಿದಳು.

“ ಅವಳಿಗೆ ಮಕ್ಕಳಿದ್ದರು, ಕೊರಳಲ್ಲಿ ಮಂಗಲಸೂತ್ರವಿಲ್ಲ; ಕುಂಕು

ಮವು ಗಂಡನಿಂದ ಬಂದದ್ದಲ್ಲವೆಂದು ಕೆಲವರ ಗ್ರಹಿಕೆ. ಹೆಣ್ಣಿಗೆ ಹಣೆಯ ಮೇಲೆ ಕುಂಕುಮದ ಬಟ್ಟು ಜನ್ಮದಿಂದ ಇರುವದು. ಈ ಗ್ರಹಿಕೆಯಿಂದ ಹಣೆಯ ಮೇಲೆ ಕುಂಕುಮದ ಬಟ್ಟು ಇಟ್ಟುಕೊಳ್ಳುತ್ತಿದ್ದಳೋ ಏನೋ ನನಗೆ ಗೊತ್ತಿಲ್ಲ. ಕುಂಕುಮ ಮಾತ್ರ ಯಾವಾಗಲೂ ಹಣೆಯ ಮೇಲಿರುತ್ತಿತ್ತು " ಎಂದು ರಂಜನಿ ನುಡಿದಳು.

ರಂಜನಿಯು ತನ್ನ ಕೈಯಲ್ಲಿದ್ದ ಮಂಗಲಸೂತ್ರವನ್ನು ಪ್ರೇಮನಂದಿನಿಯ ಕೈಯಲ್ಲಿ ಕೊಡಲು ಹೋದಳು. ಪ್ರೇಮನಂದಿನಿಯು ಅದನ್ನು ಇಸಿದುಕೊಳ್ಳಲು ಹಿಂದೆ ಮುಂದೆ ನೋಡಿ,

" ನನ್ನ ಕಡೆಗೇಕೆ ಕೊಡುತ್ತಿರುವಿರಿ " ಎಂದು ಕೇಳಿದಳು.

" ಮೊನ್ನೆ ನಿಮ್ಮ ಮನೆಯಲ್ಲಿ ಮೇಧಾವಿನಿ ವಿದ್ಯಾಚರಣರು ರಾಮನವಮಿಯ ದಿನ ತೊಟ್ಟಿಲದಲ್ಲಿ ರಾಮನನ್ನು ಹಾಕಿದರೆಂದು ನೀವೇ ಹೇಳಿರುವಿರಿ. ವಿದ್ಯಾಚರಣನ ಕೈಯಿಂದ ಮೇಧಾವಿನಿಗೆ ನೀವೇ ಇದನ್ನು ಕಟ್ಟಿಸಬೇಕೆಂಬ ಆಸೆಯಿಂದ ತಮ್ಮ ಕಡೆಗೆ ಇದನ್ನು ತೆಗೆದುಕೊಂಡು ಬಂದಿರುವೆನು. ಈ ಕೆಲಸವು ನಿಮ್ಮಿಂದಲೇ ಆಗಬೇಕೆಂದು ನನ್ನ ಬಲವಾದ ಇಚ್ಛೆ."

" ನನ್ನನ್ನು ಏನೂ ಉತ್ತರ ಕೊಡದಂತೆ ನೀವು ಮಾಡಿದಿರಿ. ನಿರುಪಾಯಳಾದೆ " ಅಂದಳು ಪ್ರೇಮನಂದಿನಿ

ರಂಜನಿಯು ವೇದವತಿಯ ಮಂಗಲಸೂತ್ರವನ್ನು ಪ್ರೇಮನಂದಿನಿಯ ಕೈಯಲ್ಲಿ ಕೊಟ್ಟಳು. ಪ್ರೇಮನಂದಿನಿಯು ತನ್ನ ಸೆರಗಿನಲ್ಲಿ ಅದನ್ನು ಅವಸರದಿಂದ ಕಟ್ಟಿಕೊಂಡು,

" ಇದು ವೇದವತಿಯ ಪವಿತ್ರ ಮಂಗಲಸೂತ್ರ ! " ಎಂದು ನುಡಿದು ರಂಜನಿಯ ಮೊಗವನ್ನು ಅನುಕಂಪದಿಂದ ನೋಡಿದಳು.

ರಂಜನಿಯು ಹೊರಟು ನಿಂತಳು.

" ಇಷ್ಟೇಕೆ ಅವಸರ? ಇನ್ನಿಷ್ಟು ಕುಳಿತುಕೊಂಡು ಹೋದರಾಯಿತು" ಎಂದು ಪ್ರೇಮನಂದಿನಿಯು ಅಂದಳು.

ತನಗೆ ಆಸ್ಪತ್ರೆಗೆ ಹೋಗಲು ತಡವಾಯಿತೆಂದು ಹೇಳಿ ರಂಜನಿಯು ಹೊರಟೇ ಬಿಟ್ಟಳು. ಪ್ರೇಮನಂದಿನಿಯು ಅವಳನ್ನು ಬಾಗಿಲದ ವರೆಗೆ ಕಳುಹಿಸಿದಳು. ಅವಳನ್ನು ಕಳುಹಿಸಿ ಹದಿನೈದು ನಿಮಿಷಗಳಾಗಿರಬ

ಹುದು, ಅಷ್ಟರಲ್ಲಿಯೇ ಮಧುಮತಿ ಮೇಧಾವಿನಿಯರು ಅಂದವಾದ ಉಡಿಗೆ ಗಳನ್ನು ತೊಟ್ಟುಕೊಂಡು ಬಂದರು.

ಆ ಆಕರ್ಷಕ ಉಡಿಗೆ ತೊಡಿಗೆಯಿಂದ ಮಧುಮತಿಯು ಇಂದು ಬಹಳೇ ಚೆಲುವೆಯಾಗಿ ಕಾಣುತ್ತಿದ್ದಳು.

ಮಧುಮತಿಯು ಮೇಧಾವಿನಿಯನ್ನು ಕೈ ಜಗ್ಗುತ್ತ ಪದ್ಮನಾಭನ ಕೋಣೆಯಲ್ಲಿ ಹೋದಳು. ವಿರಾಮ ಕುರ್ಚಿಯ ಮೇಲೆ ಒರಗಿದ್ದ ಪದ್ಮ–ನಾಭನು,

"ಬನ್ನಿ ಒಳಗೆ ಬನ್ನಿ," ಎಂದು ಕರೆದನು.

"ನಿಮ್ಮ ಪ್ರಕೃತಿಯು ಹೇಗಿರುವದು ?" ಮಧುಮತಿ ಕೇಳಿದಳು.

"ಸ್ವಲ್ಪ ನೆಟ್ಟಗೆ."

"ಬಹಳ ವಿಚಾರ ಮಾಡಬೇಡಿ; ರಕ್ತದ ಒತ್ತಡ ಹೆಚ್ಚಾಗುವದು."

"ನಾನೇನು ವಿಚಾರ ಮಾಡಬೇಕು ?"

"ಏನಾದರೊಂದು ಕಲ್ಪಿಸಿಕೊಂಡು" ಮೇಧಾವಿನಿ ನುಡಿದಳು.

"ಕಲ್ಪಿಸಿಕೊಳ್ಳಲಿಕ್ಕೂ ವಿಷಯವಿಲ್ಲ."

"ಕಲ್ಪನೆಗೆ ವಿಷಯ ಬೇಕಾಗಿಲ್ಲ. ಮನವೊಂದಿದ್ದರೆ ಸಾಕು. ಮನವು ಕಲ್ಪನೆಗೆ ಎಲ್ಲವನ್ನೂ ಒದಗಿಸಿ ಕೊಡುವದು. ಮನವು ಕುಂಠಿತವಾದರೆ ಕಲ್ಪನೆಯು ಕುಂಠಿತವಾಗುವದು" ನುಡಿದಳು ಮಧುಮತಿ.

"ಮನವನ್ನು ಹಿಡಿಯುವದು ಕಷ್ಟ."

"ತಾವು ಕಲಿತವರು, ತಮಗೆ ಕಷ್ಟವೆನಿಸಬಾರದು" ಅಂದಳು ಮೇಧಾವಿನಿ.

"ಅಂದು ಕಾಲೇಜದಲ್ಲಿ ತಾವು ಕತೆ ಹೇಳಿದ ಮೇಲೆ ತಮ್ಮ ಮನೋವೃತ್ತಿಯಲ್ಲಿ ಒಂದು ವಿಲಕ್ಷಣ ಬದಲಾವಣೆಯಾಯಿತು. ತಮ್ಮ ಮುಖದ ಮೇಲೆ ಒಂದು ಗಂಭೀರ ಕಳೆ ಬಂದಿತು." ಎಂದು ಮಧುಮತಿಯು ನುಡಿದಳು.

"ಹೌದು. ಮನೋವೃತ್ತಿಯಲ್ಲಿ ಬದಲಾವಣೆಯಾಯಿತು. ಜೀವನದ ದೃಷ್ಟಿಕೋನದಲ್ಲಿ ಸಂಸಾರವು ನಿಸ್ಸಾರವಾಯಿತು" ಪದ್ಮನಾಭ ಅಂದನು.

ನಡುಮನೆಯಲ್ಲಿ ಪ್ರೇಮನಂದಿನಿಯು ಹಾಗೂ ರಂಜನಿಯು ಮಾತ ನಾಡುತ್ತಿದ್ದುದನ್ನು ಪದ್ಮನಾಭನು ಅರೆನಿದ್ರೆಯಲ್ಲಿ ಕೇಳಿದ್ದನು. ಅವರ ಮಾತುಗಳಲ್ಲಿಯ ಕೆಲವು ಶಬ್ದಗಳು ಅಸ್ಪಷ್ಟವಾಗಿ ಕೇಳಿಸಿದ್ದವು. ರಂಜ ನಿಯು ಹೋದ ಮೇಲೆ ಮಧುಮತಿ-ಮೇಧಾವಿನಿಯರು ಬರುವ ಮುಂದೆ ಅದೇ ಅರೆನಿದ್ರೆಯಿಂದ ಎದ್ದಿದ್ದನು. ಆತ ಅವರ ಸಂಗಡ ಮಾತನಾಡಿ ದರೂ ಅವನ ತಲೆಯಲ್ಲಿ ತಾನು ಕೇಳಿದ ಕೆಲವು ಅಸ್ಪಷ್ಟ ಶಬ್ದಗಳು ವೇಗ ದಿಂದ ಚಕ್ರಹೊಡೆಯಹತ್ತಿದ್ದವು. ಆ ಚಕ್ರದ ಆಘಾತದಿಂದ ಪದ್ಮನಾ ಭನು ಕೆಲವು ಸಾರೆ ಅಸಂಬದ್ಧ ಉತ್ತರವನ್ನು ಕೊಡುತ್ತಿದ್ದನು.

" ನಿಮ್ಮಿಬ್ಬರ ಭೆಟ್ಟಿಯು ಅಪರೂಪವಾಯಿತು. " ಎಂದು ಪ್ರೇಮನಂ ದಿನಿಯು ಪದ್ಮನಾಭನ ಕೋಣೆಯ ಹತ್ತಿರ ನಿಂತು ಅವರಿಗೆ ನುಡಿದಳು.

" ಅಮ್ಮಾ, ನಿನ್ನನ್ನು ಕಾಣದೆ ಎರಡು ದಿನಗಳಾದವು. "

" ಮಧುಮತಿಯನ್ನು ಮಾತೃವಾತ್ಸಲ್ಯದಿಂದ ನೀವು ಕಾಣುತ್ತಿರು ವಿರಿ. ಅದಕ್ಕೆ ತಮಗೆ ಹೀಗೆ ಅನಿಸುವದು " ಎಂದು ಮೇಧಾವಿನಿಯು ಅಂದಳು.

" ಅವಳನ್ನು ಕಂಡರೆ ನನ್ನಲ್ಲಿ ಒಂದು ತರಹದ ಮಮತೆ ಹುಟ್ಟು ವದು. "

" ನಿನ್ನನ್ನು ಕಂಡರೆ ನನಗೆ ತಾಯಿಯನ್ನು ಕಂಡಂತೆ ಅನಿಸುವದು. ನಿನ್ನ ಬದಿಯಲ್ಲಿ ಕುಳಿತರೆ ಅಮ್ಮ ವೇದವತಿಯನ್ನು ಮರೆಯುವೆನು " ಮಧುಮತಿ ನುಡಿದಳು.

" ಮಗು, ಅಂದು ರಾಮಜನನದ ದಿವಸ ರಾಮಮಂದಿರದಲ್ಲಿ ಹಾಡಿದ ಭಾವಗೀತೆಯನ್ನು ಯಾರಿಂದ ಕಲಿತೆ " ಎಂದು ಪ್ರೇಮನಂದಿನಿಯು ಕೇಳಿದಳು.

" ಅಮ್ಮಾ, ನೀನು ಹಾಡಿದ ಭಕ್ತಿಗೀತೆಯನ್ನು ಯಾರಿಂದ ಕಲಿತೆ?"

" ವಿಜಯಪುರದ ಶ್ರೀನಿವಾಸನೆಂಬ ಕವಿಯ ಗೀತೆಯನ್ನು ಓದಿ ಕಲಿತೆ.

" ನಮ್ಮ ಮನೆಯ ಹತ್ತರ ದಿನಾಲು ಒಬ್ಬ ಹುಚ್ಚನು ಹೋಗುತ್ತಿ ರುವನು. ಆತ ಅಣ್ಣನ ಆಸ್ಪತ್ರೆಗೂ ಹೋಗುವನು. ಅವನ ವೇಷವನ್ನು

ಕಂಡರೆ ಎಲ್ಲರಿಗೂ ನಗೆ ಬರುವದು. ನಮ್ಮ ಮನೆಯ ಮುಂದೆ ಹಾಯ್ದು ಹೋಗುತ್ತಿರುವಾಗ್ಗೆ ಒಮ್ಮೊಮ್ಮೆ ನಾನು ಅವನನ್ನು ಕರೆಯುತ್ತಿದ್ದೆನು. ಎಷ್ಟು ಕರೆದರೂ ನನ್ನನ್ನು ನೋಡದೆ ತನ್ನ ಹಾಡಿನ ಗುಂಗಿನಲ್ಲಿಯೇ ಹೋಗುತ್ತಿದ್ದನು. ಮತ್ತೆ ಮತ್ತೆ ದನಿ ತೆಗೆದು 'ಬಹು ದೂರ' ಬಹು ದೂರ, ಎಂದು ಹಾಡುತ್ತಿದ್ದನು. ಹೀಗೆ ಎಷ್ಟೋ ಸಾರೆ ಕರೆದರೂ ಆತ ನಮ್ಮ ಮನೆಯ ಕಡೆಗೆ ಬರಲಿಲ್ಲ. ಒಂದು ದಿನ ತಾನಾಗಿಯೇ ಬಂದನು. ಅವನು ಬರುವದನ್ನು ಕಂಡು ಚಂದ್ರಿಯು ಓಡುತ್ತ ಬಂದು ಒಳಗಿದ್ದ ನನಗೆ ನಿನ್ನ ಜೋಗಿಯು ಬಂದಿರುವನೆಂದು ಹೇಳಿದಳು. ಅವನಿಗೆ ಆ ಗೀತೆಯನ್ನು ಹಾಡಲು ಹೇಳಿದೆ. ಆತ ಮನಸಿಕರಾಯ್ತು, ಏನೋ ಹಾಡಿದ. ಅದಕ್ಕೆ ಮೆಚ್ಚಿ ನಾನು ಒಂದು ರೂಪಾಯಿಯನ್ನು ಕೊಡಲು ಹೋದೆ. ಅವನು ಅದನ್ನು ತೆಗೆದುಕೊಂಡು ದೂರದಲ್ಲಿ ಒಗೆದು ಅದರ ಮೇಲೆ ಮಣ್ಣು ತೂರಿ ನನ್ನೊಡನೆ ಮಾತನಾಡದೆ ಹೋಗಿ ಬಿಟ್ಟನು. ಮುಂದೆ ಎಂದಾದರೂ ನಾನು ಮನೆಯ ಕಟ್ಟೆಯ ಮೇಲೆ ನಿಂತದ್ದು ಕಂಡರೆ 'ಬಹುದೂರ, ಬಹುದೂರ' ಗೀತೆಯನ್ನು ಹಾಡಿ ಬೀದಿಯ ಸಮೀಪದಲ್ಲಿರುವ ಯಾವುದಾದರೊಂದು ಗಿಡಕ್ಕೆ ತನ್ನ ಹೆಗಲ ಮೇಲಿದ್ದ ಕೊಡಲಿಯಿಂದ ಕಚ್ಚು ಹಾಕುತ್ತಿದ್ದನು.

ಅವನ ವೇಷವೋ ? ತಲೆಯ ಮೇಲೆ ಒಂದು ಹರಕು ಕರೇ ಟೊಪ್ಪಿಗೆ. ಮೈಯಲ್ಲಿ ಒಂದು ಹಳೇ ಹರಕು ಕೋಟು; ಆ ಕೋಟಿಗೆ ಗುಂಡಿಗಳಿಲ್ಲ. ತೊಟ್ಟಿರುವದು ಒಂದು ಹರಕು ಚೊಣ್ಣ. ಬಲಗಿವಿಯಲ್ಲಿ ಕೆಂಪು ದಾಸಾಳದ ಹೂವನ್ನು ಇಟ್ಟುಕೊಂಡಿರುತ್ತಿದ್ದನು. ಹೆಗಲ ಮೇಲಿದ್ದ ಕೊಡಲಿಗೆ ಯಾವಾಗಲೂ ಕೆಂಪು ಹೂವಿನ ಸಣ್ಣ ಮಾಲೆಯನ್ನು ಹಾಕುತ್ತಿದ್ದನು. ಅಣ್ಣನಿಗೆ ಅವನ ಪರಿಚಯ ಹೆಚ್ಚಾಗಿರುವದೆಂದು ತೋರುವನು. ಅಣ್ಣನು ಬೀದಿಯಲ್ಲಿ ಭೆಟ್ಟಿಯಾದರೆ 'ರಾಮ ! ರಾಮ !!' ಎಂದು ನಮಸ್ಕಾರ ಮಾಡಿ ಹೆಗಲ ಮೇಲಿನ ಕೊಡಲಿಯನ್ನು ಬಗಲಲ್ಲಿ ಹಿಡಿದುಕೊಂಡು ಹೋಗುವನು. ಆ ಹಾಡು ಕಲಿತದ್ದು ಅವನಿಂದ" ಎಂದು ಮಧುಮತಿ ಹೇಳಿದಳು.

ಪ್ರೇಮನಂದಿನಿಯ ಸೆರಗಿನಲ್ಲಿಯ ಮಂಗಳಸೂತ್ರ ಕೆಳಗೆ ಬಿದ್ದಿತು.

ಅದನ್ನು ಅವಳು ಚೆನ್ನಾಗಿ ಸೆರಗಿನಲ್ಲಿ ಕಟ್ಟಿಕೊಂಡಿದ್ದಿಲ್ಲ. ಪದ್ಮನಾಭನು ಆ ಬಿದ್ದ ಮಂಗಳಸೂತ್ರವನ್ನು ನೋಡಿದನು.

" ನಂದಿನೀ, ಅದೇನು ಬಿದ್ದದ್ದು ? " ಎಂದು ಕೇಳಿದನು.

ಕೆಳಗೆ ಬಿದ್ದ ಮಂಗಳಸೂತ್ರವನ್ನು ಎತ್ತಿಕೊಂಡು,

' ಮಂಗಲಸೂತ್ರ ' ಎಂದು ಹೇಳಿದಳು.

" ಯಾರದು ? " ಎಂದು ಕೇಳಿದನು ಪದ್ಮನಾಭ.

" ಅದು ವೇದವತಿಯ ಮಂಗಲಸೂತ್ರ. ರಜನಿಯು ಇದೇ ತಂದು ಕೊಟ್ಟು ಹೋದಳು. "

" ವೇದವತಿಯ ಮಂಗಳಸೂತ್ರವೇ ! ನೋಡೋಣ? "

ಮಧುಮತಿಯು ಮಂಗಲಸೂತ್ರವನ್ನು ಇಸಿದುಕೊಂಡು ಪದ್ಮನಾಭನ ಕೈಯಲ್ಲಿ ಕೊಟ್ಟಳು. ಆ ಸೂತ್ರದಲ್ಲಿಯ ಕರೇಮಣಿ, ಬಂಗಾರದ ಗುಂಡು, ಎರಡು ಬಂಗಾರದ ಮಂಗಲ ಸೂತ್ರಗಳು— ಎಲ್ಲವನ್ನೂ ಸೂಕ್ಷ್ಮವಾಗಿ ನಿರೀಕ್ಷಿಸಿದನು. ಮಂಗಲಸೂತ್ರವನ್ನು ನೋಡಿ ಮೈ ಬೆವರಹತ್ತಿತು.

" ವೇದವತಿ, ನಾನು ನಿನಗೆ ಕಟ್ಟಿದ ಮಂಗಲಸೂತ್ರ " ಎಂದು ಜೀರಿ ಕುಳಿತಲ್ಲಿಂದ ಕೆಳಗೆ ಧೊಪ್ಪನೆ ಬಿದ್ದನು.

# ೧೭

ಬದರೀನಾರಾಯಣನ ಆಸ್ಪತ್ರೆಯಲ್ಲಿ ತುಂಬಾ ಗಡಿಬಿಡಿ. ಪದ್ಮನಾಭನನ್ನು ಕೋಣೆಯಲ್ಲಿ ಒಂದು ಮಂಚದ ಮೇಲೆ ಮಲಗಿಸಿದ್ದರು. ವಿದ್ಯಾಚರಣನು ಆತನಿಗೆ ಇಂಜಕ್ಶನ್ ಕೊಟ್ಟನು. ನಾಲ್ಕಾರು ಜನ ಡಾಕ್ಟರರು ವಿದ್ಯಾಚರಣನಿಗೆ ಸಹಾಯ ಮಾಡುತ್ತಿದ್ದರು.

ಕೋಣೆಯ ಹೊರಗೆ ಪ್ರೇಮನಂದಿನಿ, ಮಧುಮತಿ, ಮೇಧಾವಿನಿ, ಗಿರಿಧಾರಿ ಎಲ್ಲರೂ ಬಾಯಿಯಲ್ಲಿ ಬೆಕ್ಕೆಕಾಳು ಹಾಕಿಕೊಂಡು ಕುಳಿತಿದ್ದರು. ಯಾರನ್ನೂ ಕೋಣೆಯೊಳಗೆ ಬಿಟ್ಟಿದ್ದಿಲ್ಲ. ಮಧುಮತಿಯು ಕೋಣೆಯ ಬಾಗಿಲ ಸಂದಿಯೊಳಗಿಂದ ನೋಡುತ್ತ ನಿಂತಿದ್ದಳು. ' ಪದ್ಮನಾಭನು ಕಣ್ಣು ತೆರೆದನು, ಕಾಲನ್ನು ಅಲ್ಲಾಡಿಸಿದನು ' ಎಂದು ಹೊರಗೆ ನಿಂತ ಜನರಿಗೆ ಮಧುಮತಿ ನೋಡಿ ಬಂದು ಹೇಳುತ್ತಿದ್ದಳು. ಪ್ರೇಮನಂದಿನಿಯ ಕಣ್ಣುಗಳಿಂದ ನೀರು ಧಾರಾಕಾರವಾಗಿ ಹರಿಯುತ್ತಿತ್ತು. ಪದ್ಮನಾಭನಿಗೆ ನೆಟ್ಟಗಾಗಬೇಕೆಂದು ಸಾಸಿರ ನಾಮಗಳಿಂದ ದೇವರನ್ನು ಭಜಿಸುತ್ತ ಬೇಡಿಕೊಳ್ಳುತ್ತಿದ್ದಳು. ಖಿನ್ನಮನಸ್ಕನಾಗಿ ಗಿರಿಧಾರಿಯು ಕೋಣೆಯ ಹೊರಗೆ ಅಡ್ಡಾಡುತ್ತಿದ್ದನು. ಅಷ್ಟರಲ್ಲಿ ಮೈತ್ರೇಯಿ ಹಾಗೂ ಕುಮಾರಿಲಭಟ್ಟರು ಆಸ್ಪತ್ರೆಗೆ ಬಂದರು. ಅವರು ದೂರದಲ್ಲಿಯೇ ನಿರೀಕ್ಷಿಸುತ್ತ ನಿಂತರು.

ಅಲ್ಲಿಯ ದಾಯಿಯು ಕೋಣೆಯ ಹೊರಗಿದ್ದ ಜನರನ್ನು ಬದಿಯಲ್ಲಿಯ ಮತ್ತೊಂದು ಕೋಣೆಗೆ ಕರೆದುಕೊಂಡು ಕುಳ್ಳರಿಸಿದಳು. ಪ್ರೇಮನಂದಿನಿಯು ಮಾತ್ರ ಕೋಣೆಯಲ್ಲಿ ಕುಳಿತುಕೊಳ್ಳದೆ ಕೋಣೆಯಿಂದ ಕೋಣೆಗೆ ಅಲೆಯುತ್ತಿದ್ದಳು. ಏನೋ ಒಂದು ತರಹದ ಅಂಜಿಕೆಯಿಂದ ಅವಳ ಮೊಗವು ಬೆಳ್ಳಗಾಗಿ ಹೋಗಿತ್ತು. ಅವಳ ಕೆಂಪಾದ ತುಟಿಗಳು ಒಣಗಿ ಕಪ್ಪಾಗಿ ಹೋಗಿದ್ದವು. ಗಂಟಲವು ಆರಿ ಉಗುಳು ನುಂಗಲೂ ಕೂಡ ಬರುವಂತೆ ಇದ್ದಿಲ್ಲ. ನಿಂತಲ್ಲಿಯೇ ಕಾಲುಗಳು ಥರಗುಡುತ್ತಿದ್ದವು.

ಹದಿನೈದು ನಿಮಿಷಗಳಾದವು. ಒಳಗಿದ್ದ ಒಬ್ಬ ಡಾಕ್ಟರನೂ ಹೊರಗೆ ಬರಲಿಲ್ಲ. ಪದ್ಮನಾಭನು ಕುಸಿಯಹತ್ತಿದನು. ದೇಹದಲ್ಲಿಯ ರಕ್ತವೆಲ್ಲ ಬೆವರಾಗಿ ಹೋಗಹತ್ತಿತು. ಸಮುನ್ವಯ ರಕ್ತಾಭಿಸರಣ ಮಾಡಬೇಕೆಂದು

ವಿದ್ಯಾಚರಣನು ನಿಶ್ಚಯಿಸಿದನು. ಆತನು ಹೊರಗೆ ಬಂದಾಗ ಮೊಗದ ಮೇಲೆ ಅಷ್ಟು ಆಶೆಯು ಕಳೆಯಿದ್ದಿಲ್ಲ. ಪ್ರೇಮನಂದಿನಿಯನ್ನು ಕರೆದು,

" ನಿಮ್ಮ ದೇಹದಲ್ಲಿಯ ರಕ್ತವನ್ನು ಕೊಡುವಿರೋ " ಎಂದು ವಿದ್ಯಾಚರಣ ಕೇಳಿದನು.

" ನಾನು ರಕ್ತ ಕೊಡುವೆ. ಅವರನ್ನು ಬದುಕಿಸಿರಿ. "

ಅವಳಿಗೆ ಒಳಗೆ ಬರಲಿಕ್ಕೆ ಹೇಳಿದನು.

ಬದಿಯಲ್ಲಿ ನಿಂತಿದ್ದ ಮಧುಮತಿಯ ಮೊಗವನ್ನು ನೋಡಿ ಅವಳ ಕೆನ್ನೆಯ ಮೇಲೆ ಮುದ್ದಿಟ್ಟು 'ಮಗು, ಹೋಗಿ ಬರುವೆ " ಎಂದು ನುಡಿದು ಒಳಗೆ ಹೋದಳು. ಮುದ್ದಿಡುವ ಕಾಲಕ್ಕೆ ಮಧುಮತಿಯ ಕೆನ್ನೆಯ ಮೇಲೆ ಕಣ್ಣೀರಿನ ಹನಿಗಳು ಬಿದ್ದವು. ಅವು ಹರಿದು ಮಧುಮತಿಯ ತುಟಿಯನ್ನು ತಟ್ಟಿದವು.

ಪ್ರೇಮನಂದಿನಿಯು ಕೋಣೆಯಲ್ಲಿ ಹೋದಳು. ತನ್ನ ದೇಹದಲ್ಲಿಯ ರಕ್ತವನ್ನು ಪದ್ಮನಾಭನನ್ನು ಬದುಕಿಸಬೇಕೆಂದು ಧಾರೆಯೆರೆದಳು.

ವಿಶ್ವ ಪ್ರಯತ್ನ ಪಟ್ಟರೂ ಪದ್ಮನಾಭನು ಚೇತರಿಸಿಕೊಳ್ಳಲಿಲ್ಲ.

ಪ್ರೇಮನಂದಿನಿಯ ರಕ್ತಪ್ರವಾಹ ಪದ್ಮನಾಭನ ದೇಹದಲ್ಲಿ ಸೇರಿತು. ಏನೂ ಪ್ರಯೋಜನವಾಗಲಿಲ್ಲ.

ಪದ್ಮನಾಭನು ಕುಸಿಯುತ್ತಿರುವ ಸ್ಥಿತಿಯನ್ನು ಕಂಡು ಪ್ರೇಮನಂದಿನಿಯ ಎದೆಯು ಬಹು ವೇಗದಿಂದ ಬಡೆಯಹತ್ತಿತು.

" ಡಾಕ್ಟರ, ಅವರು ಹೊರಟರು. ನಾನೂ ಹೊರಡುವೆ " ಎಂದಳು ಪ್ರೇಮನಂದಿನಿ.

" ನೀರು " ಎಂದು ಪದ್ಮನಾಭನುಸುರಿದನು.

ವಿದ್ಯಾಚರಣನು ಪದ್ಮನಾಭನ ಬಾಯಿಯಲ್ಲಿ ಎರಡು ಹನಿ ನೀರು ಹಾಕಿದನು.

ದೂರದಿಂದ ಮಧುಮತಿಯ ಜೋಗಿಯು ಹಾಡುತ್ತ ಬರಹತ್ತಿದ್ದನು.

ಪದ್ಮನಾಭನು ಜೀವನ ಯಾತ್ರೆಯನ್ನು ಮುಗಿಸಿದನು.

ಪ್ರೇಮನಂದಿನಿಯೂ ಅವನಿಗೆ ಸಹಾಯಕಳಾಗಿ ಹೊರಟಳು.

ಜೋಗಿಯು: —

ಬಹು ದೂರ ಬಹು ದೂರ
ಜೀವನದ ದಾರಿ ||ಪ||

ಹಿಂದೆ ನೋಡದ ದಾರಿ
ಮುಂದೆ ಕಾಣದ ದಾರಿ
ಬಹುದೂರ ಬಹುದೂರ
ಜೀವನದ ದಾರಿ ||೧||

ಮಂಜು ಮುಸುಕಿದ ದಾರಿ
ನಂಜು ನೀಡುವ ದಾರಿ
ಬಹುದೂರ ಬಹುದೂರ
ಜೀವನದ ದಾರಿ ||೨||

ಮುಳ್ಳು ಚುಚ್ಚುವ ದಾರಿ
ಕಳ್ಳ ಹೊಡೆಯುವ ದಾರಿ
ಬಹುದೂರ ಬಹುದೂರ
ಜೀವನದ ದಾರಿ ||೩||

ಆದಿ ಅರಿಯದ ದಾರಿ
ತುದಿಯು ನೋಡದ ದಾರಿ
ಬಹುದೂರ ಬಹುದೂರ
ಜೀವನದ ದಾರಿ ||೪||

ಹುಟ್ಟು ಇಲ್ಲದ ದಾರಿ
ಗುಟ್ಟು ತೋರದ ದಾರಿ
ಬಹುದೂರ ಬಹುದೂರ
ಜೀವನದ ದಾರಿ ||೫||

ಮರ್ಮ ತೋರದ ದಾರಿ
ಕರ್ಮಕೂಡಿದ ದಾರಿ
ಬಹುದೂರ ಬಹುದೂರ
ಜೀವನದ ದಾರಿ ||೬||

ನೊಂದ ಜೀವದ ದಾರಿ
ಬೆಂದ ಕುರುಡನ ದಾರಿ
ಬಹುದೂರ ಬಹುದೂರ
ಜೀವನದ ದಾರಿ ||೭||

ತ್ರಾಣ ಹಿಂಡುವ ದಾರಿ
ಪ್ರಾಣ ಹೀರುವ ದಾರಿ
ಬಹುದೂರ ಬಹುದೂರ
ಜೀವನದ ದಾರಿ ||೮||

ಕಣ್ಣು ಮುಚ್ಚುವ ದಾರಿ
ಮಣ್ಣು ತೂರುವ ದಾರಿ
ಬಹುದೂರ ಬಹುದೂರ
ಜೀವನದ ದಾರಿ ||೯||

ಮುಂದೆ ಹೋದರು ಕೆಲರು
ಹಿಂದೆ ಬರುವರು ಕೆಲರು
ಬಹುದೂರ ಬಹುದೂರ
ಜೀವನದ ದಾರಿ ||೧೦||

ಹಾಡಿನ ಗುಂಗಿನಲ್ಲಿಯೇ ಜೋಗಿಯು ತನ್ನ ಹೆಗಲಮೇಲಿನ ಕೊಡಲಿಯಿಂದ ಬದಿಯಲ್ಲಿದ್ದ ಅಶ್ವತ್ಥ ವೃಕ್ಷಕ್ಕೆ ಎರಡು ಕಚ್ಚುಗಳನ್ನು ಹಾಕಿ ಮುಂದೆ ಸಾಗಿದನು.



# ಒಪ್ಪೋಲೆ

ಪುಟ ೮—೭ನೇ ಸಾಲಿನ ನಂತರ ಈ ಅವತರಣಿಕೆ ಬರಬೇಕು :

" ಮನೆಯಲ್ಲಿ ಯಾರಿಗಾದರೂ ಕಾಯಿಲೆ ಆಗಿರಬೇಕು. ಡಾಕ್ಟರರನ್ನು ಕರೆಯಲು ಬರುತ್ತಿರಬಹುದು. "

* * *

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೨೬ | ೧೭ | ಸುಳ್ಳಿನಲ್ಲ | ಸುಳ್ಳಿನಲ್ಲಿ |
| ೫೬ | ೨೪ | ದೇವರು ಬುದ್ಧಿ | ದೇವರು ಏನು ಬುದ್ಧಿ |
| ೧೦೧ | ೪ | ಹುಡುಕಿದೆವು | ಹುಡುಕಿದರು |
| ೧೪೬ | ೨೭ | ತಾನುಸವೃತ್ತಿ | ತಾಮಸವೃತ್ತಿ |
| ೧೫೪ | ೧೫ | ಹೋಗಿದ್ದಳು | ಹೋಗುತ್ತಿದ್ದಳು |
| ೧೭೦ | ೧೪ | ವಿದ್ಯಾಪರವು | ವಿದ್ಯಾಪರವೆ |
| ೧೭೭ | ೧ | ಉಪನ್ಯಾಸ | ಉಪದ್ವ್ಯಾಪ |
| ೧೮೦ | ೨೭ | ಶಿಷ್ಯ | ಶಿಷ್ಟ |
| ೧೮೨ | ೧ | ಜತೆಯಲ್ಲಿ | ಜಡೆಯಲ್ಲಿ |
| ೨೨೧ | ೧೧ | ಮುಖ | ಮುಖ್ಯ |
| ೨೨೫ | ೨೫ | ಹೊಟೆಯಿಂದ | ಹೊಟ್ಟೆಯಿಂದ |
| ೨೩೫ | ೨೬ | ಸಾಕ್ಷಸ | ರಾಕ್ಷಸ |
| ೨೪೫ | ೨೪ | ತೋರುವನು | ತೋರುವದು |